# ಮುಂಡಕೋಪನಿಷತ್ತು




**MUNDAKOPANISHATH**

**(Kannada)**

# ಮುಂಡಕೋಪನಿಷತ್ತು

ವ್ಯಾಖ್ಯಾನ:

ಸ್ವಾಮಿ ಚಿನ್ಮಯಾನಂದ

ಕನ್ನಡಕ್ಕೆ ಅನುವಾದಿಸಿದವರು:

ಸಿ.ಎಲ್. ಪುರುಷೋತ್ತಮರಾವ್

ಮತ್ತು

ಬಿ.ಎಸ್. ವಿಶ್ವನಾಥರಾವ್

ಪ್ರಕಾಶಕರು:

ಸೆಂಟ್ರಲ್ ಚಿನ್ಮಯಾ ಮಿಷನ್ ಟ್ರಸ್ಟ್

(ಕನ್ನಡ) ಪ್ರಕಟಣಾ ವಿಭಾಗ

ದೀನಬಂಧು ದೇವಸ್ಥಾನ, ಇಂದಿರಾನಗರ,

ಬೆಂಗಳೂರು - ೫೬೦ ೦೩೮

ಮುಂಡಕೋಪನಿಷತ್ತು

ಪ್ರಥಮ ಮುದ್ರಣ : ಮೇ · 1996 (3,000)



ರೂ - 25

ಪ್ರಕಾಶಕರು ಸೆಂಟ್ರಲ್ ಚಿನ್ಮಯ ಮಿಷನ್ ಟ್ರಸ್ಟ್
ಕನ್ನಡ ಪ್ರಕಟಣಾ ವಿಭಾಗ
ದೀನಬಂಧು ದೇವಸ್ಥಾನ, ಇಂದಿರಾನಗರ
ಬೆಂಗಳೂರು, 560 038 , Ph: 528 1756, 528 2207

ಡಿ.ಟಿ.ಪಿ.
ಕಂಪೋಸಿಂಗ್ ಲೇಜರ್ ಲೈನ್ ಗ್ರಾಫಿಕ್ಸ್, ಬೆಂಗಳೂರು-53
Ph: 220 4008

ಮುದ್ರಕರು ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
12/13, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು -560 004

First Print : May, 1996 (3,000)



Rs. **25**

**Title** : ***Mundakopanishath (Kannada)***

**D.T.P.**
**Composing** : ***Laser Line Graphics***, Bangalore -560 053,
Ph. 220 4008

**Printed by** : ***Brindavan Printers and Publishers Pvt. Ltd.***
12/13, Lalbagh Fort Road, Bangalore 4

**Publishers:** ***Central Chinmaya Mission Trust***
Kannada Publications Division
Deenabandhu Devasthanam
C.M.H. Road, Indiranagar
Bangalore - 560 038. Ph: 528 1756, 528 2207

# ಅವತರಣಿಕೆ—'ಶಿವೋऽಹಂ'

ಈ ಗ್ರಂಥವನ್ನು ಆಧ್ಯಾತ್ಮ ಸಾಧಕವೃಂದದ ಮುಂದೆ ಮಂಡಿಸಲು ನನಗೆ ಅತ್ಯಂತ ಆನಂದವಾಗುತ್ತದೆ. ಅದಕ್ಕೆ ಕಾರಣ ಗ್ರಂಥದ ವಿಷಯ ಮಾತ್ರವಲ್ಲ. ಈ ಗ್ರಂಥದ ಸಂಕಲನವೇ ಪ್ರೇಮ ಪರಿಶ್ರಮದ ಪ್ರತೀಕವಾಗಿರುವುದರಿಂದಲೂ ಹೌದು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಹೊಸದಾಗಿ ಕಾಲಿಟ್ಟ ಕೆಲವು ಯುವಕರು ತಮ್ಮ ಹುಮ್ಮಸ್ಸಿನಲ್ಲಿ ಅತ್ಯಂತ ಶ್ರದ್ಧೆಯಿಂದ ಜ್ಞಾನಯಜ್ಞದ ಸಂದರ್ಭದಲ್ಲಿ ಪ್ರತಿಯೊಂದು ಮಂತ್ರಕ್ಕೂ ಕೊಟ್ಟ ವ್ಯಾಖ್ಯಾನವನ್ನು ಬಹಳ ಜಾಗರೂಕತೆಯಿಂದ ಬರೆದಿಟ್ಟುಕೊಂಡು ವಿಮರ್ಶಾತ್ಮಕವಾಗಿ ಪರಿಶೀಲಿಸಿ ಅದನ್ನು ಸಂಕಲನಮಾಡಿ ಈ ಗ್ರಂಥರೂಪದಲ್ಲಿ ಹೊರತಂದಿದ್ದಾರೆ.

ಜ್ಞಾನಯಜ್ಞದ ಕಲ್ಪನೆಯೇ ಪ್ರೇಮಭಾವದಿಂದ ಪ್ರೇರಿತವಾದದ್ದು. ಅದರ ವಿವರಗಳೂ ಪ್ರೇಮ, ಸೌಹಾರ್ದತೆಗಳಿಂದ ನಿರ್ಧಾರವಾಯಿತು. ಯಜ್ಞದ ವಾತಾವರಣವೇ ಪ್ರೇಮಭರಿತವಾಗಿತ್ತು. ಅದು ಬಯಸಿದ್ದೂ ಪ್ರೇಮ ಭಾವವನ್ನೇ. ಅಲ್ಲಿ ಭಾಗವಹಿಸಿ ದುಡಿದ ಸ್ವಯಂ ಸೇವಕರು ನೀಡಿದ್ದೂ ಪ್ರೇಮದ ಸಹಕಾರ. ಹೀಗಾಗಿ ಈ ಗ್ರಂಥದ ಒಂದೊಂದು ಸಾಲೂ ಪ್ರೇಮಭಾವದಿಂದ, ಆಧ್ಯಾತ್ಮಿಕ ಸ್ಫೂರ್ತಿಯಿಂದ, ಪರಿಶುದ್ಧ ಮನಸ್ಸಿನಿಂದ, ಧರ್ಮಶ್ರದ್ಧೆಯಿಂದ ಹೊರಬಂದ ನಿರೂಪಣೆ. ಹುಮ್ಮಸ್ಸಿನಿಂದ ತುಂಬಿದ ಯುವಕರಿಗೆ ಸನ್ಮಾರ್ಗವನ್ನು ತೋರಿ, ಧರ್ಮಶ್ರದ್ಧೆ, ತತ್ತ್ವಜ್ಞಾನ ಸದಾಚಾರಗಳ ಕಡೆಗೆ ಮನಸ್ಸನ್ನು ಒಲಿಸಿದರೆ ಉಂಟಾಗುವ ಸತ್ಪರಿಣಾಮಕ್ಕೆ ಇದೊಂದು ನಿದರ್ಶನ.

ಈ ಪ್ರವಚನದಲ್ಲಿ ಕಾಣಬರಬಹುದಾದ ದೋಷಗಳೂ, ನ್ಯೂನತೆಗಳೂ ನನ್ನ ಪ್ರಮಾದದಿಂದಾದವು. ಆದರೆ ಅಲ್ಲಲ್ಲಿ ಕಾಣಬರುವ ಉತ್ಕೃಷ್ಟ ಭಾವನೆ, ಉತ್ತಮ ನಿರೂಪಣೆ, ಪದಲಾಲಿತ್ಯ, ಸುಂದರ ಶೈಲಿ, ಮನಮೆಚ್ಚುವ ಶಬ್ದಜಾಲ, ಉಚ್ಚ ವಿಚಾರಧಾರೆ, ಉತ್ಸಾಹದ ಮೆರುಗು — ಇವೆಲ್ಲವೂ ನಿಸ್ವಾರ್ಥ ಹೃದಯದ, ಪ್ರೇಮಭರಿತ ಸೇವಾಮನೋಭಾವದ ಯಜ್ಞಶಿಬಿರದಲ್ಲಿನ ಸ್ವಯಂ ಸೇವಕರದು. ಪ್ರತಿದಿನವೂ ಜ್ಞಾನಯಜ್ಞದ ಕಾರ್ಯಕ್ರಮವನ್ನು ಸುವ್ಯವಸ್ಥಿತವಾಗಿ ನಡೆಸುವ ಪೂರ್ಣ ಹೊಣೆ ಅವರದೇ ಆಗಿತ್ತು.

ಹೆಸರು, ಪ್ರಖ್ಯಾತಿ, ಮನ್ನಣೆಯ ಗಣನೆಯೇ ಇಲ್ಲದೆ ದುಡಿದ ಈ ಯುವ ಉತ್ಸಾಹಿಗಳ ಉಪಕಾರ, ಸಹಾಯಗಳಿಲ್ಲದಿದ್ದರೆ, ಹಿಮಾಲಯದಿಂದ ಇಳಿದುಬಂದಿದ್ದ ನನ್ನಂತಹ ಅಜ್ಞಾತ, ಅಪರಿಚಿತನ ಉಪನಿಷತ್ ವ್ಯಾಖ್ಯಾನ

ವಾಣಿಯನ್ನು ಕೇಳಲು ನಗರವಾಸಿಗಳು ಎಲ್ಲಿ ಬರುತ್ತಿದ್ದರು ? ದೊಡ್ಡ ಪಟ್ಟಣಗಳಲ್ಲಿ ವಾಸಿಸುವ ನಾಗರಿಕರಿಗೆ ಕಂಡು ಕೇಳದ ಹೊಸ ವಿಚಾರದಲ್ಲಿ ಮೊದಲೇ ಸಂಶಯ, ಸಂದೇಹಗಳೂ, ಅಪನಂಬಿಕೆಗಳೂ ಇದ್ದೇ ಇರುತ್ತವೆ. ಅಲ್ಲದೆ ಅಪರಿಚಿತರ ಚಿಂತನೆಗಳ ವಿಚಾರದಲ್ಲೂ ಕಟುವಾದ ಟೀಕೆಗಳ, ಉಗ್ರ ವಿರೋಧಾಭಿಪ್ರಾಯಗಳ ಅಡ್ಡಗೋಡೆಯೂ ಸಿದ್ಧವಾಗಿರುತ್ತದೆ. ಇಂತಹದರಲ್ಲಿ ಜ್ಞಾನಯಜ್ಞವು ಯಶಸ್ವಿಯಾಗಿಯೇ ನಡೆಯಿತೆಂದರೆ ಸ್ವಯಂಸೇವಕರು ವಹಿಸಿದ್ದ ಶ್ರಮವೆಷ್ಟಿರಬೇಕೆಂದು ನೀವೇ ಊಹಿಸಬಹುದು.

ಅತ್ಯಂತ ಶ್ರದ್ಧೆಯಿಂದ ಸೇವಾಮನೋಭಾವದಿಂದ ದಯಮಾಡಿ ಬಂದು ಭಗವಂತನ ಸೇವೆ ಸಲ್ಲಿಸಿದ ಸಕಲ ಸ್ವಯಂಸೇವಕರಿಗೂ ನನ್ನ ಹೃದಯಪೂರ್ವಕ ಅನಂತ ಧನ್ಯವಾದಗಳು !

**ಸಪ್ರೇಮ ಪ್ರಣಾಮದೊಡನೆ ಓಂ !**

ಸಾಂದೀಪನೀ ಸಾಧನಾಲಯ — ತಮ್ಮ ಆತ್ಮೀಯ

ಬೊಂಬಾಯಿ - ೭೨ — **ಸ್ವಾಮಿ ಚಿನ್ಮಯಾನಂದ**

॥ ಹರಿಃ ಓಂ ॥

# ಪೀಠಿಕೆ

## ವೇದಾಂತ

ಉಪನಿಷತ್ತುಗಳು ವೇದಗಳ ಭಾಗಗಳು. ಉಪನಿಷತ್ತುಗಳನ್ನು 'ವೇದಾಂತ' ಎಂಬ ಹೆಸರಿನಿಂದ ಕರೆಯುವ ವಾಡಿಕೆಯುಂಟು. ಉಪನಿಷತ್ತುಗಳು ಸಾಮಾನ್ಯವಾಗಿ ವೇದಗಳ ಅಂತ್ಯಭಾಗವಾದ್ದರಿಂದಲೂ, ಅಲ್ಲದೆ ಅದಕ್ಕಿಂತ ಪ್ರಧಾನವಾಗಿ ಅವು ವೇದಗಳ ನಿರ್ಣಾಯಕವಾದ ಸಿದ್ಧಾಂತ ಭಾಗಗಳಾಗಿರುವುದರಿಂದಲೂ ಅವಕ್ಕೆ ಆ ಹೆಸರು ರೂಢಿಯಲ್ಲಿದೆ.

## ವೇದ ವಿಭಾಗಗಳು

ವೇದಗಳಲ್ಲಿ ಬೇರೆ ವಿಷಯುಗಳು ಬಂದಿದ್ದರೂ ವೇದಗಳ ಮುಖ್ಯ ತಾತ್ಪರ್ಯವಿರುವುದು ಬ್ರಹ್ಮವಿಷಯದಲ್ಲಿ ಅಥವಾ ಆತ್ಮಜ್ಞಾನದಲ್ಲಿ. ಉಳಿದ ವಿಷಯಗಳು ಗೌಣ ಅಥವಾ ಬ್ರಹ್ಮತತ್ತ್ವಜ್ಞಾನಕ್ಕೆ ಸೋಪಾನ.

ವೇದಗಳಲ್ಲಿ ನಾಲ್ಕು ಮುಖ್ಯ ವಿಭಾಗಗಳನ್ನು ಗುರುತಿಸಬಹುದು.

೧. **ಸಂಹಿತಾಭಾಗಃ** ಇದು ಮಂತ್ರದ್ರಷ್ಟಾರರೆನಿಸಿದ ಋಷಿಗಳು ಕಂಡ ಮಂತ್ರಗಳ ಸಂಗ್ರಹ. ಬ್ರಹ್ಮಚರ್ಯಾಶ್ರಮಿಗಳ ಅಧ್ಯಯನಕ್ಕೆ ಇದು ಪ್ರಾರಂಭದ ಹಂತ.

೨. **ಬ್ರಾಹ್ಮಣ ಭಾಗಃ** ಇದು ಗೃಹಸ್ಥಾಶ್ರಮಿಗಳು ಅನುಸರಿಸಬೇಕಾದ ವಿಧಿಗಳ ವಿವರಣೆ. ಇದರಲ್ಲಿ ಹೆಚ್ಚು ಭಾಗ ಯಜ್ಞಯಾಗಾದಿಗಳನ್ನು ಕುರಿತವು. ಸಂಹಿತೆಯ ಮಂತ್ರಗಳು ಇವುಗಳಲ್ಲಿ ವಿನಿಯೋಗಿಸಲ್ಪಡುತ್ತವೆ. ಇದು ಕರ್ಮಕಾಂಡವೆನಿಸುತ್ತದೆ.

೩. **ಆರಣ್ಯಕಃ** ಸಂಸಾರದ ನಿಸ್ಸಾರತೆಯನ್ನು ಕಂಡು ನಿರ್ಜನವಾದ ಪ್ರದೇಶಗಳಲ್ಲಿ ಕುಳಿತು ತತ್ತ್ವವಿಚಾರ ಮಾಡುವ ವಾನಪ್ರಸ್ಥಾಶ್ರಮಿಗಳಿಗೆ ಅನ್ವಯಿಸುವಂತಹುದು. ಇದರಲ್ಲಿ ಕರ್ಮಭಾಗವೂ ಸೇರಿರುತ್ತದೆ. ಆದರೆ ಜೀವನದ ಗುರಿಯನ್ನು ಕುರಿತು ಚಿಂತಿಸುವ ಪ್ರಶ್ನೆ ಮೂಡಿರುತ್ತದೆ.

೪. **ಉಪನಿಷತ್ತುಃ** ಇದೇ ವೇದಗಳ ಪರಮಸಾರ. ವೇದಗಳು

ಹೊರಟಿರುವುದೇ ಈ ತತ್ತ್ವಾನ್ವೇಷಣೆಗಾಗಿ. ಇದನ್ನು ಬ್ರಹ್ಮವಿದ್ಯೆ ಅಥವಾ ಆತ್ಮವಿದ್ಯೆ ಎನ್ನುತ್ತಾರೆ. ಲೋಕದ ಭೋಗಭಾಗ್ಯಗಳ ನಶ್ವರತೆಯನ್ನು ಕಂಡು ಶಾಶ್ವತವಾದ ಪರಮಶಾಂತಿಯನ್ನರಸಿ ಬ್ರಹ್ಮಾಂಡದ ಮೂಲತತ್ತ್ವವನ್ನೇ ಕುರಿತಾದ ಜಿಜ್ಞಾಸೆ, ಆ ವಿಜ್ಞಾನವನ್ನರಿಯುವ ಸಾಧನೆ, ಮೋಕ್ಷಪ್ರಾಪ್ತಿ, ಬ್ರಹ್ಮೈಕ್ಯಾನುಭವ - ಈ ಅಲೌಕಿಕ ವಿಷಯಗಳನ್ನು ಕುರಿತಾದದ್ದು. ಇದನ್ನು ಶ್ರೇಷ್ಠನಾದ, ಪರಮ ಜ್ಞಾನಿಯಾದ ಗುರುವಿನ ಮೂಲಕವೇ ತಿಳಿಯತಕ್ಕದ್ದು. ಇದು ಅನುಭವಪೂರ್ವಕ ರಹಸ್ಯೋಪದೇಶವಾದ್ದರಿಂದ ಎಷ್ಟೇ ಪಂಡಿತನಾಗಿದ್ದರೂ ಸ್ವತಂತ್ರವಾದ ಉಪನಿಷತ್ತುಗಳ ಅಧ್ಯಯನವು ಶಾಸ್ತ್ರ ಸಮ್ಮತವಲ್ಲ. ಬ್ರಹ್ಮಜ್ಞಾನಕ್ಕಾಗಿ ಉತ್ಕಟೇಚ್ಛೆಯಿಂದ ಗುರುವಿನ ಸಮೀಪಕ್ಕೆ ಬರುವ ಶ್ರದ್ಧಾವಂತ ಜಿಜ್ಞಾಸುವಿಗಲ್ಲದೆ, ಕುತೂಹಲಕ್ಕಾಗಿ ಬರುವವರಿಗೆ ಈ ಬ್ರಹ್ಮವಿದ್ಯೆಯು ಉಪದೇಶ ಮಾಡಬಾರದೆಂದೂ ಶಾಸ್ತ್ರವು ವಿಧಿಸಿದೆ. ಈ ವಿಚಾರವು ಈ ಉಪನಿಷತ್ತಿನಲ್ಲೇ ಮುಂದೆ ಬಂದಿದೆ (೧, ೨, ೧೨-೧೩ ಮತ್ತು ೩, ೨, ೧, ೧೧-೧೨).

### ಉಪನಿಷತ್ ಎಂದರೇನು ?

'ಸದ್' ಎಂಬ ಧಾತುವಿಗೆ ಹಿಂದೆ 'ಉಪ' ಮತ್ತು 'ನಿ' ಎಂಬ ಉಪಸರ್ಗಗಳೂ, ಮುಂದೆ 'ಕ್ವಿಪ್' ಎಂಬ ಪ್ರತ್ಯಯವೂ ಸೇರಿ ಸಂಸ್ಕೃತದ ಭಾಷಾ ನಿಯಮದ ಪ್ರಕಾರ 'ಉಪನಿಷದ್' ಎಂಬ ಶಬ್ದವು ವ್ಯುತ್ಪತ್ತಿಯಾಗಿದೆ. ಇದರ ಯೌಗಿಕಾರ್ಥ - (ಉಪ) ಹತ್ತಿರಕ್ಕೆ ಬಂದು (ನಿ) ಶ್ರದ್ಧೆಯಿಂದ ಚೆನ್ನಾಗಿ (ಸದ್) ಕುಳಿತುಕೊಳ್ಳುವುದು. ಶ್ರೀ ಶಂಕರರು 'ಷದ್ಲೃ ವಿಶರಣ ಗತ್ಯವಸಾದನೇಷು' ಎಂಬ ಧಾತ್ವರ್ಥದಲ್ಲಿ 'ವಿಶರಣೇ' ಎನ್ನುವ ಅರ್ಥವನ್ನನುಸರಿಸಿ ಜನ್ಮಜರಾಮರಣ ರೂಪವಾದ ಸಂಸಾರಕ್ಕೆ ಕಾರಣವಾದ ಅವಿದ್ಯೆಯನ್ನು ನಾಶಮಾಡಿ ಬ್ರಹ್ಮವಿದ್ಯೆಯನ್ನು ತಿಳಿಸುವುದರಿಂದ ಇದು 'ಉಪನಿಷತ್ತು' ಎಂದೆಸಿಸುತ್ತದೆ ಎಂಬ ವಿವರಣೆಯನ್ನು ಸೇರಿಸಿರುತ್ತಾರೆ. ಒಟ್ಟಿನಲ್ಲಿ ಜ್ಞಾನಪ್ರಾಪ್ತಿಯನ್ನು ಬಯಸಿ ಬಂದ ಶಿಷ್ಯನು ಶ್ರದ್ಧಾಭಕ್ತಿಗಳಿಂದ ಬ್ರಹ್ಮವಿದ್ಯೆಯ ರಹಸ್ಯೋಪದೇಶ ಪಡೆಯುವುದಕ್ಕಾಗಿ ಗುರುವಿನ ಬಳಿ ಬಂದು ಕುಳಿತುಕೊಳ್ಳುವುದು ಎಂದು ಅರ್ಥವಾಯಿತು. ಇಂತಹ ಬ್ರಹ್ಮವಿದ್ಯೆ ಅಥವಾ ಆತ್ಮವಿದ್ಯೆಯನ್ನು ಬೋಧಿಸುವ ಗ್ರಂಥಕ್ಕೂ 'ಉಪನಿಷತ್ತು' ಎಂಬ ಹೆಸರೇ ಉಳಿಯಿತು. ಆದ್ದರಿಂದ ಉಪನಿಷತ್ತು ಎಂಬ ಶಬ್ದಕ್ಕೆ ಬ್ರಹ್ಮವಿದ್ಯೆ ಎಂಬುದೇ ಮುಖ್ಯವಾದ ಅರ್ಥ. ಬ್ರಹ್ಮದ ಎಂದರೆ ಪರಮಾತ್ಮನ ವಿಷಯಕವಾದದ್ದು ಎಂದು ಭಾವ.

### ಮುಂಡಕೋಪನಿಷತ್ತು

ಉಪನಿಷತ್ತುಗಳ ಸಂಖ್ಯೆ ಇಷ್ಟೇ ಎಂದು ಖಚಿತವಾಗಿ ತಿಳಿದು ಬಂದಿಲ್ಲ. ನೂರೆಂಟರಿಂದ ಒಂದು ಸಾವಿರದ ನೂರ ಎಂಬತ್ತು ಎಂದು ಮೊದಲಾಗಿ ಹೇಳುವವರಿದ್ದಾರೆ. ಇವುಗಳಲ್ಲಿ ಬಹು ಮುಖ್ಯವೆನಿಸಿದವು ಹದಿಮೂರು ಎಂದು

ಪಂಡಿತರು ಒಪ್ಪಿದ್ದಾರೆ. ಆದರೆ ನಮಗೆ ಸಿಕ್ಕಿರುವ ಭಾಷ್ಯಗಳ ಕರ್ತೃಗಳಲ್ಲಿ ಮೊದಲಿಗರೂ, ಜ್ಞಾನಿಗಳೂ, ಅತ್ಯಂತ ಪಾಂಡಿತ್ಯಪೂರ್ಣ ಭಾಷ್ಯಕಾರರೂ ಆದ ಶ್ರೀ ಶಂಕರಾಚಾರ್ಯರು ಭಾಷ್ಯ ಬರೆದಿರುವುದು ಹತ್ತು ಉಪನಿಷತ್ತುಗಳಿಗೆ ಮಾತ್ರ. ಆ ಹತ್ತು ಭಾಷ್ಯಗಳಲ್ಲಿ ಮುಂಡಕೋಪನಿಷತ್ ಭಾಷ್ಯವೂ ಒಂದು.

ಮುಂಡಕೋಪನಿಷತ್ತು ಅಥರ್ವವೇದಕ್ಕೆ ಸೇರಿದ್ದು. ಅದಕ್ಕೆ ಈ ಹೆಸರು ಏಕೆ ಬಂದಿತೆಂದು ಖಚಿತವಾಗಿ ತಿಳಿಯದು. ಕೆಲವು ಊಹಾಪೋಹಗಳು ಮಾತ್ರ ಇವೆ.

ಮೊದಲನೆಯದಾಗಿ, ಅಥರ್ವ ವೇದದಲ್ಲಿ 'ಮುಂಡಕ' ಎಂಬ ಒಬ್ಬ ಋಷಿಯ ಹೆಸರಿನ ಉಲ್ಲೇಖವಿದೆ. ಆದರೆ ಆ ಋಷಿಗೂ, ಈ ಉಪನಿಷತ್ತಿಗೂ ಯಾವ ಸಂಬಂಧವಿದ್ದಂತೆಯೂ ಕಂಡುಬರುವುದಿಲ್ಲ.

ಎರಡನೆಯದಾಗಿ, 'ಮುಂಡ' ಎಂದರೆ ಕ್ಷೌರ ಅಥವಾ ಕ್ಷೌರ ಮಾಡಿಸಿಕೊಂಡ ತಲೆ ಎಂಬ ಅರ್ಥವಿದೆ. ಈ ಉಪನಿಷತ್ತಿನ ಜ್ಞಾನ ಪಡೆಯುವವನು ಮುಂಡನ ಕ್ರಿಯೆಯಲ್ಲಿ ಉಂಟಾಗುವ ಕೂದಲಿನ ನಾಶದಂತೆ ತನ್ನ ಅವಿದ್ಯೆಯ ನಾಶವನ್ನು ಹೊಂದುತ್ತಾನೆ ಎಂಬ ಅರ್ಥವಿರಬಹುದು, ಎಂದು ಕೆಲವರ ಅಭಿಪ್ರಾಯ.

ಮೂರನೆಯದಾಗಿ, ಸಂನ್ಯಾಸಿಗಳೇ ಈ ಉಪನಿಷತ್ತಿನ ಅಧ್ಯಯನಕ್ಕೆ ಅಧಿಕಾರಿಗಳಾಗಿರುವುದರಿಂದಲೂ, ಸಂನ್ಯಾಸ ಸ್ವೀಕಾರಕ್ಕೆ ಮುಂಡನ ಕ್ರಿಯೆಯು ಮುಖ್ಯ ವಿಧಿಯಾಗಿರುವುದರಿಂದಲೂ ಈ ಉಪನಿಷತ್ತಿಗೆ ಈ ಹೆಸರು ಬಂದಿರಬಹುದು ಎಂದು ಕೆಲವರು ಊಹಿಸುತ್ತಾರೆ.

ಅದು ಏನಾದರಿರಲಿ. ವಿಷಯ ಮತ್ತು ವಿಚಾರಧಾರೆಗಳ ದೃಷ್ಟಿಯಿಂದ ಮುಂಡಕೋಪನಿಷತ್ತು ಬಹು ಶ್ರೇಷ್ಠವಾದ ಉಪನಿಷತ್ತು ಎನ್ನುವುದರಲ್ಲಿ ಸಂದೇಹವಿಲ್ಲ.

## ಈ ಉಪನಿಷತ್ತಿನ ವೈಶಿಷ್ಟ್ಯ

ಈ ಉಪನಿಷತ್ತಿನಲ್ಲಿ ಮೂರು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯವನ್ನೂ 'ಮುಂಡಕ' ಎಂಬ ಹೆಸರಿನಿಂದ ಕರೆದಿದ್ದಾರೆ. ಒಂದೊಂದು ಮುಂಡಕದಲ್ಲೂ ಎರಡೆರಡು ವಿಭಾಗಗಳಿವೆ. ಅವನ್ನು 'ಖಂಡ' ಎಂದು ಕರೆದಿದ್ದಾರೆ.

ಈ ಉಪನಿಷತ್ತಿನಲ್ಲಿ ಒಟ್ಟು ಅರವತ್ತೈದು ಮಂತ್ರಗಳಿವೆ.

ಈ ಉಪನಿಷತ್ತಿನ ಉಪದೇಶವು ಬಹು ಸ್ವಾರಸ್ಯವಾಗಿ ಪ್ರಾರಂಭವಾಗುತ್ತದೆ.

ಮಹಾಗೃಹಸ್ಥನಾದ ಶೌನಕನೆಂಬ ಶಿಷ್ಯನು ವಿಧಿವತ್ತಾಗಿ, ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆದ ಅಂಗಿರಸ್ಸನೆಂಬ ಆಚಾರ್ಯನ ಬಳಿ ಬಂದು ನಮ್ರತೆಯಿಂದ ಈ ಪ್ರಶ್ನೆಯನ್ನು ಕೇಳುತ್ತಾನೆ. 'ಭಗವಂತನೇ, ಯಾವ ಒಂದನ್ನು ಅರಿತರೆ ಎಲ್ಲವನ್ನೂ ತಿಳಿದಂತಾಗುವುದು ?'

ಇದು ಎಂತಹ ಮಹತ್ವಪೂರ್ಣವಾದ ಪ್ರಶ್ನೆ ! ಎಲ್ಲಾ ಜ್ಞಾನಕ್ಕೂ ಮೂಲವಾದ ಜ್ಞಾನ ಯಾವುದು, ಅದನ್ನು ತನಗೆ ಉಪದೇಶಿಸಿ, ಎಂದು ಕೇಳುವ ಸಾಧಕನು ಎಷ್ಟು ಉತ್ತಮ ಮಟ್ಟದ ಶಿಷ್ಯನಾಗಿರಬೇಕು !

ಈ ಸವಾಲಿಗೆ ಸರಿಯಾದ ಉತ್ತರ ಕೊಡಬಲ್ಲ ಶ್ರೇಷ್ಠ ಗುರುವನ್ನೇ ಶಿಷ್ಯನು ಅರಸಿ ಬಂದಿದ್ದ. ಈ ಪ್ರಶ್ನೆಗೆ ಕೊಡುವ ಉತ್ತರವೇ ಈ ಉಪನಿಷತ್ತಿನ ಸಾರ. ಈ ಒಂದು ಉಪನಿಷತ್ತಿನ ಸಾರ ವಸ್ತು ಮಾತ್ರವೇನು ? ಎಲ್ಲಾ ಉಪನಿಷತ್ತುಗಳ ಜಿಜ್ಞಾಸಾ ವಿಷಯವೂ ಅದೇ ಆಗಿರುತ್ತದೆ.* ಆದ್ದರಿಂದಲೇ ಈ ಉಪನಿಷತ್ತಿಗೆ ಅಷ್ಟು ಮಹತ್ವ.

## ಮುಂಡಕೋಪನಿಷತ್ತಿನ ಸಾರ

### ಒಂದನೆಯ ಮುಂಡಕ—

ಶೌನಕನು ಕೇಳಿದ ಗಹನವಾದ ಪ್ರಶ್ನೆಗೆ ಆಚಾರ್ಯ ಅಂಗಿರಸ್ಸನು ನೇರವಾಗಿ ಉತ್ತರ ಕೊಡುವುದು ಶಿಷ್ಯನ ಗ್ರಹಿಕೆಗೆ ಮೀರಿದ್ದಾಗಿರಬಾರದೆಂದು ಹಂತಹಂತವಾಗಿ ಉತ್ತರ ಕೊಡುತ್ತಾನೆ. ವಿದ್ಯೆಗಳಲ್ಲಿ ಎರಡು ವರ್ಗಗಳಿವೆ. ಒಂದು ಪರವಿದ್ಯೆ. ಎರಡನೆಯದು ಅಪರವಿದ್ಯೆ (೧-೧-೪). ಯಾವ ವಿದ್ಯೆಯಿಂದ ನಾವು ಬ್ರಹ್ಮ (ಅಕ್ಷರ)ವನ್ನು ತಿಳಿಯಲು ಸಾಧ್ಯವೋ ಅದು ಪರವಿದ್ಯೆ. ಉಳಿದೆಲ್ಲ ವಿದ್ಯೆಗಳೂ ಅಪರವಿದ್ಯೆ (೧-೧-೫,೬). ಅವುಗಳು ವಿಶೇಷವಾಗಿ ಲೌಕಿಕ ಜ್ಞಾನಕ್ಕೆ ಸಂಬಂಧಪಟ್ಟವು. ಸಮಸ್ತ ಲೋಕಗಳೂ ಅಕ್ಷರ (ಬ್ರಹ್ಮ)ದಿಂದಲೇ ಉಂಟಾಗುತ್ತವೆ ಮತ್ತು ಅದರಲ್ಲಿಯೇ ಲಯವಾಗುತ್ತವೆ. (೧-೧-೭). ಬ್ರಹ್ಮವನ್ನು ತಿಳಿದುಕೊಂಡರೆ ಎಲ್ಲವನ್ನೂ ತಿಳಿದಂತೆ ಆಗುವುದು.

ಅಪರವಿದ್ಯೆಗೆ ಸಂಸಾರವೇ ಗತಿ (೧-೨-೮). ಅಪರವಿದ್ಯೆಗಳಿಂದ ಕರ್ಮ, ಅದರಿಂದ ಬರುವ ಫಲ-ಇವೆಲ್ಲವೂ ಅಶಾಶ್ವತ (೧-೨-೯, ೧೦). ಕರ್ಮದೊಡನೆ ಮಾಡುವ ಉಪಾಸನಾದಿ ಸಾಧನೆಗಳಿಂದ ಸಿಗುವ ಫಲವೂ ನಿತ್ಯವಲ್ಲ. (೧-೨-೧೧). ಸತ್ಯವಾದ ಮೋಕ್ಷಪ್ರಾಪ್ತಿಗಾಗಿ ಬ್ರಹ್ಮವಿದ್ಯೆಯನ್ನು ಕಲಿಯಲು ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆದ ಗುರುವಿನ ಬಳಿ ಸಾರಬೇಕು (೧-೨-೧೨).

### ಎರಡನೆಯ ಮುಂಡಕ—

ಅಕ್ಷರವು ಪರಮಾರ್ಥ ಸತ್ಯ. ಅದರಿಂದಲೇ ಸಕಲ ಪ್ರಪಂಚವೂ ಬಂದಿರುವುದು (೨-೧-೧, ೩). ಅದನ್ನು ತಿಳಿದವನು ಅವಿದ್ಯೆಯಿಂದ ಬಿಡುಗಡೆಯಾಗುತ್ತಾನೆ (೨-೧-೧೦).

ಅಕ್ಷರ ಪುರುಷನನ್ನು ಪಡೆಯುವ ಸಾಧನೆಯ ರೀತಿಯೆಂದರೆ — ಓಂಕಾರವನ್ನೇ ಧನುಸ್ಸಾಗಿ ಮಾಡಿಕೊಂಡು ಉಪಾಸನೆಯಿಂದ ಏಕಾಗ್ರವಾದ ಚಿತ್ತದಿಂದ

---

* ಛಾಂದೋಗ್ಯೋಪನಿಷತ್ತು - ೬-೧-೩ ನೋಡಿ.

ಜೀವಾತ್ಮನನ್ನೇ ಬಾಣವಾಗಿ ಭಾವಿಸಿ ಅಕ್ಷರನಾದ ಬ್ರಹ್ಮನನ್ನು ಲಕ್ಷ್ಯವಾಗಿ ಮಾಡಿ ಹೊಡೆಯಬೇಕು ಅಂದರೆ ಹೊಂದಬೇಕು (೨-೨-೩, ೪).

ಪರಬ್ರಹ್ಮನನ್ನು ಕಂಡೊಡನೆಯೇ ಅವಿದ್ಯೆಯು ನಾಶವಾಗುತ್ತದೆ. ಅವನ ಸಂಶಯಗಳು ಅಳಿಯುತ್ತವೆ. ಅವನ ಅವಿದ್ಯಾಕಾಮಕರ್ಮಫಲಗಳು ಕ್ಷಯವಾಗುತ್ತವೆ (೨-೨-೯). ಈ ಬ್ರಹ್ಮವೇ ಎಲ್ಲಾ ಬೆಳಕಿಗೂ, ಜ್ಞಾನಕ್ಕೂ ಮೂಲಾಧಾರ. ಅದರಿಂದಲೇ ಸಕಲ ವಸ್ತುಗಳೂ ಬೆಳಗುತ್ತಿರುವುದು (೨-೨-೧೧). ಬ್ರಹ್ಮವು ಸರ್ವವ್ಯಾಪಿ, ಸರ್ವಾಂತರ್ಯಾಮಿ. ವಿಶ್ವವೆಲ್ಲವೂ ಬ್ರಹ್ಮವೇ. ಅದನ್ನು ಬಿಟ್ಟು ಬೇರೊಂದಿಲ್ಲ (೨-೨-೧೨).

**ಮೂರನೆಯ ಮುಂಡಕ—**

ಜೀವ ಮತ್ತು ಈಶ್ವರ - ಇಬ್ಬರೂ ಒಂದೇ ವೃಕ್ಷವನ್ನು ಆಶ್ರಯಿಸಿರುವ ಎರಡು ಹಕ್ಕಿಗಳಂತೆ ಇರುವರು. ಜೀವನಿಗೆ ಕರ್ಮವುಂಟು, ಕರ್ಮಫಲವುಂಟು. ಈಶ್ವರನು ನಿಷ್ಕ್ರಿಯನು. ಕೇವಲ ಸಾಕ್ಷೀ (೩-೧-೧). ಜೀವನು ಭೋಕ್ತೃವಾಗಿ ಶೋಕಮೋಹಗಳಿಂದ ತೊಳಲಾಡುತ್ತಿರುವನು. ಆದರೆ ಅವನಲ್ಲಿ ಜ್ಞಾನೋದಯವಾಗಿ ಈಶ್ವರ ಸ್ವರೂಪವೇ ತನ್ನದೆಂದು ತಿಳಿದ ಮೇಲೆ ಅವನು ಶೋಕಮೋಹಗಳಿಂದ ಬಿಡುಗಡೆ ಹೊಂದುವನು (೩-೧-೨). ಸತ್ಯ, ತಪಸ್ಸು, ಸಮ್ಯಕ್ ಜ್ಞಾನ, ಬ್ರಹ್ಮಚರ್ಯ — ಇವುಗಳ ಅನುಷ್ಠಾನದಿಂದ ತನ್ನೊಳಗೇ ಇರುವ ಜ್ಯೋತಿಸ್ಸ್ವರೂಪನಾದ ಆತ್ಮನನ್ನು ಕಂಡುಕೊಳ್ಳಬಹುದು (೩-೧-೫). ಜ್ಞಾನಪ್ರಸಾದದಿಂದ ಚಿತ್ತಶುದ್ಧಿಗೊಳಿಸಿ, ಏಕಾಗ್ರತೆಯಿಂದ ನಿರಂತರವಾಗಿ ಧ್ಯಾನಿಸಿದಾಗ ಮಾತ್ರ ಇಂದ್ರಿಯಾತೀತನಾದ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು (೩-೧-೮). ಆತ್ಮನು ಅತ್ಯಂತ ಸೂಕ್ಷ್ಮನು. ವಿಶುದ್ಧ ಚಿತ್ತವುಳ್ಳವರ ಅಂತಃಕರಣದಲ್ಲಿಯೇ ಗೋಚರಿಸುವನು (೩-೧-೯). ಆತ್ಮನನ್ನು ಸಾಕ್ಷಾತ್ಕರಿಸಿಕೊಂಡವನು ಪೂರ್ಣಕಾಮನಾಗುತ್ತಾನೆ, ಸತ್ಯಸಂಕಲ್ಪನಾಗುತ್ತಾನೆ. ಅವನು ಉಳಿದವರಿಗೆ ಪೂಜ್ಯ (೩-೧-೧೦).

ಕಾಮಗಳಿಂದಲೇ ಕರ್ಮ, ಕರ್ಮಫಲ ಭೋಗ, ಜನ್ಮಾಂತರಪ್ರಾಪ್ತಿ. ಪರ್ಯಾಪ್ತಕಾಮನಾಗಿ ಆತ್ಮಪ್ರಾಪ್ತಿಗಾಗಿ ಮಾತ್ರ ಯಾರು ಹಂಬಲಿಸುತ್ತಿರುವರೋ ಅಂತಹವರಿಗೆ ಮರುಹುಟ್ಟೆಂಬುದಿರುವುದಿಲ್ಲ (೩-೨-೨). ಪ್ರವಚನ ಮಾಡುವುದರಿಂದಾಗಲೀ, ಶಾಸ್ತ್ರಗ್ರಂಥಗಳ ಕಂಠಪಾಠ ಮಾಡುವುದರಿಂದಾಗಲೀ, ಶಾಸ್ತ್ರಶ್ರವಣದಿಂದಾಗಲೀ, ಆತ್ಮನು ದೊರಕುವುದಿಲ್ಲ. ಯಾವಾತನು ಪರಮಾತ್ಮನನ್ನೇ ಕಾಣಬೇಕೆಂದು ಉತ್ಕಟವಾಗಿ ಹಂಬಲಿಸುತ್ತಾನೋ ಅಂತಹವನಿಗೆ ಅವನೇ ತನ್ನ ಸ್ವರೂಪವನ್ನು ತೋರುತ್ತಾನೆ (೩-೨-೩). ಆತ್ಮನು ಮನೋಧಾರ್ಢ್ಯವಿಲ್ಲದವನಿಗಾಗಲಿ, ಲೋಕಾಸಕ್ತಿಯುಳ್ಳವನಿಗಾಗಲಿ, ಸಂನ್ಯಾಸವಿಲ್ಲದ ಅಂದರೆ ವೈರಾಗ್ಯವಿಲ್ಲದ ಜ್ಞಾನದಿಂದಾಗಲಿ ಆತ್ಮನು ಸಿಗುವುದಿಲ್ಲ. ಈ ಎಲ್ಲಾ ದೋಷಗಳಿಂದ ವಿವರ್ಜಿತನಾದ ವಿವೇಕಿಯೂ ಮುಮುಕ್ಷುವೂ, ಆತ್ಮನಿಷ್ಠನೂ ಆಗಿರುವ ಜ್ಞಾನಿಯು ತನ್ನ ಸತತ ಪ್ರಯತ್ನದಿಂದ ಬ್ರಹ್ಮಧಾಮವನ್ನು ಪ್ರವೇಶಿಸುವನು (೩-೨-೪).

ಬ್ರಹ್ಮ ಸಾಕ್ಷಾತ್ಕಾರವಾದ ಜ್ಞಾನಿಗಳು ನಿತ್ಯತೃಪ್ತರೂ, ಪರಮ ವಿರಾಗಿಗಳೂ,

ಪ್ರಶಾಂತ ಮೂರ್ತಿಗಳೂ ಆಗಿರುತ್ತಾರೆ (೩-೨-೫). ಬ್ರಹ್ಮಸ್ವರೂಪದ ನಿಶ್ಚಯಜ್ಞಾನ ಪಡೆದಿರುವ ಇವರು ಸಂನ್ಯಾಸಪೂರ್ವಕ ಧ್ಯಾನಯೋಗಗಳಿಂದ ಶುದ್ಧಸತ್ವಚಿತ್ತರಾಗಿ ತಮ್ಮ ಅಂತ್ಯಕಾಲದಲ್ಲಿ ಪರಬ್ರಹ್ಮನಲ್ಲೇ ಐಕ್ಯವಾಗುವರು (೩-೨-೬). ಉಪಾಧಿಯಾಗಿದ್ದ ಅವರ ಭೂತದೇಹದ ಅಂಶಗಳೆಲ್ಲಾ ಅವುಗಳಿಗೆ ಕಾರಣವಾಗಿದ್ದ ತನ್ಮಾತ್ರೆಗಳಲ್ಲಿಯೂ, ಅವುಗಳ ಅಧಿಷ್ಠಾನ ದೇವತೆಗಳಲ್ಲೂ ಸೇರಿಕೊಳ್ಳುವುವು. ಕರ್ಮವಿಪಾಕಗಳೂ ಮತ್ತು ಜೀವಾತ್ಮನೂ ಪರಬ್ರಹ್ಮನಲ್ಲಿ ಒಂದಾಗುವರು (೩-೨-೭). ಹೇಗೆ ನದಿಗಳು ತಮ್ಮ ನಾಮರೂಪಗಳನ್ನು ಕಳೆದುಕೊಂಡು ಸಮುದ್ರದಲ್ಲಿ ಬೆರೆತುಹೋಗುವುವೋ ಹಾಗೆ ಜ್ಞಾನಿಯು ತನ್ನ ವ್ಯಕ್ತಿತ್ವದ ಸರ್ವ ವೈಶಿಷ್ಟ್ಯಗಳನ್ನೂ ಕಳೆದುಕೊಂಡು ಪರಾತ್ಪರನಾದ ಪುರುಷನಲ್ಲಿ ಐಕ್ಯನಾಗುವನು (೩-೨-೮). ಬ್ರಹ್ಮವನ್ನು ಅರಿತವನು ಬ್ರಹ್ಮನೇ ಆಗುವನು. ಅವನ ವಂಶದಲ್ಲಿ ಬ್ರಹ್ಮಜ್ಞಾನಿಗಳಲ್ಲದವರೇ ಹುಟ್ಟುವುದಿಲ್ಲ. ಅವನು ಶೋಕವನ್ನು ದಾಟಿ, ಪಾಪದ ಸೋಂಕೂ ಇಲ್ಲದೆ, ಅವಿದ್ಯೆಯನ್ನು ತೊಡೆದುಹಾಕಿ ಅಮೃತನಾಗುವನು (೩-೨-೯).

ಶ್ರುತಿಯಲ್ಲಿ ಈ ರೀತಿ ಹೇಳಿದೆ:

ಯಜ್ಞಯಾಗಾದಿ ಕರ್ಮಗಳನ್ನೂ, ಉಪಾಸನೆಗಳನ್ನೂ, ಅಥರ್ವವೇದದಲ್ಲಿ ಹೇಳಿರುವ ವ್ರತವನ್ನೂ ಯಾರು ಶ್ರದ್ಧೆಯಿಂದ ಮಾಡುತ್ತಾರೋ ಅವರಿಗೆ ಮಾತ್ರ ಈ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು (೩-೨-೧೦).

ಈ ಸತ್ಯವನ್ನು ಅಂಗಿರಸ್ಸು ಋಷಿಯು ಪೂರ್ವದಲ್ಲಿ ಹೇಳಿದನು. ಅಂತಹ ಪರಮ ಋಷಿಗಳಿಗೆ ನಮಸ್ಕಾರ! ಪರಮಋಷಿಗಳಿಗೆ ನಮಸ್ಕಾರ! (೩-೨-೧೧)

ಎರಡು ಸಲ 'ಪರಮಋಷಿಗಳಿಗೆ ನಮಸ್ಕಾರ' ಎಂದು ಹೇಳಿರುವುದು ಉಪನಿಷತ್ತು ಇಲ್ಲಿಗೆ ಸಮಾಪ್ತವಾಯಿತು ಎಂದು ತಿಳಿಸುವುದಕ್ಕೆ.

ಶಾಂತಿಃ। ಶಾಂತಿಃ । ಶಾಂತಿಃ ।

ಸ್ವಾಮಿ ಚಿನ್ಮಯಾನಂದರ ವ್ಯಾಖ್ಯಾನಸಹಿತವಾದ ಈ ಗ್ರಂಥವನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸಿದವರು ಶ್ರೀಯುತರಾದ ಸಿ.ಎಲ್. ಪುರುಷೋತ್ತಮರಾವ್ ಮತ್ತು ಬಿ.ಎಸ್. ವಿಶ್ವನಾಥರಾವ್. ಭಗವಂತನು ಅವರಿಗೆ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಕಾಪಾಡಲಿ. ಅವರಿಗೆ ನಮ್ಮ ಅನಂತಾನಂತ ಧನ್ಯವಾದಗಳು.

ಈ ಸದ್ಗ್ರಂಥವನ್ನು ಬಹಳ ಆದರ ಗೌರವಗಳಿಂದ ಅಂದವಾಗಿ ಮುದ್ರಿಸಿ ಕೊಟ್ಟ ಲೇಸರ್ ಲೈನ್ ಗ್ರಾಫಿಕ್ಸ್ ಮಾಲೀಕರಾದ ಕೇಶವ್ ಮತ್ತು ಗೋಪಿ ಅವರಿಗೂ, ಅವರ ಸಿಬ್ಬಂದಿ ವರ್ಗದವರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

॥ ಹರಿಃ ಓಂ ॥

ಇಂದಿರಾನಗರ
ಬೆಂಗಳೂರು - ೫೬೦ ೦೩೮
ದಿನಾಂಕ: ೨೧.೧೨.೧೯೯೫

ಪ್ರಕಾಶಕರು.

# ವಿಷಯಾನುಕ್ರಮಣಿಕೆ

# ಮುಂಡಕೋಪನಿಷತ್ತು

## ಶಾಂತಿಪಾಠ

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥

ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ
ಸ್ವಸ್ತಿ ನಃ ಪೂಷಾ ವಿಶ್ವವೇದಾಃ ।
ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ
ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥

**ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ದೇವಾಃ** – ಎಲೈ ದೇವತೆಗಳಿರಾ, **ಕರ್ಣೇಭಿಃ** – ಕಿವಿಗಳಿಂದ, **ಭದ್ರಂ** – ಮಂಗಳಕರವಾದದ್ದನ್ನು, **ಶೃಣುಯಾಮ** – ಕೇಳೋಣ, **ಅಕ್ಷಭಿಃ** – ಕಣ್ಣುಗಳಿಂದ **ಭದ್ರಂ** - ಮಂಗಳಕರವಾದದ್ದನ್ನು, **ಪಶ್ಯೇಮ** – ನೋಡೋಣ, **ಸ್ಥಿರೈಃ ಅಂಗೈಃ** – ದೃಢವಾದ ಅವಯವಗಳಿಂದ ಕೂಡಿದ, **ತನೂಭಿಃ** – ಶರೀರಗಳಿಂದ, **ತುಷ್ಟುವಾಂಸಃ** – ಸ್ತುತಿಸುವವರಾಗಿ, **ದೇವಹಿತಂ** – ದೇವತೆಗಳಿಂದ ವಿಧಿಸಲ್ಪಟ್ಟ, **ಯತ್ ಆಯುಃ** – ಆಯುಷ್ಯವನ್ನು, **ವ್ಯಶೇಮ** – ಅನುಭವಿಸೋಣ, **ವೃದ್ಧಶ್ರವಾಃ** – ಪುರಾತನನೂ ಕೀರ್ತಿವಂತನೂ ಆದ, **ಇಂದ್ರಃ** – ಇಂದ್ರನು, **ನಃ** – ನಮಗೆ, **ಸ್ವಸ್ತಿ** – ಮಂಗಳವನ್ನುಂಟುಮಾಡಲಿ, **ವಿಶ್ವವೇದಾಃ** – ಜ್ಞಾನನಿಧಿಯಾದ, **ಪೂಷಾ** – ಸೂರ್ಯನು, **ನಃ** – ನಮಗೆ, **ಸ್ವಸ್ತಿ** – ಶುಭವನ್ನು ಉಂಟುಮಾಡಲಿ, **ಅರಿಷ್ಟನೇಮಿಃ** – ತೊಡಕುಗಳಿಂದ ರಕ್ಷಿಸುವವನಾದ, **ತಾರ್ಕ್ಷ್ಯಃ** – ಗರುಡನು, **ನಃ** – ನಮಗೆ, **ಸ್ವಸ್ತಿ** – ಒಳ್ಳೆಯದನ್ನು ಮಾಡಲಿ, **ಬೃಹಸ್ಪತಿಃ** – ನಮ್ಮಲ್ಲಿರುವ ಅಧ್ಯಾತ್ಮ ಸಂಪತ್ತನ್ನು ಕಾಪಾಡುವ ದೇವಗುರುವಾದ ಬೃಹಸ್ಪತಿಯು, **ನಃ** – ನಮಗೆ, **ಸ್ವಸ್ತಿ** – ಕಲ್ಯಾಣವನ್ನು, **ದಧಾತು** – ಉಂಟು ಮಾಡಲಿ.

**ಓಂ ಶಾಂತಿಃ** – ಶಾಂತಿಯುಂಟಾಗಲಿ, **ಶಾಂತಿಃ** – ಶಾಂತಿಯುಂಟಾಗಲಿ, **ಶಾಂತಿಃ** – ಶಾಂತಿಯುಂಟಾಗಲಿ

ಎಲೈ ದೇವತೆಗಳೇ, ನಾವು ನಮ್ಮ ಕಿವಿಗಳಿಂದ (ಯಾವಾಗಲೂ) ಮಂಗಳಕರವಾದದ್ದನ್ನು ಕೇಳುವಂತಾಗಲಿ ಎಲೈ ಪೂಜಾರ್ಹರೇ, ನಾವು ಶುಭವಾದದ್ದನ್ನು ನೋಡುವಂತಾಗಲಿ. ದೃಢವಾದ ಅವಯವಗಳಿಂದ ಕೂಡಿದ ಶರೀರಗಳಿಂದ ಭಗವಂತನನ್ನು ನಾವು ಸ್ತುತಿಸುವವರಾಗಿ ನಮಗೆ ನಿಯಮಿಸಲ್ಪಟ್ಟ ಆಯುಸ್ಸನ್ನು ಅನುಭವಿಸೋಣ. ಪುರಾತನನೂ, ಕೀರ್ತಿಸಂಪನ್ನನೂ ಆದ ಇಂದ್ರನೂ, ಜ್ಞಾನನಿಧಿಯಾದ ಸೂರ್ಯನೂ, ನಮ್ಮ ತೊಡಕುಗಳೆಲ್ಲವನ್ನೂ ನಿವಾರಿಸುವ ಗರುಡನೂ, (ನಮ್ಮಲ್ಲಿರುವ ಆಧ್ಯಾತ್ಮ ಸಂಪತ್ತನ್ನು ಕಾಪಾಡುವ) ದೇವಗುರುವಾದ ಬೃಹಸ್ಪತಿಯೂ (ಶಾಸ್ತ್ರಾರ್ಥವನ್ನು ತಿಳಿದುಕೊಳ್ಳುವ ಬುದ್ಧಿಶಕ್ತಿಯನ್ನೂ), ಉಪದೇಶಗಳನ್ನು ಅನುಷ್ಠಾನಕ್ಕೆ ತರುವ ಧೈರ್ಯವನ್ನು ಕೊಟ್ಟು ನಮಗೆ ಮಂಗಳವನ್ನುಂಟು ಮಾಡಲಿ

ಓಂ ಶಾಂತಿಃ ಶಾಂತಿಃ ಶಾಂತಿಃ ||

ಹಿಂದಿನ ಕಾಲದಲ್ಲಿ ಗುರುಶಿಷ್ಯರಿಬ್ಬರೂ ಸೇರಿ ಶಾಂತಿಪಾಠವನ್ನು ಒಟ್ಟಿಗೆ ಹೇಳಿ ಮುಗಿಸುವತನಕ ಯಾವ ಉಪನಿಷತ್ತಿನ ಅಧ್ಯಯನವೂ ಪ್ರಾರಂಭವಾಗುತ್ತಿರಲಿಲ್ಲ. ಪ್ರತಿದಿನ ಆಚಾರ್ಯನೂ ಶಿಷ್ಯನೂ ಒಟ್ಟಿಗೆ ಕುಳಿತು ಪ್ರಾರ್ಥನೆ ಮಾಡಿ ಮುಗಿಸಿದ ನಂತರವೇ ಪಾಠ ಪ್ರವಚನದ ಪ್ರಾರಂಭ. ಈಗಿನ ಕಾಲದಲ್ಲಿ ಅಕ್ಷರಸ್ಥ ಅವಿದ್ಯಾವಂತರು ಪ್ರಾರ್ಥನೆಯ ಅಗತ್ಯ, ಬಲ, ಮಹತ್ವ, ಸಾಮರ್ಥ್ಯಗಳನ್ನು ಕುರಿತು ಕಟುವಾಗಿ ಟೀಕಿಸುತ್ತಾರೆ. 'ಹೇ ಭಗವಂತ, ಅವರನ್ನು ಕ್ಷಮಿಸು. ಅವರು ಏನು ಹೇಳುತ್ತಿದ್ದಾರೆಂಬುದನ್ನು ಅವರೇ ಅರಿತಿಲ್ಲ.''

ದೃಷ್ಟಾಂತಕ್ಕೆ, ಗೋಪಾಲ ಐಯರ್ ಎಂಬುವನೊಬ್ಬ ದೊಡ್ಡ ಸಂಸಾರದ ಯಃಕಶ್ಚಿತ್ ಮನುಷ್ಯನೆಂದುಕೊಳ್ಳೋಣ. ಮನೆಯಲ್ಲಿ ಮಕ್ಕಳಕಾಟ. ಹೆಂಡತಿಯೊಡನೆ ಕಾದಾಟ. ವೃತ್ತಿಯಲ್ಲಿ ಅವನೊಬ್ಬ ಅಲ್ಪ ಸಂಬಳದ ಪೊಲೀಸ್ ಪೇದೆ. ಆದರೂ ಪೊಲೀಸ್ ಸಮವಸ್ತ್ರ ಧರಿಸಿ ಕಾರ್ಯರಂಗಕ್ಕಿಳಿದರೆ ಅವನು ಕಾನೂನಿನ ಭಂಟ. ಕಾಯಿದೆಯನ್ನು ಚಲಾಯಿಸುವ ಸಮರ್ಥ ನಿರ್ವಾಹಕ. ಕಾನೂನನ್ನು ಮುರಿಯುವ ಮದಾಂಧರಿಗೆ ಯಮದೂತ. ಕಳ್ಳಕಾಕರಿಗೆ ಸಿಂಹಸ್ವರೂಪ.

ಹೀಗೆಯೇ ಪ್ರತಿಯೊಬ್ಬರೂ ನಾವು ಅಲ್ಪಶಕ್ತರು, ದುಃಖಿಗಳು, ಮತ್ತು ಸಂತ್ರಸ್ತ ಬಡಪಾಯಿಗಳು. ಆದರೆ ನಮ್ಮೊಳಗೆ ಮಹಾಶಕ್ತಿಯುತವೂ ಆನಂದಸ್ವರೂಪವೂ, ಭಯರಹಿತವೂ ಆದ ಅಂತರ್ಯಾಮಿ ಚೇತನವೊಂದು ಅಡಗಿದೆ. ಗೋಪಾಲ ಐಯರ್ ತನಗೆ ಅಗತ್ಯಬಿದ್ದಾಗ ಹೇಗೆ ತನ್ನ ದೈನ್ಯತೆಯನ್ನು ತೊರೆದು, ದರ್ಪದಕ್ಷತೆಗಳನ್ನು ತನ್ನೊಳಗೆ ಆಹ್ವಾನಿಸಿಕೊಂಡು ಸಾಹಸದಿಂದ ತನಗೆ ಸವಾಲು ಹಾಕುವ ಕಠಿಣ ಕಾರ್ಯವನ್ನೂ ಸಮರ್ಥವಾಗಿ ನಿರ್ವಹಿಸುತ್ತಾನೋ ಹಾಗೆಯೇ ಪ್ರಾರ್ಥನೆಯ ಮೂಲಕ ನಾವು ನಮ್ಮಲ್ಲಿರುವ ದಿವ್ಯ ಚೇತನವನ್ನು ಸ್ಫೂರ್ತಿಗೊಳಿಸಿ, ದೇಹ ಮನಸ್ಸುಗಳನ್ನು ಹುರಿದುಂಬಿಸಿ ನಮ್ಮ ನ್ಯೂನತೆಗಳನ್ನೂ, ಇತಿಮಿತಿಗಳನ್ನೂ ಮೀರಿದ ಅದ್ಭುತ ಶಕ್ತಿಯಿಂದ ಉತ್ಕೃಷ್ಟ ಧ್ಯೇಯದ ಕಡೆಗೆ ಸಾಗಬಹುದು. ನಮ್ಮ

ಸುಪ್ತಚೇತನವನ್ನು ಉದ್ದೀಪನಗೊಳಿಸಿ, ಮನಸ್ಸುಬುದ್ಧಿಗಳನ್ನು ಉತ್ಸಾಹಗೊಳಿಸಿ ಅವುಗಳ ಪೂರ್ಣಶಕ್ತಿಯ ವಿನಿಯೋಗಕ್ಕೆ ಅವನ್ನು ಸಜ್ಜುಗೊಳಿಸಿ ಆಧ್ಯಾತ್ಮಿಕ ವಿಕಾಸದ ಪರಿಪೂರ್ಣತೆಗಾಗಿ ಇಡೀ ಶರೀರ, ಅಂತಃಕರಣಗಳನ್ನು ಏಕಮುಖವಾಗಿ ಬಳಸುವ ತಂತ್ರ ಕೌಶಲವನ್ನೇ ನಾವು 'ಪ್ರಾರ್ಥನೆ' ಎನ್ನುತ್ತೇವೆ.

ಪ್ರಾರ್ಥನೆಯಲ್ಲಿ ನಾವು ಪರಮಾತ್ಮನ ಪಾದಪದ್ಮಗಳಡಿಯಲ್ಲಿ ಕುಳಿತಿರುತ್ತೇವೆ. ಅವನಿಗಾಗಿ ಹಂಬಲಿಸುತ್ತಾ ಅತ್ಯಂತ ಶ್ರದ್ಧಾಭಕ್ತಿ ಭರಿತವಾದ ಮನಸ್ಸನ್ನು ಏಕಾಗ್ರ ಮಾಡಿ ಪರಮಾತ್ಮನ ಕಡೆಗೆ ನಿರಂತರವಾಗಿ ಹರಿಯುವ ಹಾಗೆ ಮಾಡಿರುತ್ತೇವೆ. ಅಷ್ಟಲ್ಲದೆ, ಪ್ರಾರ್ಥನೆಯಲ್ಲಿ ಗುರುವಿನ ಅನುಕಂಪ ಹಾಗೂ ಅನುಗ್ರಹ ಶಿಷ್ಯನ ಮೇಲೆ ಪೂರ್ಣವಾಗಿರುತ್ತದೆ. ಪ್ರಾರ್ಥನೆಯಲ್ಲಿ ಭಗವಂತನ ಮಹಿಮೆಯ ಪ್ರಶಂಸೆ, ಅವನ ಬಗ್ಗೆ ಪ್ರೇಮ, ಪೂಜ್ಯ ಭಾವ ಮತ್ತು ಪವಿತ್ರ ಚಿಂತನೆಗಳು ಸೇರಿರುತ್ತವೆ. ಆದ್ದರಿಂದಲೇ ಉಪನಿಷತ್ತಿನ ಅಧ್ಯಯನದ ಪ್ರಾರಂಭ ಮಾಡುವ ಮುನ್ನ ಪ್ರತಿದಿನವೂ, ಗುರು ಶಿಷ್ಯರಿಬ್ಬರೂ ಸೇರಿ ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನನ್ನು ಭಜಿಸಿ, ಅವನಲ್ಲಿ ಶರಣಾಗಿ, ತಮ್ಮಲ್ಲಿರುವ ಅಂತಃಶಕ್ತಿಯನ್ನು ಪ್ರಚೋದಿಸುವಂತೆ ಬೇಡುತ್ತ ಜ್ಞಾನೋದಯಕ್ಕೆ ಅಂತಃಕರಣವನ್ನು ಅಣಿ ಮಾಡುತ್ತಾರೆ.

ಸಾಮಾನ್ಯವಾಗಿ ಪ್ರಾರ್ಥನೆಯಲ್ಲಿ ನಮ್ಮ ಕಾಮನೆಗಳನ್ನು ಕೈಗೂಡಿಸುವಂತೆ ಭಗವಂತನನ್ನು ಪ್ರಾರ್ಥಿಸುತ್ತೇವೆ. ನಮ್ಮ ಕಾರ್ಯ ಸಾಧನೆಯಲ್ಲಿ ವಿಜಯವಾಗುವಂತೆ ಅನುಗ್ರಹಿಸಬೇಕೆಂದು ಬೇಡುತ್ತೇವೆ. ಆ ಬೇಡಿಕೆಗಳು ಆತ್ಮೋನ್ನತಿಯನ್ನು ಕುರಿತಾಗಿದ್ದರೆ ಅದರಲ್ಲಿ ತಪ್ಪೇನೂ ಇರಲಾರದು. ಆದರೆ ನಮ್ಮ ಕೀಳು ಬಯಕೆಗಳ, ಸ್ವಾರ್ಥ ಉದ್ದೇಶಗಳ ಸಫಲತೆಗಾಗಿ ಪ್ರಾರ್ಥನೆಯನ್ನು ಬಳಸುವುದಾದರೆ ಪ್ರಾರ್ಥನೆಯ ಪಾವಿತ್ರ್ಯಕ್ಕೆ ಧಕ್ಕೆ ಬರುತ್ತದೆ.

ಉಪನಿಷತ್ತಿನ ಮಹಾನ್ ಋಷಿಗಳಿಗೆ ಯಾವ ಲೌಕಿಕ ಆಸೆಗಳೂ ಇರಲಿಲ್ಲ. ಪ್ರಾಪಂಚಿಕ ವಿಷಯಗಳ ನಿಸ್ಸಾರತೆಯು ಅವರಿಗೆ ಮನದಟ್ಟಾಗಿತ್ತು. ಇಂದ್ರಿಯ ಸುಖಗಳು ದುಃಖಮೂಲವೆಂದು ಮನವರಿಕೆಯಾಗಿತ್ತು. ಅವರ ಪ್ರಾರ್ಥನೆಯೆಲ್ಲ ಜೀವರಾಶಿಗಳ ಆತ್ಮವಿಕಾಸಕ್ಕೆ ಮತ್ತು ಅವುಗಳ ಮೇಲ್ಮೆಗೆ ಮುಡಿಪಾಗಿತ್ತು. ಈ ಬಗೆಯ ಜಗತ್ ಕಲ್ಯಾಣದ ತತ್ಪರತೆ ಪ್ರತಿಯೊಂದು ಉಪನಿಷತ್ತಿನ ಶಾಂತಿ ಪಾಠದಲ್ಲೂ ಎದ್ದು ಕಾಣುತ್ತದೆ. ತಮ್ಮ ಆಧ್ಯಾತ್ಮಿಕ ಜೀವನದಲ್ಲಿ ಮಂಗಳವಾದದ್ದನ್ನು ಮಾತ್ರ ಕೇಳುವ, ನೋಡುವ ಉತ್ಕಟೇಚ್ಛೆಯನ್ನು ಗುರುಶಿಷ್ಯರಿಬ್ಬರೂ ಪ್ರಕಟಪಡಿಸುತ್ತಾರೆ. ಮನುಷ್ಯನ ಮಾನಸಿಕ ಸಾಮ್ರಾಜ್ಯದಲ್ಲಿ ಪಾಪಿ ಸೈತಾನನ ಪ್ರವೇಶಕ್ಕೆ ಕಣ್ಣುಕಿವಿಗಳೇ ಹೆದ್ದಾರಿ. ಉಳಿದ ಇಂದ್ರಿಯಗಳು ನೇರವಾಗಿ ಹಾಗೂ ಅಷ್ಟು ಸುಲಭವಾಗಿ ಮನುಷ್ಯನ ಸಾತ್ವಿಕ ಪ್ರವೃತ್ತಿಯ ಸರ್ವನಾಶಕ್ಕೆ ಕಾರಣವಾಗಲಾರವು. ಬಾಹ್ಯ ಪ್ರಪಂಚದ ಭೋಗವಸ್ತುಗಳ ಆಕರ್ಷಕ ದರ್ಶನ ಮತ್ತು ಶ್ರವಣ, ಅವುಗಳಿಗೆ ಒತ್ತಾಸೆ ಕೊಡುವ ನಮ್ಮೊಳಗಿನ ವಿಷಯವಾಸನೆಗಳು —ಇವೆರಡೂ ಸೇರಿ ನಮ್ಮ ಆಧ್ಯಾತ್ಮಿಕ ನಿಲುವನ್ನೇ ಹೃದಯದಿಂದ ಕೊಚ್ಚಿ

ಹಾಕಿಬಿಡುವುವು. ಆದ್ದರಿಂದಲೇ ವೇದ ಮಂತ್ರ ದ್ರಷ್ಟಾರರು ಅಧರ್ಮವಾದದ್ದನ್ನೂ ಅಪವಿತ್ರವಾದದ್ದನ್ನೂ ಬಿಟ್ಟು ಸಾತ್ವಿಕ ಮತ್ತು ಮಂಗಳವಾದದ್ದನ್ನು ಮಾತ್ರ ನೋಡುವ, ಕೇಳುವ ಸೌಭಾಗ್ಯವನ್ನು ದಯಪಾಲಿಸೆಂದು ಭಗವಂತನನ್ನು ಬೇಡುತ್ತಾರೆ.

ವೇದಮಹರ್ಷಿಗಳ ಈ ಪ್ರಾರ್ಥನೆಯಲ್ಲಿ ಹಿಂದುಗಳ ಸಮತಾವಾದದ ತತ್ತ್ವ ದೃಷ್ಟಿಯನ್ನು ನಾವು ಕಾಣಬಹುದು. ಯಾವ ಸಮಾಜದಲ್ಲಿ ಮಂಗಳಕರವಾದದ್ದನ್ನೇ ಸದಾ ಕಾಣುವ ಬಯಕೆ ಮೂಡುವುದೋ ಹಾಗೂ ಅದನ್ನು ಕೈಗೂಡಿಸುವ ಸತತ ಪ್ರಯತ್ನವೂ ನಡೆಯುವುದೋ ಅಂತಹ ಸಮಾಜವು ಮತ್ತು ಅದನ್ನೊಳಗೊಂಡ ದೇಶವು ಅತ್ಯಂತ ಶ್ರೇಷ್ಠವೆನಿಸುವುದರಲ್ಲಿ ಸಂದೇಹವೇ ಇಲ್ಲ. ಅಂತಹ ರಾಷ್ಟ್ರದಲ್ಲಿ ಬಡತನ, ದೌರ್ಜನ್ಯ, ಅನ್ಯಾಯಗಳು ಮಾಯವಾಗುವುವು. ಈ ರೀತಿಯ ಮಹೋನ್ನತ ಸಂಸ್ಕೃತಿಯ ಸಾಮ್ರಾಜ್ಯ ಕಲ್ಪನೆಯನ್ನೇ ನಮ್ಮ ಋಷಿಗಳು ಧ್ಯೇಯವಾಗಿಟ್ಟುಕೊಂಡಿದ್ದರು.

ವೈರಾಗ್ಯಜೀವನ, ವಿಶ್ವಪ್ರೇಮಭಾವನ – ಇವುಗಳನ್ನು ಗುರಿಯಾಗಿ ಇಟ್ಟುಕೊಂಡು ನಮ್ಮ ಋಷಿಗಳು ಬಾಳನ್ನು ನಡೆಸುತ್ತಿದ್ದರೂ, ಪ್ರಾಪಂಚಿಕ ಜೀವನದ ಅಗತ್ಯಗಳಿಗೆ ಅವರು ಕುರುಡರಾಗಿರಲಿಲ್ಲ. ಬಾಳು ಬರಿ ಗೋಳೆಂದು ಎಂದೂ ಅವರು ದೂರುತ್ತಿರಲಿಲ್ಲ. ಆಸ್ಥೆ ಅಭಿಮಾನಗಳಿಂದ ಜೀವನವನ್ನು ನಡೆಸುತ್ತಿದ್ದರು. ಬದುಕಿಗೆ ಅವರು ತೋರಿಸುತ್ತಿದ್ದ ಗೌರವ ಅವರ ಪ್ರಾರ್ಥನೆಯಲ್ಲೂ ಕಂಡುಬರುತ್ತದೆ. ವೀರ್ಯ, ಆರೋಗ್ಯಗಳಿಂದ ಕೂಡಿದ ಪೂರ್ಣಾಯುಷ್ಯದ ಬಾಳು ತಮಗಿರಲೆಂದೂ, ಅದನ್ನು ದೇವತೆಗಳ ಹಿತಕ್ಕಾಗಿ ಬಳಸುವಂತಾಗಲೆಂದೂ ಅವರು ಪ್ರಾರ್ಥಿಸಿದ್ದಾರೆ.

ಈ ಪ್ರಾರ್ಥನೆಯಲ್ಲಿ ಇಂದ್ರ, ಪೂಷನ್, ವಾಯು, ಬೃಹಸ್ಪತಿ ಮುಂತಾದವರನ್ನು ಸ್ತುತಿಸಿರುವರು. ಇದನ್ನು ನೋಡಿದರೆ ನಮಗೆ ರಾಮ, ಕೃಷ್ಣ ಇವರ ನೆನಪು ಸಹಜವಾಗಿ ಉಂಟಾದರೂ, ಈ ದೇವರುಗಳು ಬಹಳ ಕಾಲದ ನಂತರ ಪ್ರಚಾರಕ್ಕೆ ಬಂದ ಪುರಾಣ ಇತಿಹಾಸಗಳ ಕಾಲದಲ್ಲಿ ಪ್ರಸಿದ್ಧರಾದವರು. ವೇದಗಳ ಕಾಲದಲ್ಲಿ ಋಷಿಗಳಿಗೆ ಕಂಡಿದ್ದು ಪಂಚಮಹಾಭೂತಗಳು ಮಾತ್ರ. ಈ ಪಂಚಭೂತಗಳ ತತ್ತ್ವಾಭಿಮಾನಿಗಳನ್ನೇ ಅವರು ದೇವತೆಗಳೆಂದು ನಂಬಿದ್ದರು. ಅವರನ್ನೇ ಪೂಜಿಸುತ್ತಿದ್ದರು. ಗುರುಶಿಷ್ಯರಿಬ್ಬರೂ ಒಟ್ಟಿಗೆ ಆ ದೇವತೆಗಳನ್ನೇ ಪ್ರಾರ್ಥಿಸುತ್ತಿದ್ದರು.

ಮೂರು ಬಾರಿ ಶಾಂತಿ, ಶಾಂತಿ, ಶಾಂತಿ ಎಂದು ಹೇಳದೆ ಯಾವ ಶಾಂತಿಪಾಠವೂ ಉಪಸಂಹಾರವಾಗುವುದಿಲ್ಲ. ಶ್ರೀಮದಾಚಾರ್ಯರ ಪ್ರಕಾರ, ಮೂರು ಸಲ ಶಾಂತಿಯನ್ನು ಕೋರುವುದು ನಮಗೆ ಶಾಸ್ತ್ರಾಧ್ಯಯನದಲ್ಲಿ ಉಂಟಾಗಬಹುದಾದ ಮೂರು ವಿಧವಾದ ಅಡ್ಡಿ ಅಡಚಣೆಗಳ ನಿವಾರಣೆಗಾಗಿ. ಮೂರು ವಿಧಗಳು ಯಾವುವೆಂದರೆ ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ. ಆಧಿದೈವಿಕವೆಂದರೆ ದೈವಿಕವಾಗಿ ಉಂಟಾಗುವ ತೊಂದರೆಗಳು – ಗುಡುಗು, ಸಿಡಿಲು, ಮಿಂಚು ಇವುಗಳಿಂದುಂಟಾಗುವ ಅಪಘಾತಗಳು, ಹವಾಮಾನ

ಬದಲಾವಣೆಯಿಂದುಂಟಾಗುವ ವ್ಯಾಧಿಗಳು ಇತ್ಯಾದಿ. ಆಧಿಭೌತಿಕವೆಂದರೆ, ಅಗ್ನಿ, ಚಂಡಮಾರುತ, ಪ್ರವಾಹ, ಭೂಕಂಪ ಮೊದಲಾದ ಪ್ರಕೃತಿಯಲ್ಲಿ ಸಂಭವಿಸುವ ವಿಧ್ವಂಸಕಾರಕ ವಿಪತ್ತುಗಳು. ಆಧ್ಯಾತ್ಮಿಕವೆಂದರೆ ಮನಸ್ಸು ಮತ್ತು ಶರೀರಗಳ ಸಂಬಂಧವಾಗಿ ಉಂಟಾಗುವ ರೋಗಗಳು.

ಉಪನಿಷತ್ ಋಷಿವರ್ಯರು ತಮ್ಮ ಅಹಂಕಾರವನ್ನು ಸಂಪೂರ್ಣವಾಗಿ ನಿರ್ಮೂಲ ಮಾಡಿ ಮಹಾ ತಪಸ್ಸಾಧನೆಯಿಂದ ಅತ್ಯಂತ ದುರ್ಗಮವಾದ ಆಧ್ಯಾತ್ಮಿಕ ಪಥದಲ್ಲಿ ನಡೆದು ಸತ್ಯದರ್ಶನ ಮಾಡಿಕೊಂಡವರು. ಆ ಸಚ್ಚಿದಾನಂದ ಸಾಮ್ರಾಜ್ಯದಲ್ಲಿ ಕಾಲಿಟ್ಟವರು ಪುನಃ ಲೌಕಿಕ ಪ್ರಪಂಚಕ್ಕೆ ಹಿಂದಿರುಗುವುದಿಲ್ಲ. ಆದರೂ ಅಪರೂಪವಾಗಿ ಸಾಮಾನ್ಯ ಜನರ ದುಃಖಸಂಕಟ ತೊಳಲಾಟಗಳ ನಿವಾರಣೆಗಾಗಿ ಹಾಗೂ ಅವರ ಉದ್ಧಾರಕ್ಕಾಗಿ ತಮ್ಮ ಅಮಿತಾನಂದಸಾಗರದಿಂದ ಹೊರಬಂದು, ಸಂಕಟದಲ್ಲಿರುವವರಿಗೆ ಮಾರ್ಗದರ್ಶನ ಮಾಡಿ, ಜ್ಞಾನದೀವಿಗೆಯನ್ನು ತೋರಿ, ಕೈಹಿಡಿದು ಮೇಲೆತ್ತಲು ಪ್ರಯತ್ನಿಸಿದ್ದಾರೆ. ಅವರು ಪರಲೋಕದ ಶಾಶ್ವತಾನಂದದ ಸಂಪತ್ತನ್ನು ವಿವರಿಸಿ ಆ ಸಾಮ್ರಾಜ್ಯವನ್ನು ತಲುಪುವ ಮಾರ್ಗವನ್ನು ತಿಳಿಸಿದ್ದಾರೆ.

ಅಂತಹ ರಸನಿಮಿಷಗಳಲ್ಲಿ ಅವರ ಸ್ಫೂರ್ತಿಯುತ ಬೋಧನೆ ತಾನಾಗಿ ಅವರ ಬಾಯಿಂದ ಹೊರಹೊಮ್ಮುತ್ತಿತ್ತು. ಹಾಗೆ ಅವರ ಬಾಯಿಂದ ಬಂದ ಮುತ್ತಿನಂತಹ ಮಾತುಗಳೇ ಉಪನಿಷತ್ತಿನ ಮಂತ್ರಗಳು. ಅಂತಹ ಬೋಧನೆಯ ಆನಂದೋತ್ಕರ್ಷದ ಸಮಯದಲ್ಲಿ ಆ ಮಹಾತ್ಮರಿಗೆ ತಮ್ಮ ನಾಮಾಂಕಿತಗಳನ್ನು ಪ್ರಕಟಪಡಿಸಬೇಕೆಂಬ ಅಭಿಲಾಷೆಯೇ ಬರಲಿಲ್ಲ. ಹಾಗಾಗಿ ಅನೇಕ ಉಪನಿಷತ್ ಮಂತ್ರಕರ್ತೃಗಳ ಹೆಸರುಗಳೇ ನಮಗೆ ಇಂದಿಗೂ ತಿಳಿಯದಾಗಿದೆ. ಆದರೂ ಯಾರೋ ಪುಣ್ಯ ಪುನೀತ ಮಹರ್ಷಿಗಳು ಆ ಮಂತ್ರಗಳ ಪರ ಕರ್ತೃಗಳಾಗಿದ್ದರೆಂಬುದನ್ನು ನಾವು ಮರೆಯುವಂತಿಲ್ಲ.

ಒಬ್ಬ ಸಣ್ಣ ಕ್ರಿಯಾತ್ಮಕ ಕಲೆಗಾರನೂ ತಾನು ಮಾಡಿದ ಕೃತಿಯೆಂದು ಎಲ್ಲರಿಗೂ ತೋರಿಸಿ ಹೆಮ್ಮೆಪಡುತ್ತಾನೆ. ಆದರೆ ಆ ರೀತಿಯ ಹೆಮ್ಮೆಯ ಬಯಕೆ ಉಪನಿಷತ್ ಋಷಿಗಳಿಗೆ ಇರಲಿಲ್ಲ. ಅವರು ಅಹಂಕಾರದ ಎಲ್ಲೆಯನ್ನು ದಾಟಿದ್ದ ಮಹಾತ್ಮರು. ಅವರಿಗೆ ಆ ಕೃತಿಗಳನ್ನು ತಮ್ಮದೆಂದು ಹೇಳಿಕೊಳ್ಳುವ ಆಸೆಯೇ ಇರಲಿಲ್ಲ.

ಶಬ್ದಗಳ ಮೂಲಕ ತಮ್ಮ ಅಲೌಕಿಕ ಅನುಭವವನ್ನು ವ್ಯಕ್ತಪಡಿಸುವ ಪೂರ್ಣ ಪ್ರಯತ್ನದ ನಂತರವೂ ಅವರಿಗೆ ಪೂರ್ಣ ತೃಪ್ತಿ ಸಿಗಲಿಲ್ಲ. ಏಕೆಂದರೆ ಮಾತುಗಳಲ್ಲಿ ಆ ದಿವ್ಯ ಅನುಭವವನ್ನು ಪೂರ್ಣವಾಗಿ ವರ್ಣಿಸುವುದು ಅಸಾಧ್ಯವೆಂಬುದು ಅವರಿಗೆ ತಿಳಿದಿತ್ತು. ಆದ್ದರಿಂದಲೇ ಅದು ಅಗ್ರಾಹ್ಯ, ಅನಿರ್ವಚನೀಯ ಎಂದು ಅವರು ಹೇಳುತ್ತಿದ್ದುದು. ಭಗವಂತನನ್ನು ಲಕ್ಷಣಗಳಿಂದ ನಿರ್ದೇಶಿಸುವುದು ಅವನಿಗೆ ಅಪಲಕ್ಷಣ ಮಾಡಿದಂತೆ !

ಕೆಲವು ಪಾಶ್ಚಾತ್ಯರಲ್ಲಿರುವಂತೆ, ತತ್ತ್ವಶಾಸ್ತ್ರ ಮಂಡನೆಯಿಂದ ಅಥವಾ ತತ್ತ್ವ

ಗ್ರಂಥಗಳ ವಿಕ್ರಯದಿಂದ ಯಶಸ್ಸು ಗಳಿಸಿ ಪ್ರಸಿದ್ಧರಾಗಬೇಕೆಂಬ, ಹಾಗೂ ಹಣ ಸಂಪಾದಿಸಬೇಕೆಂಬ ಆಶಯವು ನಮ್ಮ ಋಷಿವರ್ಯರಿಗೆ ಇರಲಿಲ್ಲ. ತತ್ತ್ವಾನ್ವೇಷಣೆ, ತಪಸ್ಸುಗಳೆಲ್ಲಾ ಆತ್ಮೋದ್ಧಾರಕ್ಕೆ ಮುಡಿಪಾಗಿತ್ತು. ಆದ್ದರಿಂದಲೇ ಅವರು ತಮ್ಮ ವ್ಯಕ್ತಿತ್ವಕ್ಕೆ ಪ್ರಾಧಾನ್ಯ ಕೊಡುತ್ತಿರಲಿಲ್ಲ. ಅವರ ಪ್ರಕಾರ ಉಪನಿಷತ್ ಮಂತ್ರಗಳು ತಮ್ಮ ದಿವ್ಯದೃಷ್ಟಿಗೆ ಗೋಚರವಾದವು ಮಾತ್ರ, ತಮ್ಮದಾಗಿರಲಿಲ್ಲ ಎಂಬ ಅರಿವಿತ್ತು. ಅದರಲ್ಲಿ ತಮ್ಮ ಪಾತ್ರವಾಗಲಿ, ಪ್ರತಿಷ್ಠೆಯಾಗಲಿ ಇರಲಿಲ್ಲವೆಂದು ಅವರು ತಿಳಿದಿದ್ದರು. ಆ ಮಂತ್ರಗಳು ಹೃದಯಾಂತರಾಳದಿಂದ ಕೇಳಿ ಬಂದ ಒಳದನಿಯೆಂದೇ ಭಾವಿಸುತ್ತಿದ್ದರು. ಆದುದರಿಂದಲೇ, ಅವು ಶ್ರುತಿ ಎನಿಸಿದವು. 'ಶ್ರುತಿ'ಯೆಂದರೆ 'ಕೇಳಲ್ಪಟ್ಟಿದ್ದು' ಎಂದರ್ಥ.

ತನ್ನ ಗುರುವಿನ ಉಪದೇಶ ಸಂಪೂರ್ಣವಾಗಿ ಮನದಟ್ಟಾಗಿ, ಆ ಗುರುವಿನ ಅನುಭವವೇ ತನಗೆ ಸಾಕ್ಷಾತ್ತಾಗಿ ಆದನಂತರವೇ ಶಿಷ್ಯನ ಅಧ್ಯಯನ ಪೂರ್ಣವಾಗುತ್ತಿತ್ತು. ಆಗ ಅವನ ವಿದ್ಯೆ ಸ್ವಂತದ್ದಾಗಿ ಪರಿಣಮಿಸುತ್ತಿತ್ತು. ಕಾಲಾನಂತರದಲ್ಲಿ ತನ್ನ ಬಳಿಗೆ ಬಂದ ಶಿಷ್ಯರಿಗೆ ಗುರುವಾಗಿ ತಾನು ಬೋಧಿಸುವುದು ತನ್ನ ಗುರುವಿನ ಅನುಗ್ರಹದಿಂದ ತಿಳಿದ ಉಪದೇಶವೆಂದೇ ಬೋಧಿಸುತ್ತಿದ್ದ. ಹೀಗೆ ಗುರು–ಶಿಷ್ಯರ ಪರಂಪರೆಯಲ್ಲಿ ಬಂದ ಕಾರಣವೇ ಆ ತತ್ತ್ವ ಸಿದ್ಧಾಂತಗಳು ಇಂದಿಗೂ ಮಾನ್ಯವಾಗಿವೆ. ಹಾಗಲ್ಲದೆ ಪ್ರತಿಯೊಬ್ಬನೂ ತನ್ನ ಬುದ್ಧಿಶಕ್ತಿ ವಾಕ್‌ಚಾತುರ್ಯದಿಂದ ತನಗೆ ತೋರಿದಂತೆ ಹೇಳಿದ್ದರೆ, ವೇದಗಳ ಪ್ರಾಮಾಣ್ಯವೇ ಇಂದಿಗೆ ನಿಲ್ಲುತ್ತಿರಲಿಲ್ಲ. ಬೇರೆ ದೇಶಗಳಲ್ಲಿ ಇರುವಂತೆ ನಮ್ಮ ತತ್ತ್ವಶಾಸ್ತ್ರವೂ ಕಾಲಕ್ಕೆ ತಕ್ಕಂತೆ ಬದಲಾಯಿಸುತ್ತಾ ಹೋಗಿರುತ್ತಿತ್ತು.

ಪಾಶ್ಚಾತ್ಯ ರಾಷ್ಟ್ರಗಳ ಇತಿಹಾಸದಲ್ಲಿ ಯುದ್ಧ, ಕ್ರಾಂತಿ, ದಂಗೆ, ಆಪತ್ತು ವಿಪತ್ತುಗಳು ಒಂದೊಂದು ಸಂಭವಿಸಿದ ಮೇಲೂ ಜೀವನದ ಮೌಲ್ಯಗಳನ್ನು ಪುನರ್ಮಾಪನ ಮಾಡಿ ಅದಕ್ಕೆ ತಕ್ಕಂತೆ ತಮ್ಮ ತತ್ತ್ವ, ಆದರ್ಶಗಳನ್ನು ಬದಲಾಯಿಸಿ ರೂಪಿಸಿಕೊಂಡಿದ್ದಾರೆ. ಲೌಕಿಕ ಮೌಲ್ಯಗಳು ವ್ಯತ್ಯಾಸವಾದಂತೆ, ಬೌದ್ಧಿಕ ಮೌಲ್ಯಗಳೂ ಬದಲಾಯಿಸಿವೆ. ತತ್ತ್ವಶಾಸ್ತ್ರದ ಮೌಲ್ಯಗಳೂ ಗ್ರೀಕ್ ತತ್ತ್ವಜ್ಞಾನಿ ಪ್ಲೇಟೋ ಮಹಾಶಯನ ಕಾಲದಿಂದ ಇತ್ತೀಚಿನವರೆಗೆ ವಿಪರೀತವಾಗಿ ಬದಲಾವಣೆಗಳಿಗೆ ಒಳಗಾಗಿವೆ. ಆದರೆ ಭಾರತದ ತಾತ್ತ್ವಿಕರಿಗೆ ವೇದಗಳು ಆರ್ಷೇಯ ಹಾಗೂ ಅಪೌರುಷೇಯ. ಉಪನಿಷತ್ ಸತ್ಯಗಳು ಸಾರ್ವಕಾಲಿಕ. ಅವುಗಳ ವಿವರಣೆ ವ್ಯತ್ಯಾಸವಾಗಬಹುದೇ ಹೊರತು ಅವುಗಳ ಪ್ರಾಮಾಣ್ಯವನ್ನು ಪ್ರಶ್ನಿಸುವಂತಿಲ್ಲ. ನಮ್ಮ ತತ್ತ್ವಶಾಸ್ತ್ರದ ಮಹಲಿಗೆ ಶ್ರುತಿಗಳೇ ಈಗಲೂ ತಳಹದಿ. ಬಾಹ್ಯಪ್ರಪಂಚವು ಎಷ್ಟು ಬದಲಾವಣೆಯಾದರೂ, ನಮ್ಮ ವೈಜ್ಞಾನಿಕ ತಿಳಿವು ಎಷ್ಟೇ ಹೆಚ್ಚಾದರೂ ನಮ್ಮ ಗಾಢನಿದ್ರೆಯ ಅನುಭವವು ವ್ಯತ್ಯಾಸವಾದೀತೇ ? ನಮ್ಮ ಒಳಪ್ರಪಂಚದ ಪರಮಾತ್ಮಾನುಭವ ಬದಲಾದೀತೇ ? ಇಲ್ಲ, ಅದು ಶಾಶ್ವತವಾದ ಜ್ಞಾನ. ಅದನ್ನೇ ನಾವು ಸತ್ಯವೆನ್ನುವುದು. ಇದೇ ನಮ್ಮ ಉಪನಿಷತ್ತುಗಳ ಬೋಧನೆ !

## ಒಂದನೆಯ ಮುಂಡಕ – ಒಂದನೆಯ ಖಂಡ

### ಬ್ರಹ್ಮವಿದ್ಯಾಚಾರ್ಯ ಪರಂಪರೆ

**ಓಂ ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ**
**ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ ।**
**ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾ –**
**ಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥** ೧

**ವಿಶ್ವಸ್ಯ** – ಜಗತ್ತಿನ, **ಕರ್ತಾ** – ಸೃಷ್ಟಿಕರ್ತನೂ, **ಭುವನಸ್ಯ** – ಸೃಷ್ಟಿಸಿದ ಜಗತ್ತನ್ನು, **ಗೋಪ್ತಾ** – ಕಾಪಾಡುವವನೂ (ಆದ), **ಬ್ರಹ್ಮಾ** – ಬ್ರಹ್ಮನು, **ದೇವಾನಾಂ** – ದೇವತೆಗಳಿಗೆ, **ಪ್ರಥಮಃ** – ಮೊದಲನೆಯವನಾಗಿ, **ಸಂಬಭೂವ** – ಆವಿರ್ಭೂತನಾದನು, **ಸಃ** – ಅವನು, **ಸರ್ವವಿದ್ಯಾಪ್ರತಿಷ್ಠಾಂ** – ಸಕಲ ವಿದ್ಯೆಗಳಿಗೂ ಆಶ್ರಯವಾಗಿರುವ, **ಬ್ರಹ್ಮವಿದ್ಯಾಂ** – ಬ್ರಹ್ಮವಿದ್ಯೆಯನ್ನು, **ಜ್ಯೇಷ್ಠಪುತ್ರಾಯ** – (ತನ್ನ) ಹಿರಿಯ ಮಗನಾದ, **ಅಥರ್ವಾಯ** – ಅಥರ್ವನಿಗೆ, **ಪ್ರಾಹ** – ಉಪದೇಶಿಸಿದನು.

(೧) ವಿಶ್ವದ ಸೃಷ್ಟಿಕರ್ತನೂ, ಅದನ್ನು ಪಾಲಿಸುವವನೂ ಆದ ಬ್ರಹ್ಮನು ದೇವತೆಗಳಿಗೆಲ್ಲಾ ಮೊದಲನೆಯವನಾಗಿ ತೋರಿಕೊಂಡನು. ಅವನು ಸರ್ವವಿದ್ಯೆಗಳಿಗೂ ಆಶ್ರಯವಾಗಿರುವ ಬ್ರಹ್ಮವಿದ್ಯೆಯನ್ನು ಅಥರ್ವನೆಂಬ ತನ್ನ ಹಿರಿಯ ಮಗನಿಗೆ ಉಪದೇಶಿಸಿದನು.

ಸಂಸ್ಕೃತದಲ್ಲಿ '**ಬ್ರಹ್ಮ**' ಎಂಬ ಶಬ್ದವು ಪುಲ್ಲಿಂಗ ಮತ್ತು ನಪುಂಸಕಲಿಂಗ ಎರಡರಲ್ಲಿಯೂ ಉಪಯೋಗಿಸಲ್ಪಡುತ್ತದೆ. ಪುಲ್ಲಿಂಗ ಶಬ್ದದಲ್ಲಿ ಅದು ತ್ರಿಮೂರ್ತಿಗಳಲ್ಲೊಬ್ಬನಾದ ಸೃಷ್ಟಿಕರ್ತಾ ಬ್ರಹ್ಮನನ್ನು ಸೂಚಿಸುತ್ತದೆ. ನಪುಂಸಕಲಿಂಗ ಪ್ರಯೋಗದಲ್ಲಿ ಅದು ಯಾರಿಂದ ಬ್ರಹ್ಮಾಂಡವೇ ಆವಿರ್ಭವಿಸಿತೋ ಆ ಪರಬ್ರಹ್ಮವನ್ನು ನಿರ್ದೇಶಿಸುತ್ತದೆ. ಪ್ರಸ್ತುತದಲ್ಲಿ ದೇವತೆಗಳಿಗೆ ಮೊದಲನೆಯವನಾಗಿ ಅಭಿವ್ಯಕ್ತನಾದ ಈ ಬ್ರಹ್ಮನು ಪರಬ್ರಹ್ಮನ ಸ್ವೇಚ್ಛೆಯಿಂದ, ಯಾವ ಸ್ತ್ರೀ ಪುರುಷರ ಸಂಪರ್ಕವೂ ಇಲ್ಲದೆ ಹೊರ ತೋರಿಕೊಂಡವನು. ಈ ಬ್ರಹ್ಮನು ತನ್ನ ಹಿರಿಯ ಮಗನಾದ ಅಥರ್ವ ಎಂಬುವನಿಗೆ ಬ್ರಹ್ಮ ವಿದ್ಯೆಯನ್ನು ಬೋಧಿಸಿದ. ಯಾವ ತಂದೆಯು ತನ್ನ ಮಗನಿಗೆ ಸತ್ಯವಲ್ಲದ ವಿದ್ಯೆಯನ್ನು ಬೋಧಿಸಿಯಾನು ? ಆ ವಿದ್ಯೆಯು ಪೂರ್ಣ ಸತ್ಯವಾದದ್ದೆಂದು ತಿಳಿಸುವುದಕ್ಕೋಸ್ಕರ ಅದನ್ನು ಈ ರೀತಿ ಹೇಳಿದೆ.

ಈ ವಿದ್ಯೆಯನ್ನು ಬ್ರಹ್ಮನೇ ಸ್ವತಃ ಬೋಧಿಸಿದ್ದರಿಂದ ಅದು 'ಬ್ರಹ್ಮವಿದ್ಯೆ' ಎಂದೆನಿಸಿರಬಹುದು. ಅಥವಾ ಉಪನಿಷತ್ತಿನಲ್ಲಿ ಹೇಳಿರುವ ಶಾಶ್ವತನೂ, ಸರ್ವಜ್ಞನೂ ಆದ ಪರಮಾತ್ಮನನ್ನು ಅಂದರೆ, ಪರಮಾರ್ಥ ತತ್ತ್ವವನ್ನು ಕುರಿತು ಹೇಳಿರುವುದರಿಂದ ಇದನ್ನು 'ಬ್ರಹ್ಮವಿದ್ಯೆ' ಎಂದು ಹೇಳಿರಬಹುದು. ಉಪನಿಷದ್ವಾಕ್ಯಗಳ ಪ್ರಕಾರ ಬ್ರಹ್ಮವಿದ್ಯೆಯು ಎಲ್ಲಾ ವಿದ್ಯೆಗಳಿಗೂ ಆಶ್ರಯವಾದ ಮೂಲವಿದ್ಯೆ. ವಿಜ್ಞಾನಗಳಲ್ಲಿ ಶ್ರೇಷ್ಠವಾದ ವಿಜ್ಞಾನ. ಸರ್ವವಿದ್ಯೆಗಳಿಗೂ ಪ್ರತಿಷ್ಠೆಯಾದ ವಿದ್ಯೆ. ಯಾವ ಒಂದನ್ನು ತಿಳಿದರೆ ಎಲ್ಲವೂ ವಿದಿತವಾಗುವುದೋ ಅಂತಹ ಪರಮ ವಿದ್ಯೆ. ಆತ್ಮವಿದ್ಯೆಯೇ ಸಕಲ ಜ್ಞಾನಕ್ಕೂ ಮೂಲ, ಸಾರಭೂತ ಮತ್ತು ಪರಿಪೂರ್ಣ. ಉಳಿದೆಲ್ಲ ಜ್ಞಾನವೂ ಬಾಹ್ಯ ಪ್ರಪಂಚದ ಅಪೂರ್ಣ, ಪರಿಚ್ಛಿನ್ನ, ಅಪರಿಶುದ್ಧ ಜ್ಞಾನ. ಇದು ಸ್ವತಂತ್ರವಲ್ಲ, ಆತ್ಮತತ್ತ್ವವನ್ನೇ ಆಧರಿಸಿದೆ.

ಸಾಮಾನ್ಯವಾಗಿ ನಾವು "ಜ್ಞಾನ" ಎನ್ನುವುದು ಪ್ರಾಪಂಚಿಕ ವಿಷಯವಸ್ತುಗಳ ಪರಿಚ್ಛಿನ್ನ ತಿಳಿವಳಿಕೆ. ಅದು ವ್ಯವಹಾರ ಜ್ಞಾನ, ಲೌಕಿಕ ಅರಿವು. ಅದು ಪೂರ್ಣ ಸತ್ಯವೂ ಅಲ್ಲ, ಸರ್ವಕಾಲಕ್ಕೂ ಸಕಲ ಸ್ಥಿತಿಗಳಲ್ಲೂ ದಿಟವಾಗಿ ನಿಲ್ಲುವಂತಹದೂ ಅಲ್ಲ. ಉಪನಿಷತ್ತಿನಲ್ಲಿ ಹೇಳಿರುವ ಜ್ಞಾನವೇ ಬೇರೆ. ಅದು ನಮ್ಮೊಳಗಿದ್ದು ಸಕಲವನ್ನೂ ತಿಳಿಸುವ ಜ್ಞಾನಶಕ್ತಿ. ಅದು ನಮ್ಮ ಮನಸ್ಸು ಬುದ್ಧಿಗಳಿಗೆ ಅರಿವಿನ ಶಕ್ತಿಯನ್ನು ಕೊಡುವ ಅಂತಃಶ್ಚೇತನ. ಆ ಜ್ಞಾನಶಕ್ತಿಯಿಂದಲೇ ನಮಗೆ ಉಳಿದ ಜ್ಞಾನಗಳ ತಿಳಿವು. ಅದೇ ಜ್ಞಾನದ ಮೂಲ. ಜೀವವಿರುವಾಗ ಮಾತ್ರವೇ ಜ್ಞಾನಕ್ರಿಯೆ ಸಾಧ್ಯ. ಆದ್ದರಿಂದ ಜೀವನದ ಬಗ್ಗೆ, ಜೀವನಕ್ಕೆ ಮೂಲವಾದ ಚೇತನ ಶಕ್ತಿಯ ಬಗ್ಗೆ ನೇರವಾಗಿ ತಿಳಿಸಿಕೊಡುವ ವಿದ್ಯೆಯೇ ಅತ್ಯಂತ ಪ್ರಧಾನವಾದದ್ದು. ಅದು ಬ್ರಹ್ಮವಿದ್ಯೆ. ಆದ್ದರಿಂದಲೇ ಬ್ರಹ್ಮವಿದ್ಯೆಯು **'ಸರ್ವವಿದ್ಯಾಪ್ರತಿಷ್ಠಾಂ'** ಎಂದು ಹೇಳಿರುವುದು.

**ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾ–**
**ಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಮ್ ।**
**ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ**
**ಭಾರದ್ವಾಜೋಽಂಗಿರಸೇ ಪರಾವರಾಮ್ ॥** ೨

**ಬ್ರಹ್ಮಾ** – ಬ್ರಹ್ಮನು, **ಯಾಂ ಬ್ರಹ್ಮವಿದ್ಯಾಂ** – ಯಾವ ಬ್ರಹ್ಮವಿದ್ಯೆಯನ್ನು, **ಅಥರ್ವಣೇ** – ಅಥರ್ವನಿಗೆ, **ಪ್ರವದೇತ** – ಹೇಳಿಕೊಟ್ಟನೋ, **ತಾಂ** – ಅದನ್ನು, **ಪುರಾ** – ಪೂರ್ವದಲ್ಲಿ (ಅಥರ್ವನು), **ಅಂಗಿರೇ** – ಅಂಗಿರನಿಗೆ, **ಉವಾಚ** – ಹೇಳಿಕೊಟ್ಟನು. **ಸಃ** – ಅವನು, **ಭಾರದ್ವಾಜಾಯ ಸತ್ಯವಹಾಯ** – ಭರದ್ವಾಜ ಗೋತ್ರದ ಸತ್ಯವಹನಿಗೆ, **ಪ್ರಾಹ** – ಹೇಳಿದನು, **ಪರಾವರಾಂ** – ಹಿರಿಯರಿಂದ ಕಿರಿಯರಿಗೆ (ಪರಂಪರೆಯಾಗಿ) ಬಂದ ವಿದ್ಯೆಯನ್ನು, **ಭಾರದ್ವಾಜಃ** – ಭಾರದ್ವಾಜನು, **ಅಂಗಿರಸೇ** – ಅಂಗಿರಸ್ಸಿಗೆ, **ಪ್ರಾಹ** – ಹೇಳಿದನು.

**(೨) ಯಾವ ಬ್ರಹ್ಮವಿದ್ಯೆಯನ್ನು ಬ್ರಹ್ಮನು ಅಥರ್ವನಿಗೆ ಹೇಳಿಕೊಟ್ಟನೋ ಅದನ್ನು ಪೂರ್ವದಲ್ಲಿ**

ಅಥರ್ವನು ಅಂಗಿರನಿಗೆ ಹೇಳಿದನು, ಅವನು ಅದನ್ನು ಭರದ್ವಾಜಗೋತ್ರದ ಸತ್ಯವಹನಿಗೆ ಹೇಳಿದನು ಹಿರಿಯರಿಂದ ಕಿರಿಯರಿಗೆ ಬಂದ ಆ ವಿದ್ಯೆಯನ್ನು ಭಾರದ್ವಾಜನು ಅಂಗಿರಸ್ಸಿಗೆ ಬೋಧಿಸಿದನು.

ಪರಮಾತ್ಮಧ್ಯಾನದಲ್ಲಿ ತಲ್ಲೀನರಾಗಿ ಧ್ಯೇಯವಸ್ತುವಿನಲ್ಲಿ ತಾದಾತ್ಮ್ಯ ಹೊಂದಿದ್ದ ರಸನಿಮಿಷಗಳಲ್ಲಿ ತಾವು ಕಂಡ ಪರಮಾರ್ಥ ದರ್ಶನದ ಮಿಂಚುನೋಟದ ದಿವ್ಯಸ್ಫೂರ್ತಿಯಿಂದ ಉದ್ಗರಿಸಿದ ಪವಿತ್ರ ಮಂತ್ರಗಳ ಕರ್ತೃಗಳು ತಾವೇ ಎಂದು ನಮ್ಮ ಋಷಿವರೇಣ್ಯರು ಎಂದೂ ಹೇಳಿಕೊಂಡಿಲ್ಲ. ಅದು ಅಂತಶ್ಚೇತನದಿಂದ ಸ್ಫುರಿಸಿದ ಅಲೌಕಿಕಾನುಭವದ ದಿವ್ಯವಾಣಿಯೇ ಹೊರತು ತಮ್ಮ ಕಲ್ಪನೆಯ ವಾಗ್ಜಾಲವಲ್ಲವೆಂದು ಅವರು ಮನಃಪೂರ್ವಕವಾಗಿ ನಂಬಿದ್ದರು. ಪ್ರತಿಯೊಬ್ಬ ಋಷಿಯೂ ಪರಮಾತ್ಮ ಸಾಕ್ಷಾತ್ಕಾರವಾದ ಮೇಲೆ ತನ್ನ ಜೀವನವನ್ನು ಅತ್ಯಂತ ಸಂಯಮದಿಂದ, ವೈರಾಗ್ಯದಿಂದ ಇದ್ದಷ್ಟು ದಿನವೂ ನಡೆಸುತ್ತಿದ್ದ. ಕೆಲವು ವೇಳೆ ಆಧ್ಯಾತ್ಮಿಕ ಜಿಜ್ಞಾಸುಗಳಾದ ಒಬ್ಬಿಬ್ಬರು ತಮಗೆ ಮನಶ್ಶಾಂತಿ ಸಿಗದಿದ್ದಾಗ ಆತ್ಮಜ್ಞಾನವನ್ನರಸುತ್ತಾ ಬ್ರಹ್ಮನಿಷ್ಠನಾದ ಗುರುವನ್ನು ಹುಡುಕಿಕೊಂಡು ಅಂತಹವರ ಬಳಿಗೆ ಬರುತ್ತಿದ್ದರು. ಅವರನ್ನು ಪರೀಕ್ಷಿಸಿ ಶಿಷ್ಯರನ್ನಾಗಿ ಅಂಗೀಕರಿಸಿದ ನಂತರ ಗುರುಗಳು ಅವರಿಗೆ ಅಧ್ಯಯನ ಮಾಡಿಸಿ ತಕ್ಕ ಮಾರ್ಗದರ್ಶನ ಮಾಡುತ್ತಿದ್ದರು. ಹಾಗೆ ಅವರಿಗೆ ಬೋಧಿಸುತ್ತಿದ್ದಾಗ ತಾವು ಹೇಳುತ್ತಿದ್ದುದನ್ನು ತಮ್ಮ ಜ್ಞಾನದಿಂದ ತಿಳಿದಿದ್ದು ಎಂದು ಹೇಳುತ್ತಿರಲಿಲ್ಲ. ಅದು ತಮ್ಮ ಗುರುಗಳಿಂದ ಹಾಗೆ ಉಪದಿಷ್ಟವಾದದ್ದು ಎಂದು ಬೋಧಿಸುತ್ತಿದ್ದರು. ಆದ್ದರಿಂದಲೇ ನಮ್ಮ ಶ್ರುತಿಗಳ ಪಾವಿತ್ರ್ಯವು ಇಂದಿನವರೆಗೂ ಸುಭದ್ರವಾಗಿ ರಕ್ಷಿಸಲ್ಪಟ್ಟಿದೆ.

ಈ ಮಂತ್ರದಲ್ಲಿ ಯಾರು ಯಾರಿಗೆ ಪರಾವರ ವಿದ್ಯೆಯನ್ನು ಗುರು–ಶಿಷ್ಯ ಪರಂಪರಾನುಗತವಾಗಿ ಹೇಳಿಕೊಟ್ಟರೆಂಬ ವಿವರಣೆ ಉಲ್ಲೇಖಿಸಲ್ಪಟ್ಟಿದೆ. ಕೊನೆಯಲ್ಲಿ ಈ ವಿದ್ಯೆಯು ಅಂಗಿರಸ್ಸಿಗೆ ಹೇಗೆ ಲಭಿಸಿತೆಂದೂ ತಿಳಿಸಿದೆ. ಮುಂದಿನ ಮಂತ್ರಗಳಲ್ಲಿ ಶಿಷ್ಯನಾಗಿ ತನ್ನ ಬಳಿ ಬಂದು ಕೇಳಿದ ಶೌನಕನ ಪ್ರಶ್ನೆಗೆ ಗುರುವಾಗಿ ಅಂಗಿರಸ್ಸನು ಹೇಳಿದ ಉತ್ತರವನ್ನು ಕೊಟ್ಟಿದೆ. ಅಂಗಿರಸ್ಸನು ಕೊಟ್ಟ ಉತ್ತರವೇ ಮುಂಡಕೋಪನಿಷತ್ತಿನ ವಿಚಾರಸರಣಿ !

## ಶೌನಕನ ಪ್ರಶ್ನೆ

**ಶೌನಕೋ ಹ ವೈ ಮಹಾಶಾಲೋಽಂಗಿರಸಂ**
**ವಿಧಿವದುಪಸನ್ನಃ ಪಪ್ರಚ್ಛ ।**
**ಕಸ್ಮಿನ್ನು ಭಗವೋ ವಿಜ್ಞಾತೇ**
**ಸರ್ವಮಿದಂ ವಿಜ್ಞಾತಂ ಭವತೀತಿ॥** ೩.

**ಮಹಾಶಾಲಃ** – ಸದ್ಗೃಹಸ್ಥನಾದ, **ಶೌನಕೋ ಹ ವೈ** – ಶೌನಕನು, **ಅಂಗಿರಸಂ** – ಅಂಗಿರಸ್ಸನನ್ನು, **ವಿಧಿವತ್** – ವಿಧಿಪೂರ್ವಕವಾಗಿ, **ಉಪಸನ್ನಃ** – ಸಮೀಪಿಸಿ, **ಪಪ್ರಚ್ಛ** – ಪ್ರಶ್ನಿಸಿದನು, **ಭಗವಃ** – ಪೂಜ್ಯರೇ, **ಕಸ್ಮಿನ್ ನು ವಿಜ್ಞಾತೇ** – ಯಾವುದನ್ನು ತಿಳಿದರೆ,

**ಇದಂ ಸರ್ವಂ** – ಇದೆಲ್ಲವೂ, **ವಿಜ್ಞಾತಂ ಭವತಿ** – ತಿಳಿದಂತಾಗುವುದು, **ಇತಿ** (ಪಪ್ರಚ್ಛ) - ಹೀಗೆಂದು ಕೇಳಿದನು.

(೩) ಸದ್ಗೃಹಸ್ಥನಾದ ಶೌನಕನು ಅಂಗಿರಸ್ಸನ್ನು ವಿಧಿಪೂರ್ವಕವಾಗಿ ಸಮೀಪಿಸಿ "ಪೂಜ್ಯರೇ, ಯಾವುದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದಂತಾಗುವುದು ?" ಎಂದು ಪ್ರಶ್ನಿಸಿದನು.

ಈ ಮಹದುಪನಿಷತ್ತಿನಲ್ಲಿ ಗುರುವನ್ನು ಪ್ರಶ್ನೆ ಮಾಡುತ್ತಿರುವ ಶಿಷ್ಯನು ಎಲ್ಲೆಡೆಗಳಲ್ಲೂ ಕಾಣಬರುವ ಜನಸಾಮಾನ್ಯರಲ್ಲಿ ಒಬ್ಬನಲ್ಲ. ಜೀವನದಲ್ಲಿ ಸಾಕಷ್ಟು ಅನುಭವವನ್ನು ಪಡೆದು, ತಾನು ತಿಳಿದಿರುವುದು ಅಪೂರ್ಣವೆಂದೂ, ಯಾವುದೋ ಅತಿ ಮುಖ್ಯವಾಗಿ ತಿಳಿಯಬೇಕಾದ ಜ್ಞಾನವನ್ನು ತಾನು ಇನ್ನೂ ಪಡೆದಿಲ್ಲವೆಂದೂ ಅರಿತು, ಅದನ್ನು ತಿಳಿಯುವುದಕ್ಕೋಸ್ಕರ ಗುರುವನ್ನು ವಿಧಿವತ್ತಾಗಿ ಸಮೀಪಿಸಿದ್ದಾನೆ. ಅವನು ಉಪನಿಷತ್ತಿನ ಉಪದೇಶಕ್ಕೆ ತಕ್ಕ ಅಧಿಕಾರಿಯೆಂಬುದನ್ನು ಸೂಚಿಸಲು "ಮಹಾಶಾಲನಾದ ಶೌನಕನು" ಎಂದು ಹೇಳಿದೆ. 'ಮಹಾಶಾಲ' ಎಂದರೆ ಮಹಾಗೃಹಸ್ಥನೆಂದು ಅರ್ಥವಾಗಬಹುದು. ಅಥವಾ ಮಹಾಯಜ್ಞಶಾಲೆಗಳನ್ನು ನಡೆಸಿದವನು ಎಂದೂ ಅರ್ಥವಾಗಬಹುದು.

ಗೌರವಾನ್ವಿತನಾದ ಈ ಮಹಾಶಿಷ್ಯನು ಭಯಭಕ್ತಿಗಳಿಂದ 'ವಿಧಿವತ್ತಾಗಿ', ಎಂದರೆ ಶಾಸ್ತ್ರದಲ್ಲಿ ಹೇಳಿರುವಂತೆ ಗುರುವಿನ ಬಳಿ ಸಾರಿದ. ಈಗಿನ ಕಾಲದಲ್ಲಿ ಒಬ್ಬ ಶ್ರೀಮಂತನೋ, ಅಧಿಕಾರದಲ್ಲಿರುವ ಮಂತ್ರಿ ಮಹೋದಯನೋ ಡಂಭಾಚಾರದಿಂದ ಮೆರವಣಿಗೆಯಲ್ಲಿ ತಾನು ನೋಡಬೇಕಾದವರ ಮನೆಗೆ ಹೋಗುವಂತಲ್ಲ. ಶಿಷ್ಯನು ತಾನು ಸಮಾಜದಲ್ಲಿ ಎಷ್ಟೇ ಪ್ರತಿಷ್ಠಿತನಾಗಿದ್ದರೂ ಗುರುವಿನ ಬಳಿ ಸಾರುವಾಗ ಅತ್ಯಂತ ವಿನಯದಿಂದ, ಗುರುವಿನ ಬಗ್ಗೆ ಗೌರವದಿಂದ, ಆತ್ಮ ಸಮರ್ಪಣಾ ಭಾವದಿಂದ, ತಾನು ಕಲಿಯಬೇಕಾದ ವಿದ್ಯೆಗೋಸ್ಕರ ಎಷ್ಟೇ ಕಷ್ಟವಾದರೂ ಅನುಭವಿಸಲು ಸಿದ್ಧನಾಗಿ ಹೋಗಬೇಕಾದದ್ದು ಶಾಸ್ತ್ರ ಪದ್ಧತಿ. ಆ ರೀತಿ ಗುರುವನ್ನು ಸಮೀಪಿಸುವಾಗ ಶಿಷ್ಯನಾಗಬಯಸಿದವನು ಕೈಯಲ್ಲಿ ಸಮಿತ್ತುಗಳನ್ನೋ ಅಥವಾ ಬೇವಿನಕಡ್ಡಿಗಳನ್ನೋ ಹಿಡಿದು ಹೋಗುವುದು ಸಂಪ್ರದಾಯವಾಗಿತ್ತು. ಸಮಿತ್ತುಗಳು ಯಜ್ಞದಲ್ಲಿ ವಿನಿಯೋಗಿಸುವುದಕ್ಕಾಗಿ, ಬೇವಿನ ಕಡ್ಡಿಗಳು ಹಲ್ಲು ಉಜ್ಜುವುದಕ್ಕಾಗಿ ಬಳಸಲ್ಪಡುತ್ತಿದ್ದವು. ಅರಣ್ಯಗಳಲ್ಲಿ ಆನಂದವಾಗಿ ಜೀವಿಸುತ್ತಿದ್ದ ಬ್ರಹ್ಮನಿಷ್ಠರಿಗೆ ಬೇರಾವ ವಸ್ತುಗಳನ್ನೂ ತೆಗೆದುಕೊಂಡು ಹೋಗಬೇಕಾಗಿರಲಿಲ್ಲ. ಇನ್ನಾವ ರೀತಿಯಲ್ಲೂ ಅವರನ್ನು ಸೇವಿಸುವಂತಿರಲಿಲ್ಲ. ಇದು ಶಿಷ್ಯನಾಗಲಿಚ್ಛಿಸುವವನು ಗುರುವನ್ನು ಮೊದಲಿಗೆ ಸಮೀಪಿಸುವ ಶಾಸ್ತ್ರರೀತಿಯ ಕ್ರಮ. ಹೀಗೆ ಹಿಂದೆ ಇದ್ದ ಪದ್ಧತಿಯಂತೆಯೇ ಇಂದೂ ಮತ್ತು ಮುಂದೆಯೂ ಇರಬೇಕೆಂಬ ಆಶಯವನ್ನು ಈ ಸಂದರ್ಭದಲ್ಲಿ ಶ್ರೀ ಶಂಕರರು ವ್ಯಕ್ತಪಡಿಸಿದ್ದಾರೆ.

**ಈಗಿನ ಕಾಲದಲ್ಲಿ ನಿಜವಾದ ಗುರುವನ್ನು ಕಾಣುವುದೇ ಬಹಳ ಅಪರೂಪ. ಒಂದು ವೇಳೆ ಕಂಡರೂ ಅವರನ್ನು ಸಮೀಪಿಸುವ ಬಗೆಯೇ ನಮಗೆ ತಿಳಿಯದು. ಸಾಕ್ಷಾತ್ಕಾರ ಪಡೆದಿರುವ ಮಹಾತ್ಮರು ಕೊಳಲು ಇದ್ದಂತೆ. ಕೊಳಲು ತಾನಾಗಿ**

ಹಾಡುವುದಿಲ್ಲ. ಅದರೊಳಗೆ ಗಾಳಿ ಊದಿ ಗಾನ ಹೊರಡಿಸಬೇಕು. ನಿಜ, ಮಹಾಗುರುವಿನ ಮುಂದೆ ಭಕ್ತಿಗೌರವಗಳಿಂದ ಮೌನವಾಗಿ ಕುಳಿತಿರುವುದೂ ಸತ್ಸಂಗವೇ. ಆದರೆ ಅದು ಮಹಾತ್ಮನಾದ ಗುರು ಮತ್ತು ಉತ್ತಮ ಶಿಷ್ಯರುಗಳಾಗಿದ್ದರೆ ಮಾತ್ರ ಸಾಧ್ಯ. ಸಾಮಾನ್ಯವಾಗಿ ಸಾಧಾರಣ ಮಟ್ಟದ ಶಿಷ್ಯರಾದವರೋ ಒಂದಾದ ಮೇಲೊಂದು ಪ್ರಶ್ನೆ ಕೇಳಿ ಗುರುಗಳಿಂದ ಸಂದೇಹಗಳನ್ನು ಪರಿಹರಿಸಿಕೊಳ್ಳಬೇಕು. ನಾವು ಕೇಳುವ ಪ್ರಶ್ನೆ ಬಾಲಿಶವಾಗಿರಬಹುದು, ಪ್ರೌಢವಾಗಿರಬಹುದು, ಹುರುಳಿಲ್ಲದ್ದಾಗಿರಬಹುದು ಅಥವಾ ಗಾಢವೂ ಗಂಭೀರವೂ ಆಗಿದ್ದಿರಬಹುದು. ನಾವು ಕೇಳುವ ಪ್ರಶ್ನೆಯಿಂದ ಗುರುವು ನಮ್ಮ ಜ್ಞಾನದ ಮಟ್ಟವನ್ನರಿತು ಅದಕ್ಕೆ ತಕ್ಕಂತೆ ನಮಗೆ ಮಾರ್ಗದರ್ಶನ ಮಾಡುತ್ತಾನೆ. ಪ್ರಶ್ನೆ ಕೇಳದಿದ್ದರೆ ಗುರುವಿನಿಂದ ಯಾವ ಉತ್ತರವೂ ಬರುವುದಿಲ್ಲ.

ಈ ಉಪನಿಷತ್ತಿನಲ್ಲಿ ಶಿಷ್ಯನು ಗುರುವಿನ ಬಳಿಗೆ ಶಾಸ್ತ್ರಸಮ್ಮತವಾದ ರೀತಿಯಲ್ಲಿ ಬಂದು ಬಹಳ ಸಮಂಜಸವಾದ ಹಾಗೂ ಗಹನವಾದ ಪ್ರಶ್ನೆಯೊಂದನ್ನು ಕೇಳುತ್ತಾನೆ. ಅವನ ಪ್ರಶ್ನೆ ಅತ್ಯಂತ ಅರ್ಥವ್ಯಾಪ್ತಿಯುಳ್ಳದ್ದು ಮತ್ತು ಸರ್ವಕಾಲಕ್ಕೂ ಅನ್ವಯವಾಗುವಂತಹದೂ ಆಗಿದೆ. ತಾತ್ತ್ವಿಕದೃಷ್ಟಿಯಿಂದ ಅದು ಅತ್ಯಂತ ಮಹತ್ವಪೂರ್ಣವಾದ ಪ್ರಶ್ನೆ. ಮನಸ್ಸು ಬುದ್ಧಿಗಳು ಯಾವ ಮಟ್ಟವನ್ನು ಮುಟ್ಟಲಾರವೋ ಅಂತಹ ಮಹತ್ತರವಾದ ಅಲೌಕಿಕ ಸಾಮ್ರಾಜ್ಯಕ್ಕೆ ಸೇರಿದ ವಿಚಾರವನ್ನು ಕುರಿತದ್ದು.

ಸಾಧಾರಣವಾಗಿ ವ್ಯವಹಾರ ಪ್ರಪಂಚದಲ್ಲಿ ನಾವು ತಿಳಿಯುವ ಜ್ಞಾನ ಬಾಹ್ಯವಸ್ತುಗಳ ವಿಷಯಕವಾದದ್ದು. ಭೌತವಿಜ್ಞಾನ ಶಾಸ್ತ್ರವಾಗಲಿ, ಖಗೋಳ ಶಾಸ್ತ್ರವಾಗಲೀ ಕೊನೆಗೆ ಜ್ಯೋತಿಷ ಶಾಸ್ತ್ರವಾಗಲಿ ಅಥವಾ ಇನ್ನೂ ಸಾಮಾನ್ಯವಾದ ಮನೆ, ಮೇಜು, ಪುಸ್ತಕ, ಲೇಖನಿ – ಯಾವುದಾದರೂ ಆಗಲಿ ಇವುಗಳ ವಿಚಾರವಾಗಿ ನಾವು ತಿಳಿಯುವ ಜ್ಞಾನವೆಲ್ಲಾ ವಸ್ತುವಿಷಯಕವಾದವು. ವಸ್ತುಗಳ ರೂಪ, ಗುಣ, ಧರ್ಮಗಳನ್ನು ಕುರಿತದ್ದು. ಆದರೆ ಶಿಷ್ಯನು ಇಲ್ಲಿ ಕೇಳುವುದು ಮೂಲಭೂತವಾದ ನಿರ್ವಿಷಯಕ ಜ್ಞಾನವನ್ನು ಕುರಿತು. ಅಂದರೆ, ಯಾವ ಜ್ಞಾನದಿಂದ ಉಳಿದೆಲ್ಲ ಜ್ಞಾನವನ್ನು ಅರಿಯುವುದು ಸಾಧ್ಯವೋ, ಯಾವ ಜ್ಞಾನದ ಬೆಳಕಿನಲ್ಲಿ ನಮಗೆ ಸಕಲ ವಿಷಯಗಳ ಅರಿವೂ ಉಂಟಾಗುವುದೋ, ಯಾವುದರ ಸ್ವಭಾವವೇ ಅರಿವನ್ನುಂಟುಮಾಡುವ ಶಕ್ತಿಯುಳ್ಳದ್ದೋ, ಯಾವ ಜ್ಞಾನದಲ್ಲಿ ಉಳಿದೆಲ್ಲ ಜ್ಞಾನಗಳು ಅಡಗಿವೆಯೋ, ಯಾವುದಿಲ್ಲದಿದ್ದರೆ ನಮಗೆ ಯಾವ ಜ್ಞಾನವೂ ಉಂಟಾಗಲಾರದೋ, ಯಾವ ವಸ್ತು ವಿಷಯಗಳಿಲ್ಲದಿದ್ದರೂ ತಾನೇ ತಾನಾಗಿ ಪ್ರಕಾಶಿಸುತ್ತಿರುವುದೋ ಅಂತಹ ಮೂಲಸ್ವರೂಪದ ಜ್ಞಾನವನ್ನು ತಿಳಿಸಿ ಕೊಡಬೇಕೆಂದು ಶಿಷ್ಯನು ಗುರುವನ್ನು ಪ್ರಾರ್ಥಿಸುತ್ತಾನೆ. ಸಾಗರದ ವಿಚಾರವನ್ನು ಸಂಪೂರ್ಣವಾಗಿ ತಿಳಿದರೆ, ಅದರಲ್ಲಿ ಉಂಟಾಗುವ ಅಲೆ, ತೆರೆ, ನೊರೆ, ಸುಳಿ, ಗುಳ್ಳೆಗಳು–ಇವುಗಳೆಲ್ಲಾ ನಮಗೆ ಅರಿವಾಗುತ್ತವೆ. ಸೂರ್ಯನ ವಿಚಾರವಾಗಿ ಎಲ್ಲವನ್ನೂ ತಿಳಿದರೆ ಅವನ ಶಾಖ, ಬಿಸಿಲು, ನೆರಳು, ಪ್ರತಿಫಲನ ಎಲ್ಲವೂ

ತಿಳಿಯುತ್ತದೆ. ಚಿನ್ನದ ವಿಚಾರವನ್ನು ತಿಳಿದರೆ ಅದರಿಂದ ಮಾಡಬಹುದಾದ ಒಡವೆಗಳನ್ನೆಲ್ಲಾ ತಿಳಿದಂತೆ ಆಗುತ್ತದೆ. ಆದರಂತೆ ಯಾವ ಮೂಲಜ್ಞಾನ, ಶುದ್ಧಜ್ಞಾನ ಅಥವಾ ಪ್ರಜ್ಞಾನವನ್ನು ಅರಿತರೆ ಉಳಿದೆಲ್ಲಾ ಜ್ಞಾನಗಳೂ ತಾವೇ ಅರಿವಿಗೆ ಬರುತ್ತವೆಯೋ ಆ ಜ್ಞಾನವನ್ನು ನನಗೆ ತಿಳಿಸು, ಎಂದು ಶಿಷ್ಯನು ಗುರುವಿಗೆ ದುಂಬಾಲು ಬೀಳುತ್ತಾನೆ. ಸಂಕ್ಷೇಪವಾಗಿ ಹೇಳುವುದಾದರೆ, ಬುದ್ಧಿಗೆ ಅರಿವಿನ ಶಕ್ತಿಯನ್ನು ಕೊಡುವ ಹಾಗೂ ನಮ್ಮ ಬದುಕಿನಲ್ಲಿ ಎಲ್ಲಾ ವಸ್ತುಗಳ ತಿಳಿವನ್ನೂ ನೀಡುವ ಮೂಲಭೂತ ಜ್ಞಾನಸ್ವರೂಪವನ್ನು ತಿಳಿಸಿಕೊಡುವಂತೆ ಶಿಷ್ಯನು ಗುರುವನ್ನು ಪ್ರಾರ್ಥಿಸುತ್ತಾನೆ.

## ಅಂಗಿರಸ್ಸನ ಉತ್ತರ

**ತಸ್ಮೈ ಸ ಹೋವಾಚ – ದ್ವೇ ವಿದ್ಯೇ ವೇದಿತವ್ಯೇ**
**ಇತಿ ಹ ಸ್ಮ ಯದ್ಬ್ರಹ್ಮವಿದೋ ವದಂತಿ ಪರಾ ಚೈವಾಪರಾ ಚ॥ ೪**

**ಸಃ** – ಅವನು (ಅಂಗಿರಸನು), **ತಸ್ಮೈ** – ಅವನಿಗೆ (ಶೌನಕನಿಗೆ) **ಉವಾಚ ಹ** – ಹೇಳಿದನು, **ದ್ವೇ ವಿದ್ಯೇ** – ಎರಡು ವಿದ್ಯೆಗಳು, **ವೇದಿತವ್ಯೇ** – ತಿಳಿಯತಕ್ಕವು, **ಇತಿ ಹ ಸ್ಮ ಯತ್** – ಹೀಗೆಂಬುದನ್ನು, **ಬ್ರಹ್ಮವಿದಃ** – ಬ್ರಹ್ಮಜ್ಞಾನಿಗಳು, **ವದಂತಿ** – ಹೇಳುತ್ತಾರೆ, (**ತೇ** – ಅವು), **ಪರಾ ಚ** – ಪರಾವಿದ್ಯೆ, **ಅಪರಾ ಚ** – ಮತ್ತು ಅಪರಾವಿದ್ಯೆ.

(೪) ಶೌನಕನಿಗೆ ಅಂಗಿರಸನು ಹೇಳಿದನು: "ತಿಳಿಯತಕ್ಕವು ಎರಡು ವಿದ್ಯೆಗಳು ಇವೆ – ಅಪರಾ ಮತ್ತು ಪರಾ" ಹೀಗೆಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ.

"ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ ಆಗುವುದು" ಎಂಬುದು ಶಿಷ್ಯನು ಕೇಳಿದ ಪ್ರಶ್ನೆ. ಇದಕ್ಕೆ ಕೊಟ್ಟ ಉತ್ತರ ಸಮಂಜಸವಾಗಿಲ್ಲ. ಮಾತು ಮರೆಸಿ ಬೇರೆ ಏನನ್ನೋ ಹೇಳುವಂತೆ ತೋರುತ್ತದೆ. ಕೆಲವು ವಿಮರ್ಶಕರು ಈ ರೀತಿಯಾಗಿ ಸುತ್ತಿ ಬಳಸಿ ಹೇಳುವುದೇ ಶಾಸ್ತ್ರಗ್ರಂಥಗಳ ನ್ಯೂನತೆ, ಎಂದು ಆಕ್ಷೇಪಿಸುತ್ತಾರೆ. ಅಂತಹ ವಿಮರ್ಶಕರಿಗೆ ಸರಿಯಾದ ರೀತಿಯ ಸಮಾಧಾನವನ್ನು ಶ್ರೀ ಶಂಕರರು ಇಲ್ಲಿ ಹೇಳಿದ್ದಾರೆ.

ಉತ್ತರ ಕೊಡುವಾಗ ಒಂದು ಕ್ರಮವಿದೆ. ಅದರಲ್ಲಿಯೂ ಬಹಳ ಗಾಢ ಹಾಗೂ ಗೂಢವಾದ ಪ್ರಶ್ನೆ ಕೇಳಿದಾಗ ಅಥವಾ ಪ್ರಶ್ನೆ ಕೇಳಿದವನ ಮನಸ್ಸಿನಲ್ಲಿ ಗೊಂದಲವಿದ್ದಾಗ ಉತ್ತರವನ್ನು ವಿವರಣಾತ್ಮಕವಾಗಿ, ಸಂದೇಹ ನಿವಾರಣೆಯಾಗುವಂತೆ ವಿಶದಪಡಿಸಬೇಕಾಗುತ್ತದೆ. ಅಲ್ಲದೆ ಶಿಷ್ಯನು ಎಲ್ಲಿಯವರೆಗೆ ತಿಳಿದಿದ್ದಾನೋ ಆ ಮಟ್ಟವನ್ನರಿತು ಗುರುವು ಅಲ್ಲಿಂದ ಮುಂದೆ ಅವನು ತಿಳಿಯಬೇಕಾದದ್ದನ್ನು ಬೋಧಿಸಿದರೆ, ಶಿಷ್ಯನಿಗೆ ಚೆನ್ನಾಗಿ ಮನವರಿಕೆಯಾಗುತ್ತದೆ. ಶಿಷ್ಯನ ಪ್ರಶ್ನೆಯನ್ನು ವಿಶ್ಲೇಷಿಸಿ, ವಿದ್ಯೆಯಲ್ಲಿ ಎರಡು ವಿಧ ಎಂದು ಗುರುವು ಹೇಳುತ್ತಾನೆ. ಒಂದು ಅಪರ ವಿದ್ಯೆ, ಲೌಕಿಕವಾದದ್ದು, ಕೀಳುಮಟ್ಟದ್ದು. ಮತ್ತೊಂದು

ಪರಾವಿದ್ಯೆ, ಪರಮಾರ್ಥಕ್ಕೆ ಸೇರಿದ್ದು, ಉತ್ಕೃಷ್ಟವಾದದ್ದು. ಇವುಗಳಲ್ಲಿ ಶಿಷ್ಯನು ಕೇಳಿರುವ ಪ್ರಶ್ನೆ ಪರಾವಿದ್ಯೆಗೆ ಸೇರಿದ್ದು, ಲೌಕಿಕ ವ್ಯವಹಾರದ ಮಟ್ಟವನ್ನು ಮೀರಿದ್ದು ಎಂದು ವಿವರಿಸುತ್ತಾನೆ.

ಶ್ರೀಶಂಕರರ ಪ್ರಕಾರ, ಶಿಷ್ಯನ ಪ್ರಶ್ನೆಯು ಅಂತರಾರ್ಥವೇ ಆ ರೀತಿಯ ಉತ್ತರವನ್ನು ನಿರೀಕ್ಷಿಸುತ್ತದೆ. ಶಿಷ್ಯನು ತನ್ನ ಪ್ರಶ್ನೆಯ ಮೂಲಕ ಪರಮ ಪ್ರಜ್ಞಾನ ಒಂದಿರುವುದಾದರೆ ಅದನ್ನು ತನಗೆ ತಿಳಿಸಿಕೊಡಿ, ಎಂದು ಬೇಡುತ್ತಾನೆ. ಅದರ ಇಂಗಿತವೇನೆಂದರೆ – "ಓ ಗುರುವೇ, ಯಾವ ಒಂದು ಜ್ಞಾನವನ್ನು ತಿಳಿದರೆ, ಉಳಿದ ಎಲ್ಲಾ ಜ್ಞಾನಗಳೂ ತಾವಾಗಿ ಅರಿವಿಗೆ ಬರುತ್ತವೆಯೋ ಅಂತಹ ಜ್ಞಾನವೊಂದುಂಟೆ ? ಹಾಗೆ ಇರುವುದಾದರೆ ಅದು ಯಾವ ರೀತಿಯದು ? ಬೇರೆ ಜ್ಞಾನಗಳಿಗಿಂತ ಹೇಗೆ ಅದು ಭಿನ್ನ ? ನಾನು ಅದನ್ನು ಅರಿಯುವ ಬಗೆ ಹೇಗೆ ?" ಎಂಬುದು.

ವೇದಸಂಸ್ಕೃತಿಯ ಆಗಿನ ಕಾಲದಲ್ಲಿ ಶಿಷ್ಯನು ಅತ್ಯಂತ ಗೌರವದಿಂದ ಗುರುವನ್ನು ಸಮೀಪಿಸಿ, ವಿನಯದಿಂದ ತಾನು ಏನನ್ನು ತಿಳಿಯಲು ಬಯಸಿ ಆತನ ಬಳಿಗೆ ಬಂದಿರುವನೆಂಬುದನ್ನು ಸಂಕ್ಷೇಪವಾಗಿ ವಿಜ್ಞಾಪಿಸಿಕೊಳ್ಳುತ್ತಿದ್ದ. ಸಹೃದಯನಾದ ಗುರುವು ಅವನ ಇಂಗಿತವನ್ನು ಅರಿತು ನಿರ್ವಂಚನೆಯಿಂದ ಅವನು ತಿಳಿಯಲಪೇಕ್ಷಿಸಿದ ಜ್ಞಾನವನ್ನು ತಾನು ಅರಿತಷ್ಟೂ ಸಂಪೂರ್ಣವಾಗಿ ಧಾರೆಯೆರೆಯುತ್ತಿದ್ದ. ಆದ್ದರಿಂದ ಗುರುವು ಈ ರೀತಿ ಹೇಳಿರುವುದು ಬಹಳ ಉಚಿತವಾಗಿದೆ, ಎಂದು ಶ್ರೀ ಶಂಕರರು ತಿಳಿಸುತ್ತಾರೆ.

## ಅಪರಾವಿದ್ಯೆಯ ಸ್ವರೂಪ

**ತತ್ರಾಪರಾ ಋಗ್ವೇದೋ ಯಜುರ್ವೇದಃ**
**ಸಾಮವೇದೋಽಥರ್ವವೇದಃ ಶಿಕ್ಷಾ ।**
**ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ**
**ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ॥** ೫

**ತತ್ರ** – ಅವುಗಳಲ್ಲಿ, **ಅಪರಾ** – ಅಪರಾವಿದ್ಯೆ, (ಯಾವುದೆಂದರೆ), **ಋಗ್ವೇದಃ** – ಋಗ್ವೇದವು, **ಯಜುರ್ವೇದಃ** – ಯಜುರ್ವೇದವು, **ಸಾಮವೇದಃ** – ಸಾಮವೇದವು, **ಅಥರ್ವವೇದಃ** – ಅಥರ್ವವೇದವು, **ಶಿಕ್ಷಾ** – ಶಿಕ್ಷಾ, **ಕಲ್ಪಃ** – ಕಲ್ಪ, **ವ್ಯಾಕರಣಂ** – ವ್ಯಾಕರಣ, **ನಿರುಕ್ತಂ** – ನಿರುಕ್ತ, **ಛಂದಃ** – ಛಂದಸ್ಸು, **ಜ್ಯೋತಿಷಂ** – ಜ್ಯೋತಿಷ್ಯವು, **ಇತಿ** – ಹೀಗೆಂದು. **ಅಥ** – ಇನ್ನು, **ಪರಾ** – ಪರಾವಿದ್ಯೆ, **ಯಯಾ** – ಯಾವುದರಿಂದ, **ತತ್** – ಆ, **ಅಕ್ಷರಂ** – ಅಕ್ಷರವು, **ಅಧಿಗಮ್ಯತೇ** – ಪಡೆಯಲ್ಪಡುತ್ತದೆಯೋ (ಅದು).

**(೫) ಅವೆರಡರಲ್ಲಿ ಅಪರಾವಿದ್ಯೆ ಯಾವುದೆಂದರೆ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಲ್ಕು ವೇದಗಳು, ಶಿಕ್ಷಾ (ಸ್ವರ ವರ್ಣಗಳ ಉತ್ಪತ್ತಿಸ್ಥಾನ ಮೊದಲಾದವುಗಳನ್ನು ತಿಳಿಸುವ ಶಾಸ್ತ್ರ), ಕಲ್ಪ (ವೈದಿಕ ಕರ್ಮಾನುಷ್ಠಾನದ ವಿಧಿಯನ್ನು ತಿಳಿಸುವ ಶಾಸ್ತ್ರ), ವ್ಯಾಕರಣ (ಭಾಷೆಯ ನಿಯಮಗಳನ್ನು ತಿಳಿಸುವ ಶಾಸ್ತ್ರ), ನಿರುಕ್ತ (ಪದಗಳ ಅವಯವಾರ್ಥಗಳನ್ನು ಹೇಳುವ ಶಾಸ್ತ್ರ), ಜ್ಯೋತಿಷ**

(ಸೂರ್ಯ ಚಂದ್ರರೇ ಮೊದಲಾದ ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ). ಇನ್ನು ಪರಾವಿದ್ಯೆ ಯಾವುದೆಂದರೆ, ಯಾವುದರಿಂದ ಆ ಅಕ್ಷರವು (ಕ್ಷರವಿಲ್ಲದ ಆತ್ಮವು) ಪ್ರಾಪ್ತವಾಗುವುದೋ (ಅದು).

ಜ್ಞಾನರಾಶಿಯನ್ನು ವೈಜ್ಞಾನಿಕವಾಗಿ 'ಪರಾ' ಮತ್ತು 'ಅಪರಾ' ವಿದ್ಯೆಗಳೆಂದು ಎರಡು ಭಾಗವಾಗಿ ವಿಂಗಡಿಸಿದ ಮೇಲೆ, ಋಷಿವರ್ಯರು ಅಪರಾ ವಿದ್ಯೆಯ ಹರಪ್ರ...ತುಳುಗಳನ್ನು ತಿಳಿಸಿಕೊಡುತ್ತಾರೆ. ವೇದಗಳ ಅಧ್ಯಯನಕ್ಕೆ ವೇದಾಂಗಗಳು ಪೂರಕ · ...ಾಲ್ಕು ವೇದಗಳು ಮತ್ತು ಆರು ವೇದಾಂಗಗಳು – ಇವೆಲ್ಲವೂ ಅಪರಾವಿದ್ಯೆಯ ಗುಂಪಿಗೇ ಸೇರಿರುತ್ತವೆ, ಎಂಬುದನ್ನು ಸ್ಪಷ್ಟಪಡಿಸುತ್ತಾರೆ.

ಹೊಸದಾಗಿ ಕೇಳಿದ ಈ ವಿಚಾರಧಾರೆಯು ಶಿಷ್ಯನಿಗೆ ಸ್ವಲ್ಪ ವಿಸ್ಮಯವನ್ನೇ ಉಂಟುಮಾಡಿರಬಹುದು. ಶೌನಕನು ಇದುವರೆಗೂ ವೇದೋಕ್ತಿಗಳೆಲ್ಲವನ್ನೂ ಅಂತಿಮ ಸಿದ್ಧಾಂತಗಳೆಂದು ನಂಬಿ, ಅವುಗಳಲ್ಲಿ ಪ್ರೋಕ್ತವಾಗಿರುವ ಕರ್ಮ ವಿಧಿಗಳನ್ನು ತಪ್ಪದೆ ಪಾಲಿಸುತ್ತ ಬಂದಿದ್ದವನು. ಈಗ ತಕ್ಷಣವೇ ಅವನಿಗೆ ಆ ಕರ್ಮವಿಧಿಗಳು ಕೇವಲ ಕೆಳಮಟ್ಟದ ಆಚರಣೆಗಳು ಎಂದು ತಿಳಿದಾಗ ಅವನಿಗೆ ಸ್ವಲ್ಪ ಆತಂಕವಾಗಿದ್ದರೆ ಆಶ್ಚರ್ಯವೇನಿಲ್ಲ. ಆದರೆ ಆ ವೇದ ವೇದಾಂಗಗಳ ಜ್ಞಾನವೂ ಕೆಳಮಟ್ಟದ್ದು ಎಂದು ತಿಳಿದ ಮೇಲೆ ಅವನಿಗೆ ದಂಗುಬಡಿದಂತಾಗಿರಬೇಕು. ಕೂಡಲೇ ಗುರುವು ಎಲ್ಲಕ್ಕಿಂತ ಅತ್ಯುತ್ತಮವಾದ, ಅಲೌಕಿಕವಾದ, ವೇದಾರ್ಥವನ್ನು ಮೀರಿದ ಜ್ಞಾನವೊಂದುಂಟು, ಅದೇ ಪರಾವಿದ್ಯೆ, ಅದರಿಂದಲೇ 'ಅಕ್ಷರಪ್ರಾಪ್ತಿ' ಎಂದಾಗ, ಶಿಷ್ಯನಿಗೆ ಧೈರ್ಯ ಆಸಕ್ತಿಗಳು ಮೂಡುತ್ತವೆ.

ಇಲ್ಲಿ 'ಅಕ್ಷರ' ಎಂಬ ಮಾತಿನಲ್ಲಿ ಬಹಳ ಸ್ವಾರಸ್ಯವಾದ ಶ್ಲೇಷೆ ಇದೆ. 'ಅಕ್ಷರ' ಎಂಬುದಕ್ಕೆ ವರ್ಣಮಾಲೆಯಲ್ಲಿ ಬರುವ ವರ್ಣ ಅಥವಾ ಅಕ್ಷರ ಎಂಬ ಅರ್ಥ ಒಂದು. ಮತ್ತೊಂದು ಅರ್ಥ – 'ಕ್ಷರವಿಲ್ಲದ್ದು' ಎಂದರೆ ನಾಶರಹಿತವಾದದ್ದು ಎಂದು. ಈ ಎರಡನೆಯ ಅರ್ಥದಲ್ಲಿ ಅದು ಪರಬ್ರಹ್ಮನನ್ನು ಸೂಚಿಸುತ್ತದೆ. ಪರಬ್ರಹ್ಮನನ್ನು ಕುರಿತಾದ ವಿದ್ಯೆ ಪರಾವಿದ್ಯೆ.

ಪರಾವಿದ್ಯೆಯು ಸಾಧಕನಿಗೆ ಅವನ ನಿಜ ಸ್ವರೂಪವೂ ಹಾಗೂ ಅಜರಾಮರವೂ ಆದ ಆತ್ಮದ ತಿಳುವಳಿಕೆ ಕೊಡುತ್ತದೆ. ಈ ಜ್ಞಾನವು ಶಬ್ದರಾಶಿಯನ್ನು ಮೀರಿದ್ದು. ವೇದಗಳು ಶಬ್ದರಾಶಿಯಿಂದ ಕೂಡಿದವು. ಆದ್ದರಿಂದ ಈ ಜ್ಞಾನವು ವೇದ ಶಬ್ದಾರ್ಥವನ್ನೂ ಮೀರಿದ್ದು, ಅನುಭವೈಕ ವೇದ್ಯವಾದದ್ದು. ವೇದಗಳಲ್ಲಿ ಬರುವ ಶಬ್ದಗಳ ಅರ್ಥವನ್ನು ಮಾತ್ರ ಗ್ರಹಿಸುತ್ತ ಹೋಗುವವನು ಅವಿದ್ಯೆಯಲ್ಲೇ ಮುಳುಗಿರುತ್ತಾನೆ. ಈ ವಿಚಾರದಲ್ಲಿ ಶ್ರುತಿಯೇ ನಮಗೆ ಎಚ್ಚರಿಕೆ ಕೊಡುತ್ತದೆ. ಆ ಎಚ್ಚರಿಕೆಗಳನ್ನು ಗಮನಿಸದೆ ತನ್ನ ಅಹಂಕಾರದಲ್ಲೇ ಮುಳುಗಿ ಮುಂದೆ ಸಾಗುವವನು ಪರಾವಿದ್ಯೆಯನ್ನು ಪಡೆಯಲಾರ ! ಅವಿದ್ಯೆಯನ್ನು ತೊಲಗಿಸಿಕೊಳ್ಳಲಾರ.

# ಪರಾವಿದ್ಯೆಯ ಸ್ವರೂಪ

**ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣ –**
**ಮಚಕ್ಷುಃ ಶ್ರೋತ್ರಂ ತದಪಾಣಿಪಾದವಮ್ ।**
**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ**
**ಯದ್ ಭೂತಯೋನಿಂ ಪರಿಪಶ್ಯಂತಿ ಧೀರಾಃ ॥** ೬

**ಯತ್ ತತ್** – ಯಾವ ಅದು, (ಅಕ್ಷರವು) **ಅದ್ರೇಶ್ಯಂ** – ಕಾಣುವಂತಹದಲ್ಲದ್ದು, **ಅಗ್ರಾಹ್ಯಂ** – ಗ್ರಹಿಸಲು ಅಸಾಧ್ಯವಾದದ್ದು, **ಅಗೋತ್ರಂ** – ಗೋತ್ರವಿಲ್ಲದ್ದು (ಹುಟ್ಟಿಲ್ಲದ್ದು), **ಅವರ್ಣಂ** – ದ್ರವ್ಯಧರ್ಮಗಳಿಲ್ಲದ್ದು, **ಅಚಕ್ಷುಃ ಶ್ರೋತ್ರಂ** – ಕಣ್ಣು ಕಿವಿಗಳಿಲ್ಲದ್ದು, **ತತ್** – ಅದು, **ಅಪಾಣಿಪಾದಂ** – ಕೈಕಾಲುಗಳಿಲ್ಲದ್ದು, **ನಿತ್ಯಂ** – ಶಾಶ್ವತವಾದದ್ದು, **ವಿಭುಂ** – ಎಲ್ಲಾ ಪ್ರಾಣಿ ರೂಪಗಳಲ್ಲಿಯೂ ಇರುವಂತಹದು, **ಸರ್ವಗತಂ** – ಎಲ್ಲೆಲ್ಲಿಯೂ ವ್ಯಾಪಿಸಿರುವುದು, **ಸುಸೂಕ್ಷ್ಮಂ** – ಅತ್ಯಂತ ಸೂಕ್ಷ್ಮವಾದದ್ದೂ (ಅದ), **ತತ್** – ಅದು, **ಅವ್ಯಯಂ** – ನಾಶರಹಿತವಾದದ್ದು, **ಯತ್** – ಯಾವ, **ಭೂತಯೋನಿಂ** – ಸೃಷ್ಟಿಗೆಲ್ಲಾ ಕಾರಣವಾದ ಇದನ್ನು, **ಧೀರಾಃ** – ವಿವೇಕಿಗಳು, **ಪರಿಪಶ್ಯಂತಿ** – ಎಲ್ಲೆಲ್ಲಿಯೂ ಕಾಣುತ್ತಾರೆ.

(೬) ಅದು ಕಣ್ಣಿಗೆ ಕಾಣದಿರುವಂತಹದು, ಕರ್ಮೇಂದ್ರಿಯಗಳಿಗೆ ವಿಷಯವಲ್ಲದ್ದು, ಮೂಲವಿಲ್ಲದ್ದು, ದ್ರವ್ಯಧರ್ಮಗಳಿಲ್ಲದ್ದು, ಕಣ್ಣು, ಕಿವಿ, ಕೈಕಾಲುಗಳಿಲ್ಲದ್ದು, ಶಾಶ್ವತವಾದದ್ದು, ಸರ್ವಪ್ರಾಣಿಗಳಲ್ಲೂ ಇರುವುದು, ಸರ್ವವ್ಯಾಪಿಯಾದದ್ದು, ಅತಿ ಸೂಕ್ಷ್ಮವಾದದ್ದು ಮತ್ತು ನಾಶರಹಿತವಾದದ್ದು – ಇಂತಹ ಭೂತಯೋನಿಯನ್ನು (ಎಲ್ಲಾ ಪ್ರಾಣಿಗಳಿಗೂ ಕಾರಣವಾದದ್ದನ್ನು) ವಿವೇಕಿಗಳು ಎಲ್ಲೆಲ್ಲಿಯೂ ಕಂಡುಕೊಳ್ಳುತ್ತಾರೆ.

ಯಾವ ವಸ್ತುವನ್ನು ಲಕ್ಷಣಗಳಿಂದ ನಿರ್ದೇಶಿಸಲಾಗುವುದಿಲ್ಲವೋ ಅಂತಹ ವಸ್ತುವನ್ನು ಅತ್ಯಂತ ಸಮರ್ಥವಾಗಿ ಇಲ್ಲಿ ನಿರೂಪಿಸಿದೆ. ಇದು ಸಂಸ್ಕೃತ ಭಾಷೆಯ ವೈಶಿಷ್ಟ್ಯ. ಕಣ್ಣಿಗೆ ಕಾಣದ ಪರಮಾತ್ಮನ ಗುಣವಿಶೇಷಗಳನ್ನು ಹೇಳಿಯೂ ಹೇಳದೆ, ಸ್ವರೂಪವನ್ನು ತಿಳಿಸಿಯೂ ಲಕ್ಷಣಗಳನ್ನು ವ್ಯಕ್ತಪಡಿಸದೆ, ಪರವಸ್ತುವನ್ನು ಅವ್ಯಕ್ತವಾಗಿಯೇ ಉಳಿಸಿಕೊಂಡು ಅನಿರ್ವಚನೀಯವೆಂದು ಹೇಳಿಯೂ ವರ್ಣಿಸುವ ಅತ್ಯಂತ ವಿಶಿಷ್ಟ ಶೈಲಿ ನಮ್ಮ ಪವಿತ್ರ ಗ್ರಂಥಗಳಲ್ಲಿ ಬಳಸಲ್ಪಟ್ಟಿದೆ. ಇಂತಹವುಗಳಲ್ಲಿ ಈ ಮಂತ್ರವು ಬಹಳ ಪ್ರಖ್ಯಾತವಾದದ್ದು. ಇದನ್ನು ಪೂರ್ಣವಾಗಿಯೋ ಭಾಗಶಃವಾಗಿಯೋ ಅನೇಕ ಅಧ್ಯಾತ್ಮಗ್ರಂಥಗಳಲ್ಲಿ ಉದ್ಧರಿಸಿದೆ. ಎಲ್ಲಾ ಮತಗಳ ಧರ್ಮಗ್ರಂಥಗಳು ಪರಮಾತ್ಮನ ವಿಚಾರವಾಗಿ ಹೇಳಬಹುದಾದ ಮಾತುಗಳನ್ನು ಅತ್ಯುತ್ಕೃಷ್ಟ ರೀತಿಯಿಂದ ಇದರಲ್ಲಿ ಹೇಳಿದೆ.

ಅಪರಾವಿದ್ಯೆಯ ವಿಷಯವನ್ನು ತಿಳಿಸಿದ ಮೇಲೆ, ನಮ್ಮ ಮೇಲಿನ ಅಪಾರ ಕರುಣೆಯಿಂದ ಋಷಿಯು ಅಲೌಕಿಕವೂ ಇಂದ್ರಿಯಾತೀತವೂ ಆದ ಪರವಸ್ತುವನ್ನು ಅತ್ಯಂತ ಪರಿಮಿತವಾದ ಲೌಕಿಕ ಮಾತುಗಳಿಂದ ನಮಗೆ ತಿಳಿಸುವ ಪ್ರಯತ್ನ ಮಾಡುತ್ತಾನೆ. ಲೋಕ ವ್ಯವಹಾರದ ಭಾಷೆಯಲ್ಲೇ ಮುಳುಗಿರುವ ನಮಗೆ ನಿಷೇಧ

ರೂಪವಾದ ಹಾಗೂ ಪರಸ್ಪರ ವಿರುದ್ಧವಾಗಿರುವಂತೆ ತೋರುವ ಋಷಿಯ ಭಾಷೆ ಸುಲಭವಾಗಿ ಅರ್ಥವಾಗುವುದಿಲ್ಲ. ಹಾಗೆಂದು ನಮಗೆ ಅರ್ಥವಾಗದ್ದನ್ನು ಅರ್ಥಹೀನವಾದದ್ದೆಂದು ನಾವು ತೆಗಳಬಹುದೇ ? ಜೀವನದ ಅಂತರಾರ್ಥವನ್ನೂ ಜೀವಿಸುವ ಕ್ರಮವನ್ನೂ ತಿಳಿದುಕೊಳ್ಳಲು ನಾವು ಯಾವ ಸಿದ್ಧತೆಯನ್ನೂ ಮಾಡಿಕೊಳ್ಳದಿದ್ದಾಗ ಅದು ನಮಗೆ ತಿಳಿಯುವ ಬಗೆಯಾದರೂ ಹೇಗೆ ? ಏನೊಂದೂ ಯೋಚಿಸದೆ ನಾವು ಬಾಯಿತುಂಬ ಕರ್ಕಶವಾಗಿ ಟೀಕೆ ಮಾಡುತ್ತೇವೆ, ಅಷ್ಟೆ !

ಪ್ರಸ್ತುತವಾಗಿ ಪದಶಃ ವಿಚಾರಮಾಡಿ ಈ ಮಹಾಮಂತ್ರದ ಗೂಢಾರ್ಥವನ್ನು ಸ್ವಲ್ಪ ಮಟ್ಟಿಗಾದರೂ ತಿಳಿಯಲು ಪ್ರಯತ್ನಿಸೋಣ.

**ಅದ್ರೇಶ್ಯಮ್ –**

ಪಾರಮಾರ್ಥಿಕ ಸತ್ಯವು ದೃಶ್ಯವಸ್ತುವಲ್ಲ. ಯಾವುದು ದೃಶ್ಯವೋ ಅದು ನಮ್ಮ ಕಣ್ಣಿಗೆ ಕಾಣುವ ವಸ್ತುವಾಗಿರಬೇಕು. ಆದರೆ ನಾವು ಹುಡುಕುತ್ತಿರುವುದು ಯಾವುದರಿಂದ ಎಲ್ಲವೂ ಗೋಚರಕ್ಕೆ ಬರುತ್ತದೆಯೋ ಆ ಆತ್ಮಚೈತನ್ಯವನ್ನು. ಅದರಿಂದ ಬೇರೆ ಎಲ್ಲಾ ವಸ್ತುಗಳನ್ನೂ ಕಾಣಬಹುದೇ ಹೊರತು ಅದನ್ನೇ ನೋಡುವುದು ಸಾಧ್ಯವಿಲ್ಲ.

ಒಂದು ದೃಷ್ಟಾಂತವನ್ನು ತೆಗೆದುಕೊಳ್ಳೋಣ. ದೂರದರ್ಶಕ ಯಂತ್ರದಿಂದ ವೀಕ್ಷಕನು ಚಂದ್ರನನ್ನು ನೋಡಬಹುದು. ಆದರೆ ಅದೇ ಸಾಧನದಿಂದ ಅವನು ತನ್ನನ್ನೇ ವೀಕ್ಷಿಸಿಕೊಳ್ಳಲಾರ. ಏಕೆಂದರೆ ವೀಕ್ಷಣೆಯ ವಸ್ತುವು ತಾನೇ ಆಗಿದ್ದರೆ ವೀಕ್ಷಣೆಯ ಗಾಜಿನ ಮೂಲಕ ನೋಡುವವನೂ ಅವನೇ ಆಗಿರಲು ಸಾಧ್ಯವಿಲ್ಲ. ಅದು ಬೇರೆ ಯಾರೋ ಆಗಿರಬೇಕು. ವೀಕ್ಷಕ ಮತ್ತು ವೀಕ್ಷಿಸಲ್ಪಡುವ ವಸ್ತು—ಇವೆರಡೂ ಒಂದೇ ಆಗಿರುವುದು ಅಸಾಧ್ಯ. ನಿಮಗೆ ಎಷ್ಟೇ ಆಯಾಸವಾಗಿದ್ದರೂ ನಿಮ್ಮ ಭುಜವನ್ನೇ ಏರಿ ನೀವು ಕುಳಿತುಕೊಳ್ಳುವುದು ಸಾಧ್ಯವೇ ? ನಿಮ್ಮ ಕಣ್ಣುಗಳಿಂದ ಬೇರೆ ಏನನ್ನಾದರೂ ನೋಡಬಹುದು. ಆದರೆ ನಿಮ್ಮ ಕಣ್ಣುಗಳನ್ನೇ ಬೇರೆ ಯಾವ ಸಾಧನವೂ ಇಲ್ಲದೆ ಪ್ರತ್ಯಕ್ಷವಾಗಿ ನಿಮ್ಮ ಕಣ್ಣುಗಳಿಂದ ನೋಡುವುದು ಸಾಧ್ಯವಿಲ್ಲ.

ನೋಡುವ ವಸ್ತು ಮತ್ತು ನೋಡಲ್ಪಡುವ ವಸ್ತುಗಳು ಒಂದೇ ಆಗಿರಲು ಸಾಧ್ಯವಿಲ್ಲವಾದ್ದರಿಂದ, ಎಲ್ಲವನ್ನೂ ನೋಡುವ ಚೈತನ್ಯ ಸ್ವರೂಪವಾದ ಆತ್ಮವಸ್ತುವು 'ಅದೃಶ್ಯ' (ಅದ್ರೇಶ್ಯಮ್) ಎಂದು ಹೇಳಿದೆ.

**ಅಗ್ರಾಹ್ಯಮ್ –**

ಅಗ್ರಾಹ್ಯವಾದದ್ದು ಎಂದರೆ ಕರ್ಮೇಂದ್ರಿಯಗಳಿಗೆ ವಿಷಯವಲ್ಲದ್ದು ಎಂದು ಅರ್ಥ. ಹಾಗಾದರೆ ಮನಸ್ಸಿನಿಂದ ಅದನ್ನು ಗ್ರಹಿಸಬಹುದೋ ಎಂಬ ಸಂದೇಹವು

ನಮಗೆ ಬರಬಹುದು. ಶ್ರುತಿಯು ಆ ಸಂದೇಹವನ್ನು ಪರಿಹರಿಸುತ್ತದೆ. ಮನಸ್ಸಿನಿಂದ ಆತ್ಮಸ್ವರೂಪವನ್ನು ತಿಳಿಯುವುದೂ ಸಾಧ್ಯವಿಲ್ಲ. ಏಕೆಂದರೆ ತಿಳಿವನ್ನು ಕೊಡುವ ಶಕ್ತಿಯು ಮನಸ್ಸಿಗೆ ಉಂಟಾಗಿರುವುದೇ ಆತ್ಮಶಕ್ತಿಯಿಂದ. ಯಾವ ಚೈತನ್ಯದ ಶಕ್ತಿಯಿಂದ ತಿಳಿವಳಿಕೆಯ ಸಾಮರ್ಥ್ಯ ನಮ್ಮಲ್ಲಿ ಉಂಟಾಗಿದೆಯೋ ಆ ಮೂಲಸ್ವರೂಪದ ಶಕ್ತಿಯನ್ನು ಬಳುವಳಿಯಂತೆ ನಮಗೆ ದತ್ತವಾಗಿರುವ ತಿಳಿವಿನಿಂದ ನಾವು ಅರಿಯಲಾರೆವು.

ಆತ್ಮಚೈತನ್ಯವು ಮನಸ್ಸಿನ ಹಿಂಬದಿಯಲ್ಲಿದ್ದು ಅದಕ್ಕೆ ಗ್ರಹಣ ಶಕ್ತಿಯನ್ನು ಕೊಡುತ್ತಿರುವಾಗ, ಮನಸ್ಸು ಸ್ವತಂತ್ರವಾಗಿ ತನಗೆ ಗ್ರಹಣ ಶಕ್ತಿಯನ್ನು ಕೊಡುತ್ತಿರುವ ವಸ್ತುವನ್ನು ಹೇಗೆ ತಿಳಿಯಬಲ್ಲದು ? ಮನಸ್ಸು ಯಾವುದಾದರೂ ಒಂದು ವಸ್ತುವನ್ನು ಗ್ರಹಿಸಬೇಕಾದರೆ, ಅದು ತಾನು ಗ್ರಹಿಸಬೇಕಾದ ವಿಷಯದಿಂದ ಪ್ರತ್ಯೇಕವಾಗಿ ನಿಂತು ವೀಕ್ಷಿಸಬೇಕು. ಆದರೆ ಹಾಗೆ ಆತ್ಮಶಕ್ತಿಯಿಂದ ಬೇರೆಯಾದ ಕೂಡಲೇ ಮನಸ್ಸು ತನ್ನ ಶಕ್ತಿಯನ್ನು ಕಳೆದುಕೊಂಡು ನಿರ್ಜೀವವಾಗುತ್ತದೆ, ಜಡವಾಗುತ್ತದೆ. ಆಗ ಅದಕ್ಕೆ ಯಾವ ಗ್ರಹಣ ಶಕ್ತಿಯೂ ಇರಲು ಸಾಧ್ಯವಿಲ್ಲ. ಆದ್ದರಿಂದ ಮನಸ್ಸಿನಿಂದಲೂ ಅಗ್ರಾಹ್ಯ. ತಿಳಿವಳಿಕೆಗೆ ನಮಗಿರುವ ಸಾಧನವೆಂದರೆ, ಮನಸ್ಸು ಒಂದೇ. ಅದರಿಂದಲೂ ತಿಳಿಯಲಸಾಧ್ಯವೆಂದಮೇಲೆ ಆತ್ಮವು ನಮಗೆ ಅಗ್ರಾಹ್ಯವೇ !

**ಅಗೋತ್ರಮ್ –**

'ಅಗೋತ್ರಂ' ಎಂದರೆ ಮೂಲವಿಲ್ಲದ್ದು ಎಂದರ್ಥ. ಮೂಲವಿದೆ ಎಂದರೆ ಅದು ಬೇರೊಂದು ವಸ್ತುವಿನಿಂದ ಉತ್ಪನ್ನವಾಗಿರಬೇಕು. ಯಾವುದು ಹುಟ್ಟಿಗೆ ಒಳಗಾಗಿದೆಯೋ ಅದಕ್ಕೆ ಸಾವು ಅಥವಾ ಕೊನೆ ಇದ್ದೇ ಇರಬೇಕು. ಆದರೆ ಆತ್ಮವು ಅಕ್ಷರವಾದದ್ದು. ಅಂದರೆ ನಾಶವಿಲ್ಲದ್ದು. ಆದ್ದರಿಂದ ಅದಕ್ಕೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಹುಟ್ಟು ಇದೆ ಎಂದು ಭಾವಿಸುವುದಾದರೆ, ಹುಟ್ಟುವುದಕ್ಕೆ ಮುಂಚೆ ಅದು ಇರಲಿಲ್ಲ ಎಂಬ ಭಾವ ಉಂಟಾಗುತ್ತದೆ. ಅದು ಇಲ್ಲದ ಕಾಲವೇ ಇರಲಿಲ್ಲ. ಎಲ್ಲಾ ಕಾಲಗಳಲ್ಲಿಯೂ ಇದ್ದ, ಇರುವ ಸದ್ವಸ್ತುವೇ ಅಕ್ಷರ.

**ಅವರ್ಣಮ್ –**

ವರ್ಣಂ ಎಂದರೆ ವರ್ಣಿಸುವಂಥ ದ್ರವ್ಯಧರ್ಮಗಳಿರುವ ವಸ್ತು. ವಿಶೇಷಣಗಳು ವಸ್ತುವಿನ ಭೌತಿಕ ಅಥವಾ ರಾಸಾಯನಿಕ ಗುಣಧರ್ಮಗಳನ್ನು ಸೂಚಿಸುತ್ತವೆ. ಪ್ರಪಂಚದಲ್ಲಿ ಕಂಡುಬರುವ ಸಕಲ ವಸ್ತುಗಳಿಗೂ ಯಾವುದಾದರೂ ಗುಣ ಅಥವಾ ಧರ್ಮಗಳು ಇದ್ದೇ ಇರುತ್ತವೆ. ಆ ಗುಣಧರ್ಮಗಳೇ ಆ ವಸ್ತುಗಳ ಲಕ್ಷಣಗಳು. ಅವುಗಳ ಮೂಲಕವೇ ನಾವು ವಸ್ತುವನ್ನು ಗುರುತಿಸುತ್ತೇವೆ. ಗುಣಧರ್ಮಗಳು ಸ್ವತಂತ್ರವಾಗಿ ತಾವಾಗಿಯೇ ಇರಲು ಸಾಧ್ಯವಿಲ್ಲ. ಅವು ವಸ್ತುವನ್ನು ಆಶ್ರಯಿಸಿಕೊಂಡೇ ಇರತಕ್ಕವು. ಈ ಗುಣಧರ್ಮಗಳು ಇಂದ್ರಿಯ,

ಮನಸ್ಸುಗಳಿಂದ ಗ್ರಾಹ್ಯವಾದವು. ಪ್ರತಿಯೊಂದು ದ್ರವ್ಯಕ್ಕೂ ವಿಶಿಷ್ಟವಾದ ಧರ್ಮಗಳು ಇರುತ್ತವೆ. ಆದರೆ ಯಾವ ವಸ್ತುವು ಇಂದ್ರಿಯ ಮನಸ್ಸುಗಳಿಗೆ ಗ್ರಾಹ್ಯವಲ್ಲವೋ, ಅದಕ್ಕೆ ಯಾವ ಗುಣ, ಧರ್ಮ, ಲಕ್ಷಣಗಳೂ ಇರಲು ಸಾಧ್ಯವಿಲ್ಲ. ಗುಣ, ಧರ್ಮಗಳುಳ್ಳ ವಸ್ತುವು ನಿರ್ದಿಷ್ಟವೂ, ಪರಿಮಿತವೂ, ವಿನಾಶಿಯೂ ಆಗಿರಬೇಕು. ಆದರೆ ಅಕ್ಷರವು ನಿರ್ಗುಣವಾದದ್ದು. ಆದ್ದರಿಂದ ಅದು 'ಅವರ್ಣ'.

**ಅಚಕ್ಷುಃ ಶ್ರೋತ್ರಂ ತದಪಾಣಿಪಾದಮ್ –**

ಅಕ್ಷರವಾದ ಪರವಸ್ತುವು ನಮಗೆ ಅಗೋಚರವಾದದ್ದೆಂದು ಶ್ರುತಿಯು ಈಗಾಗಲೇ ತಿಳಿಸಿದೆ. ಹಾಗಾದರೆ ನಾವು ಅದನ್ನು ನೋಡಲಾರೆವಾದರೂ ಅದು ನಮ್ಮನ್ನು ನೋಡಬಹುದೆಂದು ನಾವು ಊಹಿಸಬಹುದು. ಅದೂ ಅಸಾಧ್ಯವೆಂದು ಶ್ರುತಿಯು ಇಲ್ಲಿ ಹೇಳುತ್ತದೆ. ಪರವಸ್ತುವಿಗೆ ಯಾವ ಕರಣವೂ ಇಲ್ಲ. ಅದಕ್ಕೆ ಕರ್ಮೇಂದ್ರಿಯಗಳಾಗಲಿ, ಜ್ಞಾನೇಂದ್ರಿಯಗಳಾಗಲಿ ಇಲ್ಲ. ಅದಕ್ಕೆ ಯಾವ ಕರಣಗಳ ಅಗತ್ಯವೂ ಇಲ್ಲ. ಯಾವನು ಸರ್ವಜ್ಞನೋ, ಸರ್ವವಿದನೋ, ಸರ್ವಗತನೋ, ಅವನಿಗೆ ಬೇರಾವ ಸಾಧನದ ಅಗತ್ಯವೂ ಇರುವುದಿಲ್ಲ. ಅವನಿಗೆ ಅಜ್ಞಾನವೂ ಇಲ್ಲ. ಅವನು ತಿಳಿಯಬೇಕಾದದ್ದು ಏನೂ ಇರುವುದಿಲ್ಲ. ಅವನಲ್ಲಿ ಬೇರಾವ ವಸ್ತುವೂ, ಅವಯವವೂ ಇರುವುದಿಲ್ಲ. ಸರ್ವಗತನಾದವನಿಗೆ ಯಾವ ಕರ್ಮದ ಅಗತ್ಯವೂ ಇಲ್ಲ. ಕರ್ಮ ಮಾಡುವುದೂ ಸಾಧ್ಯವಿಲ್ಲ. ಕರ್ಮ ಮಾಡಲು ಜಾಗವು ಅಗತ್ಯ. ಅವನಿಲ್ಲದ ಸ್ಥಳವೇ ಇಲ್ಲದ ಮೇಲೆ ಕರ್ಮ ಮಾಡುವುದಾದರೂ ಎಲ್ಲಿ? ಕರ್ಮೇಂದ್ರಿಯಗಳೇ ಇಲ್ಲದ ಮೇಲೆ ಕರ್ಮ ಮಾಡುವುದಾದರೂ ಹೇಗೆ? ಶುದ್ಧಚೈತನ್ಯ ಸ್ವರೂಪವಾದ ಪರವಸ್ತುವಿಗೆ ಚಲನೆಯೇ ಸಾಧ್ಯವಿಲ್ಲವಾದ್ದರಿಂದ ಕರ್ಮವೂ ಸಾಧ್ಯವಿಲ್ಲ. ಅಲ್ಲದೆ, ಕರ್ಮದ ಅಗತ್ಯವಿರುವುದು ಯಾವುದಾದರೂ ಫಲವನ್ನು ಪಡೆಯುವುದಕ್ಕಾಗಿ. ಪರವಸ್ತುವು ಪರಿಪೂರ್ಣವಾದ್ದರಿಂದ ಅದಕ್ಕೆ ಯಾವ ಫಲದ ಅಗತ್ಯವೂ ಇಲ್ಲ. ಆದ ಕಾರಣ ಅದಕ್ಕೆ ಚಕ್ಷುಗಳಿಲ್ಲ, ಶ್ರೋತ್ರವೂ ಇಲ್ಲ. ಕೈಕಾಲುಗಳೂ ಇಲ್ಲ. ಅವುಗಳ ಅಗತ್ಯವೂ ಇಲ್ಲ.

**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಮ್ –**

ಹಿಂದಿನ ವಾಕ್ಯಗಳಲ್ಲಿ ಹೇಳಿರುವ ಸ್ವರೂಪ ಲಕ್ಷಣಗಳನ್ನು ಅನುಸರಿಸಿಯೇ ಇಲ್ಲಿನ ವಿಶೇಷಣಗಳನ್ನು ಹೇಳಿದೆ ಅವುಗಳನ್ನು ಒಪ್ಪಿದ ಮೇಲೆ ತಾರ್ಕಿಕವಾಗಿ ಈ ವಿಶೇಷಣಗಳನ್ನೂ ಒಪ್ಪಲೇಬೇಕಾಗುವುದು. ಯಾವುದಕ್ಕೆ ಹುಟ್ಟು ಎಂಬುವುದಿಲ್ಲವೋ ಅದಕ್ಕೆ ಅಂತ್ಯವೂ ಇಲ್ಲ. ಅಂತ್ಯವಿಲ್ಲದ್ದು ಶಾಶ್ವತ, ನಿತ್ಯ. ನಿತ್ಯವಾದದ್ದು ಯಾವುದಕ್ಕೂ ಅಧೀನವಲ್ಲವಾದ್ದರಿಂದ, ಎಲ್ಲದಕ್ಕೂ ಅದೇ ಒಡೆಯ, ಸ್ವಾಮಿ, ಪ್ರಭು. 'ವಿಭು' ಎಂದರೆ ಬ್ರಹ್ಮನು ಮೊದಲಾಗಿ ಸಕಲ ಪ್ರಾಣಿಗಳ ರೂಪದಲ್ಲಿ ವಿಧವಿಧವಾಗಿ ಸರ್ವತ್ರವೂ ಇರುವುದು. ವಿಭುವಾಗಿರತಕ್ಕದ್ದು ಸರ್ವವ್ಯಾಪಿಯಾಗಿರಲೇಬೇಕು. ಸರ್ವವ್ಯಾಪಿಯಾದದ್ದು ಆಕಾಶದಂತೆ ವಿಶ್ವವನ್ನೆಲ್ಲಾ

ಆವರಿಸಿರಬೇಕು. ಅಂತಹದು ಅತ್ಯಂತ ಸೂಕ್ಷ್ಮ ಅದು ಅವಿನಾಶಿಯೂ, ಅವ್ಯಯವೂ ಆಗಿರಲೇ ಬೇಕು.

ಪರವಸ್ತುವನ್ನು ಈ ರೀತಿ ಅಲೌಕಿಕ ಲಕ್ಷಣಗಳಿಂದ ಅಂಗಿರಸನು ವಿವರಿಸಿದಾಗ ಶೌನಕನಿಗೆ ಅತ್ಯಂತ ಗೊಂದಲ ಹಾಗೂ ದಿಗ್ಭ್ರಮೆ ಆಗಿರಬಹುದು. ಇಂತಹ ಪರಮಾರ್ಥ ವಸ್ತುವನ್ನು ತಿಳಿಯುವುದು ಸಾಧ್ಯವೇ ಎಂದೂ ಎನಿಸಿರಬಹುದು. ಅವನ ಮನಸ್ಸಿನ ವಿಹ್ವಲವನ್ನು ಅರಿತ ಅಂಗಿರಸ್ಸನು ಕೂಡಲೇ ಅವನ ಸಂಶಯವನ್ನು ನಿವಾರಿಸಲು ಯತ್ನಿಸುತ್ತಾನೆ. "ಏಕಾಗ್ರವೂ ಪರಿಶುದ್ಧವೂ ಆದ ಸೂಕ್ಷ್ಮಬುದ್ಧಿಯು ಆ ಪರತತ್ತ್ವದ ಅನುಭವ ಜ್ಞಾನವನ್ನು ಪಡೆಯಬಲ್ಲದು," ಎಂದು ಕೂಡಲೇ ಆಶ್ವಾಸನೆ ಕೊಡುತ್ತಾನೆ. ಇಲ್ಲಿ ಉಪಯೋಗಿಸಿರುವ ಶಬ್ದ ಕೇವಲ 'ಪಶ್ಯಂತಿ' ಎಂದಲ್ಲ; 'ಪರಿಪಶ್ಯಂತಿ' ಎಂಬುದು. ಆ ಅನುಭವವು ಒಂದು ಗಳಿಗೆ ತೋರಿ ಮರೆಯಾಗುವಂತಹುದಲ್ಲ. ಪೂರ್ಣ ತಿಳಿವನ್ನು ಕೊಡುವ, ಶಾಶ್ವತ ಜ್ಞಾನವನ್ನುಂಟು ಮಾಡುವ ಅನುಭವ ಎಂದು ಹೇಳುವುದಕ್ಕೋಸ್ಕರ "ಪರಿಪಶ್ಯಂತಿ" ಎಂದು ಉದ್ದೇಶಪೂರ್ವಕವಾಗಿ ಋಷಿಯು ಹೇಳಿದ್ದಾನೆ. ಇಂದ್ರಿಯಗ್ರಾಹ್ಯವಾದ ನಾಮರೂಪಗಳ ಜಗತ್ತಿಗೆ ಮೂಲಭೂತಸ್ವರೂಪವಾದ ಪರಮಾರ್ಥ ವಸ್ತುವು ಜ್ಞಾನಿಗೆ ಪರಿಚಯವಾಗುತ್ತದೆ, ಎಂದು ಮಂತ್ರವು ತಿಳಿಸುತ್ತದೆ.

**ಭೂತಯೋನಿಂ —**

ಆಕಾಶಾದಿ ಭೂತಗಳಿಗೆ ಕಾರಣವಾಗಿರುವ 'ಬ್ರಹ್ಮ' ಎಂದರ್ಥ. ಪ್ರತಿಯೊಂದು ಘಟನೆಗೂ ಒಂದೊಂದು ಕಾರಣವಿರುತ್ತದೆ. ಕಾರಣವಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ. ಪ್ರತಿಯೊಂದು ಕಾರ್ಯವೂ ಒಂದು ಅಥವಾ ಅನೇಕ ಕಾರಣಗಳ ಪರಿಣಾಮ. ಕಾರಣವನ್ನು ಅರಸುವುದೇ ಬುದ್ಧಿಯ ಆದ್ಯ ಕೆಲಸ. ಕಾರಣ – ಕಾರ್ಯದ ಸಂಬಂಧ ಅರಿಯಲಾಗದಿದ್ದಾಗ ಬುದ್ಧಿಯ ಅಸ್ತಿತ್ವವೇ ನಿರರ್ಥಕವಾಗಿ ತೋರುವುದು. ಆದ್ದರಿಂದ ಗುರುವು ಬುದ್ಧಿಯ ಮಟ್ಟದಲ್ಲೇ ಇರುವ ಶಿಷ್ಯನಿಗೆ ಕಾರ್ಯ–ಕಾರಣದ ಸಂಬಂಧ ರೂಪದಲ್ಲೇ ಬೋಧಿಸಬೇಕಾಗುತ್ತದೆ. ಅದಕ್ಕಾಗಿ ಶ್ರುತಿಯು ಪರಿಣಾಮಕಾರಿಯೂ ವಿನಾಶ ಸ್ವಭಾವವುಳ್ಳದ್ದೂ ಆಗಿರುವ ನಾಮರೂಪಗಳ ಪ್ರಪಂಚಕ್ಕೆ ಈ ಹಿಂದೆ ಹೇಳಿರುವ ಮಂತ್ರದಲ್ಲಿನ ಅಪರಿಣಾಮಿಯೂ ಶಾಶ್ವತವೂ ಆದ ಸದ್ವಸ್ತುವೇ ಕಾರಣ ಎಂದು ವಿವರಿಸುತ್ತದೆ. ಆದರೆ ಸ್ವಲ್ಪ ಯೋಚಿಸಿದಾಗ ಶಾಶ್ವತ ವಸ್ತುವಿನಿಂದ ಅಶಾಶ್ವತವಾದ ವಸ್ತು ಉತ್ಪತ್ತಿಯಾಯಿತೆಂದು ಹೇಳುವುದು ಆಭಾಸವಾಗಿ ತೋರುತ್ತದೆ. ಶ್ರುತಿಯು ಮುಂದೆ ವಿವರಿಸುತ್ತಾ ಕೊನೆಗೆ ಅಶಾಶ್ವತವಾದ ವಿನಾಶಿ ಪ್ರಪಂಚವು ವಾಸ್ತವವಾಗಿ ಇರಲೇ ಇಲ್ಲ, ಅದು ಇದೆಯೆಂದು ತೋರಿದ್ದು ನಮ್ಮ ಬುದ್ಧಿಯಲ್ಲಿ ಮಾತ್ರ – ಎಂದು ತೋರಿಸಿ ಕೊಡುತ್ತದೆ. ಇದ್ದುದು, ಇರುವುದು ಒಂದೇ. ಅದೇ ಪರಮಾರ್ಥ ವಸ್ತು, ಅದಕ್ಕೆ ಎರಡನೆಯದೆಂಬುದೇ ಇಲ್ಲ. ಸೂರ್ಯ, ಚಂದ್ರ, ನಕ್ಷತ್ರ, ಆಕಾಶ,

ಕೊನೆಗೆ ಬ್ರಹ್ಮಾಂಡ ಯಾವುದೂ ಇಲ್ಲ. ಗುರುವಿಲ್ಲ, ಶಿಷ್ಯನಿಲ್ಲ. ಕಡೆಗೆ ನೀವು ನಾನೆಂಬುದೂ ಇಲ್ಲ. ಇರುವುದು ಸದ್ವಸ್ತು ಒಂದೇ !

## ಸೃಷ್ಟಿಕ್ರಮ

**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**
**ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।**
**ಯಥಾ ಸತಃ ಪುರುಷಾತ್ ಕೇಶಲೋಮಾನಿ**
**ತಥಾಕ್ಷರಾತ್ ಸಂಭವತೀಹ ವಿಶ್ವಮ್ ॥** ೭

**ಯಥಾ** – ಹೇಗೆ, **ಊರ್ಣನಾಭಿಃ** – ಜೇಡರಹುಳುವು (ನೂಲನ್ನು), **ಸೃಜತೇ** – ಹೊರಕ್ಕೆ ತರುತ್ತದೆಯೋ, **ಚ** – ಮತ್ತು, **ಗೃಹ್ಣತೇ** – ಒಳಕ್ಕೆ ತೆಗೆದುಕೊಳ್ಳುತ್ತದೆಯೋ, **ಯಥಾ** – ಹೇಗೆ, **ಪೃಥಿವ್ಯಾಂ** – ಭೂಮಿಯಲ್ಲಿ, **ಓಷಧಯಃ** – ಸಸ್ಯಗಳು, **ಸಂಭವಂತಿ** – ಹುಟ್ಟುವುವೋ, **ಯಥಾ** – ಹೇಗೆ, **ಸತಃ ಪುರುಷಾತ್** – ಜೀವಂತ ಮನುಷ್ಯನಿಂದ, **ಕೇಶಲೋಮಾನಿ** – ದೊಡ್ಡ ಮತ್ತು ಸಣ್ಣ ಕೂದಲುಗಳು, **ಸಂಭವಂತಿ** – ಹುಟ್ಟುತ್ತವೆಯೋ, **ತಥಾ** – ಹಾಗೆಯೇ, **ಇಹ** – ಇಲ್ಲಿ, **ಅಕ್ಷರಾತ್** – ನಾಶರಹಿತವಾದ ಅಕ್ಷರದಿಂದ, **ವಿಶ್ವಂ** – ಸಮಸ್ತ ಜಗತ್ತೂ, **ಸಂಭವತಿ** – ಉಂಟಾಗುತ್ತದೆ.

(೭) ಹೇಗೆ ಜೇಡರ ಹುಳುವು ನೂಲನ್ನು ಹೊರಕ್ಕೆ ತಂದು ಪುನಃ ಒಳಕ್ಕೆ ಎಳೆದುಕೊಳ್ಳುತ್ತದೆಯೋ, ಹೇಗೆ ಭೂಮಿಯಲ್ಲಿ ಗಿಡಮರಗಳು ಹುಟ್ಟುತ್ತವೆಯೋ, ಹೇಗೆ ಜೀವಂತನಾದ ಮನುಷ್ಯನಿಂದ ಕೇಶಲೋಮಗಳು (ಕೂದಲು ಮತ್ತು ರೋಮಗಳು) ಬೆಳೆಯುತ್ತವೆಯೋ, ಹಾಗೆಯೇ ಇಲ್ಲಿ ಅಕ್ಷರದಿಂದ ಸಮಸ್ತ ಜಗತ್ತೂ ಉಂಟಾಗುತ್ತದೆ

ಇಲ್ಲಿ ಮೂರು ಉದಾಹರಣೆಗಳನ್ನು ಕೊಟ್ಟಿರುವುದು ಒಂದೇ ವಿಷಯವನ್ನು ಸ್ಪಷ್ಟಪಡಿಸುವುದಕ್ಕೋಸ್ಕರ. ಸಾಮಾನ್ಯವಾಗಿ ಋಷಿಗಳು ಮಾತಿನಲ್ಲೂ ಬಹಳ ಸಂಯಮ. ಅತ್ಯಲ್ಪ ಮಾತುಗಳಲ್ಲೇ ಅತ್ಯಂತ ಗಹನವಾದ ವಿಚಾರಗಳನ್ನು ಮಂತ್ರಗಳ ಮೂಲಕ ವ್ಯಕ್ತಪಡಿಸುತ್ತಾರೆ. ಅವರು ಉಪಮಾನಗಳನ್ನು ಕೊಡುವುದು ನೇರವಾಗಿ ಮಾತುಗಳಲ್ಲಿ ವಿವರಿಸುವುದು ಕಷ್ಟವಾದಾಗ ಮಾತ್ರ. ಅಂದರೆ ಕೇವಲ ವಿಷಯಗ್ರಹಣದ ಸೌಲಭ್ಯಕ್ಕಾಗಿ. ವಿನಾಕಾರಣವಾಗಿ ಅಥವಾ ಸಾಹಿತ್ಯ ಶೈಲಿಯ ಧೋರಣೆಗಾಗಿ ಉಪಮಾನಗಳನ್ನು ಶ್ರುತಿಯ ಮಂತ್ರಗಳಲ್ಲಿ ಬಳಸುವುದಿಲ್ಲ. ಆದರೆ ಇಲ್ಲಿ ಮೂರು ಉಪಮಾನಗಳನ್ನು ಒಟ್ಟಿಗೆ ಏಕೆ ಕೊಟ್ಟಿದೆ ಎಂದು ಆಲೋಚಿಸಿದರೆ, ಅದು ಮೂರು ಉದ್ದಿಷ್ಟಾರ್ಥಗಳ ಸ್ಪಷ್ಟತೆಗಾಗಿ ಎಂಬುದು ವಿಶದವಾಗುತ್ತದೆ. ಜೇಡರ ಹುಳುವು ತನ್ನಿಂದಲೇ ಉತ್ಪತ್ತಿಯಾದ ತಂತುವಿನಿಂದ ಬಲೆಯನ್ನು ನಿರ್ಮಿಸುತ್ತದೆ. ಹಾಗೂ ಬೇಡವಾದಾಗ ಅದನ್ನು ತನ್ನೊಳಗೇ ಒಂದಕ್ಕೆ ಎಳೆದುಕೊಳ್ಳುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಜೇಡರಬಲೆಯೂ ಜೇಡನ ಮತ್ತೊಂದು ರೂಪವೇ. ಹಾಗೆಯೇ ಜಗತ್ತು ಕೂಡ ಬ್ರಹ್ಮನ ಮತ್ತೊಂದು ದೃಶ್ಯವೇ ! ಪರಮಾತ್ಮನೇ ಸಂಸಾರ ರೂಪದಲ್ಲಿ ಕಾಣುವ ಪ್ರಪಂಚಕ್ಕೆ ಸಮಸ್ತ ಕಾರಣ !

ಜಗತ್ ಸೃಷ್ಟಿಯ ವಿಚಾರವು ನಮ್ಮ ಮನಸ್ಸಿಗೆ ಬಂದ ಕೂಡಲೇ ಸಾಂಪ್ರದಾಯಿಕ ಭಾವನೆಯಂತೆ ಒಬ್ಬ ಕುಂಬಾರನು ತನ್ನಿಂದ ಹೊರಗಿರುವ ಪದಾರ್ಥವನ್ನು ಬಳಸಿಕೊಂಡು ಮಡಕೆ ಮಾಡುವಂತೆ ಪರಮಾತ್ಮನೂ ಸೃಷ್ಟಿಕಾರ್ಯವನ್ನು ಮಾಡುವ ಚಿತ್ರಣ ನಮ್ಮಲ್ಲಿ ಸಹಜವಾಗಿ ಮೂಡುತ್ತದೆ. ಈ ಭಾವನೆಯನ್ನು ಇಲ್ಲಿ ಅಲ್ಲಗಳೆದು ನಿಷೇಧಿಸಿದೆ. ಅದಕ್ಕೆ ಬದಲಾಗಿ ಜೇಡರಹುಳುವು ಹೊರಗಿರುವ ಯಾವ ಪದಾರ್ಥವನ್ನೂ ಬಯಸದೆ ತನ್ನಿಂದಲೇ ತನಗೆ ಬೇಕಾಗುವ ತಂತುವನ್ನು ತಾನೇ ಹೊರತೆಗೆದು ತನ್ನ ಬಲೆಯನ್ನು ನಿರ್ಮಿಸಿಕೊಳ್ಳುವ ಉದಾಹರಣೆಯ ಮೂಲಕ ಪರಮಾತ್ಮನೂ ಕೂಡ ಪೂರ್ಣವಾಗಿ ತನ್ನಿಂದಲೇ ತನಗೆ ಬೇಕಾಗುವ ವಸ್ತುವನ್ನು ನಿರ್ಮಿಸಿಕೊಂಡು ಜಗತ್ತನ್ನು ಸೃಜಿಸುವನು ಎಂಬ ಅರ್ಥವನ್ನು ಈ ಮಂತ್ರವು ಸ್ಪಷ್ಟಪಡಿಸುತ್ತದೆ. ಈ ವಿಚಾರ ಮಂಡನೆಯಿಂದ ಸಾಂಖ್ಯರ ವಾದವನ್ನು ಪೂರ್ಣವಾಗಿ ಧ್ವಂಸ ಮಾಡಿದೆ. ಅವರ ವಾದದ ಪ್ರಕಾರ 'ಪ್ರಧಾನ'ವೇ ಸೃಷ್ಟಿಯ ಮೂಲ. ಪ್ರಧಾನವಿಲ್ಲವಾದರೆ ಸೃಷ್ಟಿಯೇ ಇಲ್ಲ. ಇದು ಅವರ ವಾದದ ತಿರುಳು.

ಜೇಡ ತನ್ನ ಬಲೆಯನ್ನು ನಿರ್ಮಿಸಿಕೊಳ್ಳುವ ರೀತಿಯ ಉಪಮಾನವನ್ನು ಕೊಟ್ಟು, ಜಗತ್ತಿನ ಸೃಷ್ಟಿಕ್ರಮವನ್ನು ವಿವರಿಸಿದ ನಂತರ ಪೃಥ್ವಿಯ ಮೇಲೆ ಗಿಡಮರಗಳು ಉತ್ಪತ್ತಿಯಾಗುವ ಮತ್ತೊಂದು ಹೋಲಿಕೆಯನ್ನು ಶ್ರುತಿಯು ಕೊಡುವುದರ ಅಗತ್ಯವೇನು ? ಅದಕ್ಕೆ ಬಲವಾದ ಅಗತ್ಯವಿದೆ. ಜೇಡರ ಬಲೆಯ ಉಪಮಾನದಿಂದ ಉಂಟಾಗಬಹುದಾದ ಒಂದು ತಪ್ಪು ಅಭಿಪ್ರಾಯವನ್ನು ನಿವಾರಿಸುವುದಕ್ಕೋಸ್ಕರ ಈ ಉದಾಹರಣೆ ಕೊಟ್ಟಿದೆ. ಜೇಡ ತನ್ನ ಬಲೆ ನಿರ್ಮಿಸಿಕೊಳ್ಳುವುದು ತನ್ನ ಸ್ವಾರ್ಥ ಸಾಧನೆಗೋಸ್ಕರ, ತನ್ನ ಪ್ರಯೋಜನಕ್ಕೋಸ್ಕರ. ಆದರೆ ಪರಮಾತ್ಮನು ನಮ್ಮೆಲ್ಲರನ್ನೂ ಒಳಗೊಂಡ ಈ ಪ್ರಪಂಚವನ್ನು ನಿರ್ಮಿಸಿರುವುದರಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಈ ಇಂಗಿತವನ್ನು ಮೂಡಿಸುವ ಸಲುವಾಗಿ ಎರಡನೆಯ ದೃಷ್ಟಾಂತವನ್ನು ಕೊಟ್ಟಿದೆ. ಭೂತಾಯಿಗೆ ವೃಕ್ಷ ವನಸ್ಪತಿಗಳನ್ನು ಬೆಳೆಸುವುದರಿಂದ ಯಾವ ಪ್ರಯೋಜನವೂ ಆಗಬೇಕಾದ್ದಿಲ್ಲ. ಪ್ರಯತ್ನಪೂರ್ವಕವಾಗಿ, ಫಲೋದ್ದೇಶಪೂರ್ವಕವಾಗಿ ಭೂಮಿಯು ಸಸ್ಯಗಳನ್ನು ಬೆಳೆಸುವುದಿಲ್ಲ. ಹಾಗೆಯೇ ಜಗತ್ತು ಪರಮಾತ್ಮನಿಂದ ಬಂದಿರುವುದೂ ಕೂಡ.

ಮಹಾತ್ಮರಾದ ಋಷಿಗಳು ಜಿಜ್ಞಾಸುಗಳ ಮೇಲಿನ ತಮ್ಮ ಅವ್ಯಾಜ ಪ್ರೇಮದಿಂದ ಮತ್ತೊಂದು ದೃಷ್ಟಾಂತದ ಮೂಲಕ ಅದೇ ವಿಷಯವನ್ನು ಮತ್ತೂ ವಿವರಿಸುತ್ತಾರೆ. ಪೃಥ್ವಿಯಿಂದ ಹುಟ್ಟುವ ಗಿಡ ಮರಗಳು, ಅಚೇತನವಾದ ವಸ್ತುವಿನಿಂದ ಹೊರಬಂದವು. ಅದೇ ರೀತಿಯಲ್ಲಿ ಅಚೇತನವಾದ ವಸ್ತುವಿನಿಂದ ಜಗತ್ತಿನ ಉಗಮವೂ ಆಗಿದೆಯೆಂಬ ಅಭಿಪ್ರಾಯ ಉಂಟಾಗದಿರಲೆಂದು ಶ್ರುತಿಯು ಇನ್ನೊಂದು ಉಪಮಾನ ಕೊಡುತ್ತದೆ. ಮನುಷ್ಯನ ತಲೆಯ ಮೇಲೆ, ಮೈಮೇಲೆ ಕೂದಲು, ರೋಮಗಳು ಹುಟ್ಟುವ ಹೋಲಿಕೆಯಿಂದ ಚೇತನ ವಸ್ತುವಿಂದಲೇ ಜಡ ಪ್ರಪಂಚದ ಉತ್ಪತ್ತಿಯಾಗಿದೆಯೆನ್ನುವ ವಿವರಣೆ ನೀಡುತ್ತದೆ. ಅಷ್ಟೇ ಅಲ್ಲದೆ,

ಕೂದಲು ಹುಟ್ಟುವುದಕ್ಕಾಗಲಿ, ಬೆಳೆಯುವುದಕ್ಕಾಗಲಿ ಮನುಷ್ಯನು ಯಾವ ರೀತಿಯ ಪ್ರಯತ್ನವನ್ನೂ, ಶ್ರಮವನ್ನೂ ಪಡಬೇಕಾದ್ದಿಲ್ಲ. ಮನುಷ್ಯನ ಚೇತನ ಶಕ್ತಿಯ ಫಲವಾಗಿ, ಅವನು ಬದುಕಿರುವವರೆಗೂ ಅದು ತಾನೇ ತಾನಾಗಿ ಬೆಳೆಯುತ್ತಾ ಹೋಗುತ್ತದೆ. ಅದೇ ರೀತಿ ಜಗತ್ತೂ ಪರಮಾತ್ಮನ ಚೇತನ ಸ್ವರೂಪದ ಪ್ರತೀಕವಾಗಿ ಅಭಿವ್ಯಕ್ತವಾಗುತ್ತದೆ ಎಂಬ ಅಭಿಪ್ರಾಯವನ್ನು ಈ ಮೂರನೆಯ ಉಪಮಾನವು ತಿಳಿಸುತ್ತದೆ.

ಒಟ್ಟಿನಲ್ಲಿ ಸೃಷ್ಟಿಯ ಕ್ರಮವನ್ನು ನಾವು ಪೂರ್ಣವಾಗಿ ಗ್ರಹಿಸಬೇಕಾದರೆ ಈ ಕೆಳಗೆ ತಿಳಿಸಿರುವ ಮೂರು ಚಿತ್ರಣಗಳನ್ನು ಒಟ್ಟುಗೂಡಿಸಿ ಸಮಗ್ರವಾದ ಪ್ರಕ್ರಿಯೆಯೊಂದನ್ನು ಕಲ್ಪಿಸಿಕೊಳ್ಳಬೇಕು

(i) ಬೇರೆ ಯಾವ ಕಾರಣವನ್ನೂ ಬಯಸದೆ, ಯಾವ ವಸ್ತುವಿನ ಸಹಾಯವನ್ನೂ ಅಪೇಕ್ಷಿಸದೆ ಪರಮಾತ್ಮನು ತನ್ನಿಂದಲೇ ಈ ಜಗತ್ತನ್ನು ಹೊರಕ್ಕೆ ತರುತ್ತಾನೆ. ಕೊನೆಗೆ ಅದನ್ನು ತನ್ನೊಳಗೇ ಎಳೆದುಕೊಂಡು ಲೀನವಾಗಿಸುತ್ತಾನೆ.

(ii) ಜಗತ್ ಸೃಷ್ಟಿಯಿಂದ ಪರಮಾತ್ಮನಿಗೆ ಯಾವ ಪ್ರಯೋಜನವೂ ಆಗಬೇಕಾದ್ದಿಲ್ಲ. ಅದರ ಸೃಷ್ಟಿಗಾಗಿ ಅವನು ಯಾವ ಶ್ರಮವನ್ನೂ ಪಡಬೇಕಾಗಿಲ್ಲ. ಅಪ್ರಯತ್ನವಾಗಿ, ಉದ್ದೇಶರಹಿತವಾಗಿ ಸೃಷ್ಟಿಯ ಆವಿರ್ಭಾವ. ಅದು ದೈವ ಲೀಲೆ.

(iii) ಪರಮಾತ್ಮನು ಚೈತನ್ಯಘನ. ಪೃಥ್ವಿಯಂತೆ ಜಡವಲ್ಲ. ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿ. ಅವನು ಸಚ್ಚಿದಾನಂದ ಸ್ವರೂಪಿ

**ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಮ್ ॥ ೮**

**ಬ್ರಹ್ಮ** – ಬ್ರಹ್ಮವು (ಅಕ್ಷರವು), **ತಪಸಾ** – ಏಕಾಗ್ರತೆಯುಳ್ಳ ತಪಸ್ಸಿನಿಂದ (ಜ್ಞಾನದಿಂದ), **ಚೀಯತೇ** – ದೊಡ್ಡದಾಗುತ್ತದೆ, **ತತಃ** – ಅದರಿಂದ, **ಅನ್ನಂ** – ಅನ್ನವು, **ಅಭಿಜಾಯತೇ** – ಉಂಟಾಗುತ್ತದೆ, **ಅನ್ನಾತ್** – ಅನ್ನದಿಂದ, **ಪ್ರಾಣಃ** – ಪ್ರಾಣವು, **ಮನಃ** – ಮನಸ್ಸು, **ಸತ್ಯಂ** – ಆಕಾಶಾದಿ ಪಂಚಭೂತಗಳು, **ಲೋಕಾಃ** – ಲೋಕಗಳು, **ಚ** – ಮತ್ತು, **ಅಮೃತಂ** – ಅಮೃತವು (ಕರ್ಮಫಲವು) ಉಂಟಾಗುತ್ತವೆ.

(೮) ಅಕ್ಷರವು (ಬ್ರಹ್ಮವು) ತಪಸ್ಸಿನಿಂದ ದೊಡ್ಡದಾಗುತ್ತದೆ ಅದರಿಂದ ಅನ್ನವು ಉಂಟಾಗುತ್ತದೆ ಅನ್ನದಿಂದ ಪ್ರಾಣ, ಮನಸ್ಸು, ಪಂಚಭೂತಗಳು, ಲೋಕಗಳು, ಕರ್ಮಫಲ ಇವು ಉಂಟಾಗುತ್ತವೆ

'ತಪಸ್ಸು' ಎಂಬ ಪದಕ್ಕೆ ಅನೇಕ ಅರ್ಥಗಳಿವೆ ಸಾಧಾರಣವಾಗಿ 'ತಪಸ್ಸು' ಎಂದರೆ ಕಠಿಣ ವ್ರತಾಚರಣೆ, ಉಗ್ರ ದೇಹದಂಡನೆ ಎಂದು ಅಪಾರ್ಥ ಮಾಡುವುದು ವಾಡಿಕೆಯಾಗಿದೆ ಆ ಮಾತಿನ ಅನೇಕ ಅರ್ಥಗಳಲ್ಲಿ ಈ ಇಂಗಿತವೂ ಸೇರಿರುವುದು ನಿಜ. ಆದರೆ ಅದರ ನಿಜವಾದ ತಾತ್ತ್ವಿಕಾರ್ಥ 'ಏಕಾಗ್ರತೆಯುಳ್ಳ ಚಿಂತನೆ' ಎಂಬುದು. ಶ್ರುತಿಯ ಬೇರೆ ಕಡೆಯಲ್ಲಿ – 'ಐಕಾಗ್ರ್ಯಂ ಪರಮಂ ತಪಃ' ಎಂಬ ಉಕ್ತಿಯಿದೆ.

ಅತ್ಯಂತ ಏಕಾಗ್ರತೆಯಿಂದ ಮನಸ್ಸನ್ನು ಒಂದು ಕೇಂದ್ರದಲ್ಲಿಟ್ಟು ಚಿಂತನೆ ಮಾಡುವುದು ತಪಸ್ಸು ಎನಿಸುವುದು. ಅದೇ ಧ್ಯಾನವೂ ಹೌದು.

ಪರಮಾತ್ಮನ ಲಕ್ಷಣಗಳನ್ನು ವಿವರಿಸಿದ ಮೇಲೆ ಹಂತಹಂತವಾಗಿ ವಿವಿಧ ರೂಪಗಳಲ್ಲಿ ವಿಕಾಸವಾಗುತ್ತಾ ಬಂದ ಸೃಷ್ಟಿಯ ಕ್ರಮವನ್ನು ಶ್ರುತಿಯು ವಿವರಿಸತೊಡಗಿದೆ. ಸೃಷ್ಟಿಯೇನು ಹಠಾತ್ತಾಗಿ ಒಮ್ಮೆಗೇ ಸ್ಫೋಟಗೊಂಡು ಸಕಲ ವೈವಿಧ್ಯಪೂರ್ಣವಾದ ಜೀವರಾಶಿ, ಸಸ್ಯವರ್ಗಗಳಿಂದ ಕಂಗೊಳಿಸುತ್ತ ಪ್ರತ್ಯಕ್ಷವಾಗಲಿಲ್ಲ. ಅದಕ್ಕೂ ಒಂದು ಕ್ರಮಬದ್ಧವಾದ ನಿಯಮ ಉಂಟು, ಬೆಳವಣಿಗೆಯುಂಟು, ವಿಕಾಸ ವಿಧಾನಗಳುಂಟು. ಅವೆಲ್ಲವೂ ಕಾಲ ಪ್ರವಾಹದಲ್ಲಿ ವಿವಿಧ ಅವಸ್ಥೆಗಳನ್ನು ಕ್ರಮಿಸಿ ಕ್ರಮೇಣ ಬೇರೆ ಬೇರೆ ಮಜಲುಗಳನ್ನು ಮುಟ್ಟಿ, ಅವಸ್ಥಾಂತರ ಪಡೆದು ವೈವಿಧ್ಯಮಯ ಜಗತ್ತಾಗಿ ಪರಿಣಮಿಸಿದೆ. ಇದು ಪ್ರಕೃತಿಯ ಮುನ್ನಡೆ. ಜಗತ್ತಿನ ಬೆಳವಣಿಗೆ. ಪ್ರಕೃತಿಯಲ್ಲಿ ಅಡಗಿರುವ ಅದಮ್ಯ ಚೈತನ್ಯದ ತೀವ್ರ ಪ್ರಚೋದನೆಯೇ ಅವುಗಳು ರೂಪಾಂತರವಾಗುವುದಕ್ಕೆ, ಪರಿಪರಿಯಾಗಿ ಪರಿಣಮಿಸುವುದಕ್ಕೆ ಕಾರಣವಾದ ಶಕ್ತಿ. ಈ ಬೀಜ ಶಕ್ತಿಯು ಉಬ್ಬಿ, ಉಕ್ಕಿ ನಾನಾ ರೀತಿಯಲ್ಲಿ ಪ್ರವಹಿಸಿ ಜಗತ್ತಿನ ಬಹುರೂಪದ ವಿಷಯವಸ್ತುಗಳಾಗಿ ಅಭಿವ್ಯಕ್ತವಾಗಿವೆ. ಜಡವಸ್ತುಗಳಿಂದ ಜೀವ ಜಂತುಗಳು ಉದಿಸಿವೆ. ಜೀವಿಗಳು ನಾನಾ ರೂಪಗಳನ್ನು ತಾಳಿವೆ. ಜಗತ್ತನ್ನು ವೈವಿಧ್ಯ ಪೂರ್ಣವನ್ನಾಗಿ ಮಾಡಿವೆ. ಈ ಕ್ರಮವನ್ನು ಇಲ್ಲಿ ಸೂಕ್ಷ್ಮವಾಗಿ ಸೂಚಿಸಿದೆ.

ಜಡವಸ್ತುಗಳೇ ಪ್ರಾಣದ ಉತ್ಪತ್ತಿಗೆ ಮೂಲ. ಇಲ್ಲಿ ಉಪಯೋಗಿಸಿರುವ 'ಪ್ರಾಣ' ಎಂಬ ಮಾತಿಗೆ ಜೀವ ಎಂಬ ಅರ್ಥ ಬರುತ್ತದೆ. ಪ್ರಾಣವು ಸಕಲ ಚಟುವಟಿಕೆಗಳಿಗೂ ಕೇಂದ್ರ. ಪ್ರಾಣಕ್ಕೂ ಮನಸ್ಸಿಗೂ ನಿಕಟ ಸಂಬಂಧವಿರುವುದು ಎಲ್ಲರಿಗೂ ತಿಳಿದ ವಿಷಯವೇ. ಮನಸ್ಸು ಉದ್ವಿಗ್ನವಾದಾಗ, ಉದ್ರೇಕವಾದಾಗ ಪ್ರಾಣದ ತುಡಿತ ತೀವ್ರವಾಗುತ್ತದೆ. ಮನಸ್ಸು ಸಮಾಧಾನವಾಗಿ ಶಾಂತವಾಗಿದ್ದಾಗ, ಪ್ರಾಣವೂ ಏರಿಳಿತಗಳಿಲ್ಲದೆ ಸಮತೋಲನದಿಂದಿರುತ್ತದೆ. ಪ್ರಾಣವಿಲ್ಲದಾಗ ಮನಸ್ಸು ಕೆಲಸ ಮಾಡಲಾರದು. ಆದ್ದರಿಂದಲೇ ಪ್ರಾಣದಿಂದ ಮನಸ್ಸು ಹುಟ್ಟಿತು ಎಂಬುದು ಉಪನಿಷತ್ತುಗಳ ನಿರ್ಣಯ.

ಅವ್ಯಾಕೃತದಿಂದ ಕ್ರಮೇಣ ಎಲ್ಲವೂ ಪ್ರಕಟವಾಗಿ ಸ್ಪಷ್ಟವಾಗುತ್ತದೆ. ಪ್ರಾಣದಿಂದ ಹುಟ್ಟಿದ ಮನಸ್ಸು ಭೂತಪಂಚಕಗಳಿಗೆ ಕಾರಣವಾಗುತ್ತದೆ. ಉಪನಿಷತ್ತು ಪಂಚಮಹಾಭೂತಗಳನ್ನು 'ಸತ್ಯಂ' ಎಂಬ ಹೆಸರಿನಿಂದ ಕರೆದಿದೆ. ಪಂಚಭೂತಗಳಿಂದ ನಿರ್ಮಿತವಾದ ಪ್ರಪಂಚದಲ್ಲಿ ನಾಮರೂಪಗಳಿಂದ ನಿರ್ದೇಶಿಸಲ್ಪಟ್ಟ ಸಕಲ ವಸ್ತುಗಳ ಕ್ಷಣಭಂಗುರ ಸ್ಥಿತಿಯನ್ನು ಹೋಲಿಸಿದರೆ, ಪಂಚಮಹಾಭೂತಗಳು ಸಾಪೇಕ್ಷವಾಗಿ ಶಾಶ್ವತವೆನಿಸುತ್ತವೆ. ಆದ್ದರಿಂದ ಪಂಚಭೂತಗಳನ್ನು ಇಲ್ಲಿ 'ಸತ್ಯಂ' ಎಂಬ ಮಾತಿನಿಂದ ಸೂಚಿಸಿದೆ.

ನಾವು ಕಾಣುವ ಪ್ರಪಂಚ ಅಥವಾ ಲೋಕವೆಲ್ಲ ಪಂಚಮಹಾಭೂತಗಳ ಸಂಯೋಜನೆಯಿಂದ ಉಂಟಾಗಿವೆ. ಇದೇ ಪಂಚೀಕರಣದ ತತ್ತ್ವ. 'ಲೋಕ' ಎಂಬ

ಸಂಸ್ಕೃತ ಮಾತಿನ ಅರ್ಥ ಕೇವಲ ಪ್ರಪಂಚ ಎಂದು ಮಾತ್ರವಲ್ಲ. ಲೋಕ ಎನ್ನುವುದರಲ್ಲಿ ದರ್ಶನ, ನೋಟ ಎನ್ನುವ ಅರ್ಥವೂ ಅಡಗಿದೆ. ಆದ್ದರಿಂದ ಲೋಕವು ಅನುಭವ ಕ್ಷೇತ್ರ. ಅನ್ನ, ಪ್ರಾಣ ಮತ್ತು ಮನಸ್ಸುಗಳು ಅನುಭವ ಕ್ಷೇತ್ರದೊಡನೆ ಸಂಪರ್ಕ ಪಡೆದಾಗ ಜ್ಞಾನಶಕ್ತಿಯು ಅವುಗಳನ್ನು ಕಾರ್ಯದಲ್ಲಿ ತೊಡಗಿಸುತ್ತದೆ. ಇದರಿಂದ ಅವಿದ್ಯಾಕಾಮಕರ್ಮ; ಅಹಂಕಾರದ ಸ್ವಾರ್ಥ ಕರ್ಮಗಳು. ಪ್ರತಿಯೊಂದು ಕ್ರಿಯೆಗೂ ಒಂದು ಪ್ರತಿಕ್ರಿಯೆ ಉಂಟು. ಪ್ರತಿಕ್ರಿಯೆಗಳು ಕ್ರಿಯಾತ್ಮಕ ಚಟುವಟಿಕೆಗಳ ಫಲ. ಈ ಕ್ರಿಯಾಕಾರಕ ಫಲಗಳನ್ನು ಉಪನಿಷತ್ತು 'ಅಮೃತ' ಎಂದು ಕರೆದಿದೆ. ಇದೂ ಸಾಪೇಕ್ಷದ ಅರ್ಥದಲ್ಲೇ ಹೇಳಿರುವ ಮಾತು. ಕ್ರಿಯೆಯು ಸಾಧಾರಣವಾಗಿ ಬೇಗನೇ ಮುಗಿದುಹೋಗುತ್ತದೆ. ಆದರೆ ಅದರ ಫಲವು ಅಷ್ಟು ಜಾಗ್ರತೆಯಾಗಿ ಸಮಾಪ್ತವಾಗುವುದಿಲ್ಲ. ಅದು ದೀರ್ಘ ಪರಿಣಾಮಿ. ಪರಿಣಾಮವಾಗಲು ಪ್ರಾರಂಭಿಸುವುದಕ್ಕೂ ಕಾಲ ಬೇಕು. ಅದರ ಫಲಿತಾಂಶವಾಗಿ ದೇಹ, ಮನಸ್ಸುಗಳ ಮೇಲೆ ಬೀರುವ ಪರಿಣಾಮ ಸುದೀರ್ಘವಾದದ್ದೆಂಬುದರಲ್ಲಿ ಸಂದೇಹವೇ ಇಲ್ಲ. ಈ ಫಲಿತಾಂಶಗಳ ಸರಮಾಲೆಯನ್ನೂ, ಅವುಗಳು ಸಂಭವಿಸುವ ಕಾಲಾವಧಾನವನ್ನೂ ಪರಿಗಣಿಸಿ ಶ್ರುತಿಯು ಕರ್ಮಫಲವನ್ನು 'ಅಮೃತ' ಎಂದು ಹೇಳಿದೆ.

## ಅಕ್ಷರದ ಮಹಿಮೆ

**ಯಃ ಸರ್ವಜ್ಞಃ ಸರ್ವವಿದ್ ಯಸ್ಯ ಜ್ಞಾನಮಯಂ ತಪಃ ।**
**ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ ॥** ೯

**ಯಃ** – ಯಾವನು, **ಸರ್ವಜ್ಞಃ** – ಸರ್ವಜ್ಞನೋ, **ಸರ್ವವಿತ್** – ಎಲ್ಲವನ್ನೂ ತಿಳಿದವನೋ, **ಯಸ್ಯ** – ಯಾವನ, **ತಪಃ** – ತಪಸ್ಸು, **ಜ್ಞಾನಮಯಂ** – ಜ್ಞಾನಮಯವಾಗಿರುವುದೋ, **ತಸ್ಮಾತ್** – ಅವನಿಂದ, **ಏತತ್ ಬ್ರಹ್ಮ** – ಈ ಬ್ರಹ್ಮವೂ (ಕಾರ್ಯರೂಪವಾದ ಹಿರಣ್ಯಗರ್ಭನೂ), **ನಾಮಃ** – ನಾಮವೂ, **ರೂಪಂ** – ರೂಪವೂ, **ಅನ್ನಂ ಚ** – ಮತ್ತು ಅನ್ನವೂ, **ಜಾಯತೇ** – ಹುಟ್ಟುತ್ತದೆ.

(೯) ಯಾವನು ಸರ್ವಜ್ಞನೋ (ಎಲ್ಲವನ್ನೂ ಸಾಮಾನ್ಯವಾಗಿ ತಿಳಿದಿರುವನೋ), ಸರ್ವವಿದನೋ (ವಿಶೇಷರೂಪದಿಂದ ಸರ್ವವನ್ನೂ ಅರಿತಿರುವನೋ), ಯಾವನ ತಪಸ್ಸು ಜ್ಞಾನಮಯವಾಗಿರುವುದೋ, ಅವನಿಂದ ಈ ಬ್ರಹ್ಮವೂ (ಹಿರಣ್ಯಗರ್ಭನೂ) ನಾಮರೂಪಗಳು ಮತ್ತು ಅನ್ನ – ಇವೆಲ್ಲವೂ ಉಂಟಾಗಿವೆ

ಈ ಮಂತ್ರದಿಂದ ಮೊದಲನೆಯ ಮುಂಡಕದ ಪ್ರಥಮ ಖಂಡವು ಸಮಾಪ್ತವಾಗುತ್ತದೆ. ಇದರಲ್ಲಿ ಶ್ರುತಿಯು ಇದುವರೆಗೂ ಹೇಳಿರುವ ವಿಷಯವನ್ನು ಸಂಗ್ರಹವಾಗಿ ನಿರೂಪಿಸಿ ಈ ಖಂಡವನ್ನು ಉಪಸಂಹಾರ ಮಾಡಿದೆ.

ಅಕ್ಷರವೆನಿಸುವ ಪುರುಷನು ಜ್ಞಾನಸ್ವರೂಪವೇ ಆಗಿರುವುದರಿಂದ ಅವನಿಗೆ ಬ್ರಹ್ಮಾಂಡದ ಸಕಲ ವಿಷಯಗಳೂ ವೇದ್ಯವಾಗಿರುತ್ತವೆ. ಆದ್ದರಿಂದ ಅವನು

ಸರ್ವಜ್ಞನು ಅವನ ಜ್ಞಾನಸ್ವರೂಪವೇ ಸಕಲ ಸಸ್ಯ, ಪ್ರಾಣಿ ಹಾಗೂ ಮಾನವ ವರ್ಗಗಳ ಚೇತನಶಕ್ತಿಯಾಗಿರುವುದರಿಂದಲೂ, ಆ ಸತ್‌ಸ್ವರೂಪದ ಪರಮಾರ್ಥವೇ ಸಕಲ ವಸ್ತುಗಳ ಇರುವಿಕೆಗೂ ಕಾರಣವಾಗಿರುವುದರಿಂದಲೂ ಅದಕ್ಕೆ ತಿಳಿಯದೆ ಯಾವುದೂ ಸಂಭವಿಸುವಂತಿಲ್ಲ. ಆದ್ದರಿಂದ ಅದು ಸರ್ವವಿತ್. ಈ ಅಕ್ಷರವು ಸತ್ ಮತ್ತು ಚಿತ್. ಬ್ರಹ್ಮಾಂಡದ ಸಕಲ ವಸ್ತುಗಳ ಇರುವಿಕೆಗೂ, ಚೈತನ್ಯಕ್ಕೂ ಅದೇ ಮೂಲ ಮತ್ತು ನೆಲೆ. 'ಸರ್ವಜ್ಞ' ಮತ್ತು 'ಸರ್ವವಿತ್' ಎಂಬ ಶಬ್ದಗಳ ಅರ್ಥವನ್ನು ಕೂಡ ನಮ್ಮ ಸ್ಥೂಲಮತಿಯು ಪೂರ್ಣವಾಗಿ ಕೂಡಲೇ ಗ್ರಹಿಸಲಾರದು.

ಪರಮಾರ್ಥ ವಸ್ತುವು ತಪಸ್ಸು ಮಾಡಿ ತನ್ನಲ್ಲಿದ್ದ ಸೃಜನಶಕ್ತಿಯನ್ನು ವೃದ್ಧಿಸಿ ಸೃಷ್ಟಿಕಾರ್ಯದ ಉತ್ಸಾಹದಿಂದ ಉಬ್ಬಿ, ಆನಂದದಿಂದ ತುಂಬಿ ತನ್ನೊಳಗಿದ್ದ ಸಾಮಗ್ರಿಗಳಿಂದಲೇ ಸ್ವಸಂಕಲ್ಪದಿಂದ ಸಕಲ ವಸ್ತುವಿಶೇಷಣಗಳನ್ನು ಸೃಜಿಸಿ ತನ್ನ ಕಲ್ಪನಾ ಪ್ರಪಂಚವನ್ನು ಹೊರಗೆಡಹಿ ಬಾಹ್ಯ ಲೋಕವನ್ನಾಗಿ ಸೃಜಿಸಿದೆಯೆಂದು ಶ್ರುತಿಯು ಆಗಲೇ ವರ್ಣಿಸಿದೆ.

ಈ ಮಂತ್ರದಲ್ಲಿ ಹೇಳಿರುವ ವಿಶೇಷವೇನೆಂದರೆ – ಸೃಷ್ಟಿಕಾರ್ಯದ ತೀವ್ರ ಬಯಕೆಯ ಒತ್ತಡದಿಂದ, ಸೃಷ್ಟಿಕರ್ತನಾದ ಬ್ರಹ್ಮ (ಹಿರಣ್ಯಗರ್ಭ), ನಾಮರೂಪಗಳ ವಸ್ತುವಿಶೇಷಗಳು, ಪ್ರಾಣಿಗಳು ಬದುಕಲು ಬೇಕಾದ ಅನ್ನ–ಇವುಗಳು ಸೃಷ್ಟಿಯಾದವು ಎಂಬುದು. ಸಂಸ್ಕೃತದ ಬಳಕೆಯಲ್ಲಿ 'ನಾಮರೂಪ' ಗಳೆಂದರೆ ಬಹುರೂಪ ಇತ್ಯರ್ಥ

**ಮೊದಲನೆಯ ಮುಂಡಕದ ಪ್ರಥಮ ಖಂಡ ಸಮಾಪ್ತಿ.**

---

## ಒಂದನೆಯ ಮುಂಡಕ – ಎರಡನೆಯ ಖಂಡ

### ಕರ್ಮಮಾರ್ಗ

**ತದೇತತ್ ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ**
**ಯಾನ್ಯಪಶ್ಯಂಸ್ತಾನಿ ತ್ರೇತಾಯಾಂ ಬಹುಧಾ ಸಂತತಾನಿ ।**
**ತಾನ್ಯಾಚರಥ ನಿಯತಂ ಸತ್ಯಕಾಮಾ**
**ಏಷ ವಃ ಪಂಥಾಃ ಸುಕೃತಸ್ಯ ಲೋಕೇ ॥** ೧

**ತತ್ ಏತತ್ ಸತ್ಯಂ** – ಆ ಇದು ಸತ್ಯವಾದದ್ದು, **ಕವಯಃ** – ಮೇಧಾವಿಗಳು, **ಮಂತ್ರೇಷು** – ಋಗ್ವೇದಾದಿ ಮಂತ್ರಗಳಲ್ಲಿ, **ಯಾನಿ** – ಯಾವ, **ಕರ್ಮಾಣಿ** – (ಅಗ್ನಿಹೋತ್ರವೇ ಮೊದಲಾದ) ಕರ್ಮಗಳನ್ನು, **ಅಪಶ್ಯನ್** – ಕಂಡುಕೊಂಡರೋ, **ತಾನಿ** – ಆ ಕರ್ಮಗಳು, **ತ್ರೇತಾಯಾಂ** – ತ್ರೇತಾಯುಗದಲ್ಲಿ (ಅಥವಾ ಹೌತ್ರ, ಆಧ್ವರ್ಯವ, ಔದ್ಗಾತ್ರ ಎಂಬ ಮೂರು ಪ್ರಕಾರದ ಆಶ್ರಯದಲ್ಲಿ), **ಬಹುಧಾ** – ಬಹುವಿಧದಲ್ಲಿ, **ಸಂತತಾನಿ** – ಹರಡಿಕೊಂಡಿರುವುವು, **ಸತ್ಯಕಾಮಾಃ** – ಸತ್ಯ ಕಾಮರಾಗಿ (ನೈಜವಾದ ಕರ್ಮಫಲವನ್ನು ಬಯಸುವವರಾಗಿ), **ತಾನಿ** – ಅವುಗಳನ್ನು, **ನಿಯತಂ** – ನಿತ್ಯವೂ, **ಆಚರಥ** – ಆಚರಿಸಿರಿ, **ಸುಕೃತಸ್ಯ** – ಸುಕೃತದ (ನೀವೇ ಮಾಡಿದ ಕರ್ಮದ), **ಲೋಕೇ** – ಲೋಕದಲ್ಲಿ, **ವಃ** – ನಿಮಗೆ, **ಏಷಃ** – ಇದು, **ಪಂಥಾಃ** – ದಾರಿ.

(೧) ಇದು ಸತ್ಯ ಮೇಧಾವಿಗಳು ಋಗ್ವೇದಾದಿ ಮಂತ್ರಗಳಲ್ಲಿ ಯಾವ ಕರ್ಮಗಳನ್ನು (ಅಗ್ನಿಹೋತ್ರಾದಿ ಕರ್ಮಗಳನ್ನು) ಕಂಡುಕೊಂಡರೋ, ಅವು ತ್ರೇತೆಯಲ್ಲಿ (ತ್ರೇತಾಯುಗದಲ್ಲಿ ಅಥವಾ ಹೌತ್ರ, ಆಧ್ವರ್ಯವ, ಔದ್ಗಾತ್ರ ಎಂಬ ಮೂರು ಪ್ರಕಾರದ ಆಶ್ರಯದಲ್ಲಿ) ಬಹುವಿಧವಾಗಿ ಹರಡಿಕೊಂಡಿರುವುವು ನೀವು ಸತ್ಯಕಾಮರಾಗಿ (ಯಥಾರ್ಥವಾದ ಕರ್ಮಫಲವನ್ನು ಬಯಸುವವರಾಗಿ) ಅವುಗಳನ್ನು ನಿತ್ಯವೂ ಆಚರಿಸಿರಿ ಇದು ನೀವೇ ಮಾಡಿದ ಕರ್ಮದ ಲೋಕಕ್ಕೆ ದಾರಿ

ಹಿಂದಿನ ಖಂಡದಲ್ಲಿ ಸಮಗ್ರ ಜ್ಞಾನಸಮುಚ್ಚಯವನ್ನು 'ಪರವಿದ್ಯೆ', 'ಅಪರವಿದ್ಯೆ' ಎಂದು ಎರಡು ವಿಭಾಗವಾಗಿ ವಿಂಗಡಿಸಬಹುದೆಂದು ತಿಳಿಸಿದೆ. ಅಲ್ಲದೆ 'ಪರವಿದ್ಯೆ' ಹಾಗೂ 'ಅಪರವಿದ್ಯೆ'ಗಳ ಲಕ್ಷಣಗಳನ್ನೂ ಸೂಕ್ಷ್ಮವಾಗಿ ಋಷಿಯು ತಿಳಿಸಿದ್ದಾನೆ. ಈ ಖಂಡದಲ್ಲಿ ಅಪರವಿದ್ಯೆಯ ಸಾಮ್ರಾಜ್ಯದ ವಿಸ್ತಾರವನ್ನು ಸ್ಥೂಲವಾಗಿ ಸೂಚಿಸಲಾಗಿದೆ ಮಧ್ಯೆ ಮಧ್ಯೆ ತರ್ಕ, ಅಧ್ಯಾಹಾರಗಳಿಗೆ ಅವಕಾಶವಿತ್ತು, ಸಂಸಾರಕ್ಕೆ ಕಾರಣವಾದ ಅಪರವಿದ್ಯೆಯು ಶಾಶ್ವತ ಸುಖವನ್ನು ಗಳಿಸಿ

ಕೊಡಲಾರದೆಂಬುದನ್ನೂ ಋಷಿಯು ನಮಗೆ ಮನದಟ್ಟು ಮಾಡಲು ಇಲ್ಲಿ ಪ್ರಯತ್ನಿಸಿದ್ದಾನೆ.

ವೇದ ವಿಹಿತವಾದ ಕರ್ಮಾಚರಣೆಗಳನ್ನು ವಿಧಿಪೂರ್ವಕವಾಗಿ ಶ್ರದ್ಧೆಯಿಂದ ಸತ್ಯಕಾಮಿಗಳು ನಡೆಸಬೇಕೆಂಬ ಹಿತೋಕ್ತಿಯಿಂದ ಈ ಖಂಡವು ಪ್ರಾರಂಭವಾಗಿದೆ. ಅವು ಸತ್ಯ, ಹುಸಿಯಲ್ಲ ಎಂದು ಗುರುವು ಹೇಳುತ್ತಾನೆ ವೇದೋಕ್ತವಾದ ರೀತಿಯಲ್ಲಿ ಆ ಕರ್ಮಗಳನ್ನು ಶ್ರದ್ಧೋಪೇತವಾಗಿ ಮಾಡಿದರೆ ಬಯಸಿದ ಕರ್ಮಫಲಗಳು ಖಂಡಿತವಾಗಿ ದೊರಕುವುದರಿಂದ ಅವು ಸತ್ಯ. ಇಂತಹ ಕರ್ಮಕ್ಕೆ ಇಂತಹುದೇ ಫಲವೆಂದು ಶ್ರುತಿಯಲ್ಲಿ ನಿಯುತವಾಗಿದೆ. 'ತ್ರೇತಾಯಾಂ' ಎಂದು ಇಲ್ಲಿ ಉಕ್ತವಾಗಿರುವ ಪದಕ್ಕೆ 'ಮೂರು ವೇದಗಳಲ್ಲಿ ಹೇಳಿರುವಂತೆ' ಎಂಬ ಅರ್ಥವೂ ಉಂಟು. ಅಥವಾ ತ್ರೇತಾಯುಗದಲ್ಲಿ ರೂಢಿಯಲ್ಲಿದ್ದಂತೆ, ಎಂಬರ್ಥವನ್ನಾದರೂ ಮಾಡಬಹುದು.

ಕರ್ಮಫಲವನ್ನು ಬಯಸುವವರು ತಮ್ಮ ಸಾಧನಾಕ್ರಮದಲ್ಲಿ ಕರ್ಮಗಳನ್ನು ನಿಯುತವಾಗಿ ಅಂದರೆ ನಿತ್ಯವೂ ಆಚರಿಸತಕ್ಕದ್ದು ಎಂದು ಮಂತ್ರದಲ್ಲಿ ಹೇಳಿದೆ. ನಿತ್ಯವೂ ಎನ್ನುವುದರಲ್ಲಿ ವಿಶೇಷ ಅರ್ಥವಿದೆ. ಶ್ರುತಿಯು ವಿಧಿಸಿರುವ ಕರ್ಮಗಳನ್ನು ತಪ್ಪದೆ ಶ್ರದ್ಧೆಯಿಂದ ಅಭ್ಯಾಸ ಕ್ರಮದಲ್ಲಿ ಮನಸ್ಸಿಟ್ಟು ಮಾಡತಕ್ಕದ್ದು. ಅಂಧಕರ್ಮಾಚರಣೆಗೆ ಫಲ ದೊರಕದು. ನಿತ್ಯಗಟ್ಟಲೆ ಕಾರ್ಯಕ್ರಮದಂತೆ ವಿಮನಸ್ಕರಾಗಿ ಮಾಡುವ ಕರ್ಮವು ವ್ಯಕ್ತಿತ್ವದ ವಿಕಾಸಕ್ಕೆ ಕಾರಣವಾಗದು. ಶ್ರದ್ಧಾಭಕ್ತಿಯಿಂದ ಉದ್ದೇಶಪೂರ್ವಕವಾಗಿ ದೃಢಮನಸ್ಸಿನಿಂದ ಮಾಡುವ ಕರ್ಮಕ್ಕೆ ತಕ್ಕ ಫಲವು ದೊರಕೇ ದೊರಕುವುದು. ಅದರಲ್ಲಿಯೂ ಆಧ್ಯಾತ್ಮ ಕ್ಷೇತ್ರದಲ್ಲಿ ಆತ್ಮವಿಕಾಸವನ್ನು ಬಯಸುವಾಗ ಈ ಕ್ರಮವು ಅತ್ಯಂತ ಅಗತ್ಯ. ಆದರೆ ಕರ್ಮಾಚರಣೆಯೊಂದೇ ಸಾಧಕನಿಗೆ ಅವನ ಅಂತಿಮ ಗುರಿಯನ್ನು ದೊರಕಿಸಿಕೊಡಲಾರದು. ಕರ್ಮವು ಎಷ್ಟೇ ಉದಾತ್ತವಾಗಿರಲಿ, ಉತ್ಕೃಷ್ಟವಾಗಿದ್ದಿರಲಿ, ಉಜ್ವಲವಾಗಿರಲಿ ಅದು ಶಾಶ್ವತವಾದ ಫಲವನ್ನು ಕೊಡಲಾರದು. ಏಕೆಂದರೆ ಕರ್ಮವು ಸಹಜವಾಗಿ ಅಂತ್ಯವುಳ್ಳದ್ದು, ಸೀಮಿತವಾದದ್ದು. ಆದ್ದರಿಂದ ಅದರಿಂದ ಬರುವ ಫಲವೂ ಸೀಮಿತವಾದದ್ದೇ, ಅಶಾಶ್ವತವಾದದ್ದೇ. ಇದರ ವಿಚಾರವಾಗಿ ಮುಂದೆ ಹೆಚ್ಚು ವಿವರಣೆ ನೀಡಲಾಗಿದೆ.

## ಅಗ್ನಿಹೋತ್ರದ ವಿಧಾನ

**ಯದಾ ಲೇಲಾಯತೇ ಹ್ಯರ್ಚಿಃ**
**ಸಮಿದ್ಧೇ ಹವ್ಯವಾಹನೇ ।**
**ತದಾಜ್ಯ ಭಾಗಾವಂತರೇ —**
**ಣಾಹುತೀಃ ಪ್ರತಿಪಾದಯೇತ್ ॥*** ೨

* ಈ ಮಂತ್ರದ ಕೊನೆಯಪಾದಕ್ಕೆ ಈ ಪಾಠಾಂತರವಿದೆ: ಪ್ರತಿಪಾದಯೇತ್ (ಶ್ರದ್ಧಯಾಹುತಮ್)॥

**ಯದಾ** – ಯಾವಾಗ, **ಸಮಿದ್ಧೇ** – ಚೆನ್ನಾಗಿ ಜ್ವಲಿಸುತ್ತಿರುವ, **ಹವ್ಯವಾಹನೇ** – ಅಗ್ನಿಯಲ್ಲಿ, **ಅರ್ಚಿಃ** – ಉರಿಯು, **ಲೇಲಾಯತೇ** – ಏಳುವುದೋ, **ತದಾ** – ಆಗ, **ಆಜ್ಯಭಾಗೌ** – ಆಜ್ಯಭಾಗಗಳ (ತುಪ್ಪ ಹಾಕುವ ಭಾಗಗಳ), **ಅಂತರೇಣ** – ಮಧ್ಯದಲ್ಲಿ, **ಆಹುತೀಃ** – ಆಹುತಿಗಳನ್ನು, **ಪ್ರತಿಪಾದಯೇತ್** – ಕೊಡಬೇಕು.

**(೨) ಚೆನ್ನಾಗಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ಉರಿಯು ಎದ್ದಾಗ ಆಜ್ಯಭಾಗಗಳ ಮಧ್ಯದಲ್ಲಿ ಆಹುತಿಗಳನ್ನು ಕೊಡಬೇಕು.**

ಈ ಮಂತ್ರದಲ್ಲಿ ಕರ್ಮಕಾಂಡದ ವಿಧಿಯನ್ನು ತಿಳಿಸಲಾಗಿದೆ.

ವಿವಿಧ ಯಜ್ಞಗಳಲ್ಲಿ ಬಹುಮುಖ್ಯವೂ, ನಿತ್ಯವಿಧಿಯೂ ಆದ ಅಗ್ನಿಹೋತ್ರವನ್ನೇ ಇಲ್ಲಿ ಉಪಲಕ್ಷಣಕ್ಕಾಗಿ ಆಯ್ದುಕೊಂಡಿದೆ. ಅಗ್ನಿಹೋತ್ರದ ಕ್ರಮವನ್ನು ತಿಳಿಸಿದರೆ ಉಳಿದೆಲ್ಲ ಕರ್ಮಗಳ ವಿಧಿಯನ್ನು ತಿಳಿಸಿದಂತೆ ಆಗುವುದೆಂದು ಅದನ್ನು ಇಲ್ಲಿ ಉದಾಹರಿಸಿದೆ.

ಈ ಮಂತ್ರದಲ್ಲಿ 'ಶ್ರದ್ಧಯಾಹುತಂ' ಎಂದು ಕೊನೆಯಲ್ಲಿ ಪಾಠಾಂತರವಿರುವ ಒಂದೂ ಹಾಗೂ ಆ ಪದವಿಲ್ಲದ ಮಂತ್ರವಿರುವ ಪಾಠವೊಂದೂ ದೊರಕಿದೆ. ಶ್ರೀ ಶಂಕರರು 'ಶ್ರದ್ಧಯಾಹುತಂ' ಎಂಬ ಪದವಿಲ್ಲದಿರುವ ಪಾಠವನ್ನೇ ಒಪ್ಪಿಕೊಂಡಿದ್ದಾರೆ.

ಯಜ್ಞಕುಂಡದಲ್ಲಿ `ಅಗ್ನಿಯು ಹೊಗೆಯಿಂದ ತುಂಬಿ ಮಂಕಾಗಿರುವಾಗ ಆಹುತಿಯನ್ನು ಹಾಕಬಾರದು. ಸಮಿತ್ತುಗಳ ಉರಿಯಿಂದ ಜ್ವಾಲೆಯು ಚಿಮ್ಮುತ್ತ ಪ್ರಜ್ವಲಿಸುತ್ತಿರುವಾಗ ಮಾತ್ರ ಆಹುತಿಯನ್ನು ಅರ್ಪಿಸಬೇಕು. ಅಗ್ನಿಕುಂಡದಲ್ಲಿ ತುಪ್ಪವನ್ನು ಹಾಕಿರುವ ದಕ್ಷಿಣ ಉತ್ತರ ಭಾಗಗಳ ನಡುವಣ ಸ್ಥಾನದಲ್ಲಿ ಆಹುತಿಯನ್ನು ನೀಡಬೇಕು. ಈ ನಡುವಣ ಸ್ಥಾನವನ್ನು 'ಆವಾಪ ಸ್ಥಾನ' ಎಂದು ಉಪನಿಷತ್ತಿನ ತಾಂತ್ರಿಕ ಭಾಷೆಯಲ್ಲಿ ಕರೆಯುತ್ತಾರೆ.

ಕರ್ಮವು ಸ್ವತಃ ಸೀಮಿತಫಲದಾಯಕವಾಗಿದ್ದರೂ, ಅದನ್ನು ಆಚರಿಸುವ, ಎಂದರೆ ಎಲ್ಲಿ ಹೇಗೆ ಮಾಡಬೇಕೆಂಬುದಕ್ಕೆ ನಿಯತವಾದ ನಿಯಮಗಳಿವೆ. ಅವನ್ನು ಉಲ್ಲಂಘಿಸಿ ಕರ್ಮ ಮಾಡುವುದು ನಿರರ್ಥಕ. ಈ ಖಂಡವನ್ನು ಪೂರ್ಣವಾಗಿ ಅಧ್ಯಯನ ಮಾಡಿದರೆ ಕರ್ಮಗಳನ್ನು ವಿಧಿಪೂರ್ವಕವಾಗಿ ಆಚರಿಸುವುದು ಎಷ್ಟು ಕಠಿಣ, ಸಂಕಟಕರ, ಹಾಗೂ ಜಟಿಲ ಎಂಬುದನ್ನು ಮನವರಿಕೆ ಮಾಡುವುದು ಗುರುವಿನ ಉದ್ದೇಶವೆಂದು ತೋರುತ್ತದೆ. ಆಧ್ಯಾತ್ಮಿಕ ಉನ್ನತಿಗೆ ಕರ್ಮಾಚರಣೆಯ ತೊಡಕುಗಳು ಸಾಧಕನಿಗೆ ಬಂಧಕಗಳಾಗಿ ಪರಿಣಮಿಸಬಹುದೆಂಬುದನ್ನು ಮುಂದಿನ ಮಂತ್ರದಲ್ಲಿ ಇನ್ನೂ ಸ್ಪಷ್ಟವಾಗಿ ವಿವರಿಸಿದೆ.

## ಕರ್ಮಮಾರ್ಗದಲ್ಲಿ ಅಡಚಣೆಗಳು

**ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸ**
**ಮಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂ ಚ ।**
**ಅಹುತಮವೈಶ್ವದೇವಮವಿಧಿನಾ ಹುತ –**
**ಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥** ೩

**ಯಸ್ಯ** – ಯಾವನ, **ಅಗ್ನಿಹೋತ್ರಂ** – ಅಗ್ನಿಹೋತ್ರವು, **ಅದರ್ಶಂ** – ದರ್ಶವೆಂಬ ಕರ್ಮರಹಿತವೋ, **ಅಪೌರ್ಣಮಾಸಂ** – ಪೌರ್ಣಮಾಸ ಕರ್ಮವರ್ಜಿತವೋ, **ಅಚಾತುರ್ಮಾಸ್ಯಂ** – ಚಾತುರ್ಮಾಸ್ಯರಹಿತವೋ, **ಅನಾಗ್ರಯಣಂ** – ಅಗ್ರಯಣರಹಿತವೋ, **ಚ** – ಮತ್ತು, **ಅತಿಥಿವರ್ಜಿತಂ** – ಅತಿಥಿಪೂಜನರಹಿತವೋ, **ಅಹುತಂ** – ಆಹುತಿರಹಿತವೋ, **ಅವೈಶ್ವದೇವಂ** – ವೈಶ್ವದೇವ ಕರ್ಮವರ್ಜಿತವಾಗಿರುವುದೋ, **ಅವಿಧಿನಾ** – ವಿಧಿ ನಿಯಮಗಳಿಗೆ ವಿರುದ್ಧವಾಗಿ, **ಹುತಂ** – ಹುತವಾಗಿರುವುದೋ, (ಅದು) **ತಸ್ಯ** – ಅವನ, **ಆಸಪ್ತಮಾನ್ ಲೋಕಾನ್** – ಏಳು ಲೋಕಗಳನ್ನು, **ಹಿನಸ್ತಿ** – ನಾಶ ಮಾಡುತ್ತದೆ.

(೩) ಯಾವನ ಅಗ್ನಿಹೋತ್ರವು ದರ್ಶ ಮತ್ತು ಪೌರ್ಣಮಾಸ (ಅಮಾವಾಸ್ಯೆ ಮತ್ತು ಪೂರ್ಣಿಮೆಯಲ್ಲಿ ಮಾಡಬೇಕಾದ ಯಜ್ಞಗಳು), ಚಾತುರ್ಮಾಸ್ಯ (ನಾಲ್ಕು ತಿಂಗಳು ಮಾಡುವ ಯಜ್ಞಗಳು), ಅಗ್ರಯಣ (ಶರತ್ಕಾಲದಲ್ಲಿ ಮಾಡುವ ಹೋಮ), ಅತಿಥಿಸತ್ಕಾರ, ಆಹುತಿ, ವೈಶ್ವದೇವ (ವಿಶ್ವೇದೇವತೆಗಳನ್ನು ಉದ್ದೇಶಿಸಿ ಮಾಡುವ ಕರ್ಮ) ಇವುಗಳಿಂದ ವರ್ಜಿತವಾಗಿರುವುದೋ ಮತ್ತು ಅವಿಧಿಪೂರ್ವಕವಾಗಿ ಹುತವಾಗಿರುವುದೋ (ವಿಧಿಗೆ ವಿರುದ್ಧವಾಗಿ ಹೋಮ ಮಾಡಿರುವುದೋ) ಅದು ಅವನ ಏಳನೆಯವರೆಗಿನ* ಲೋಕಗಳನ್ನು ನಾಶ ಮಾಡುವುದು

ಈ ಮಂತ್ರದಲ್ಲಿ ಕರ್ಮಾಂಗವಾಗಿ ಮಾಡಲೇಬೇಕಾದ ಮತ್ತು ಬಿಡಬೇಕಾದ ವಿಧಿನಿಷೇಧಗಳನ್ನು ಒತ್ತಿ ಹೇಳಿ ಸಾಧಕನಿಗೆ ಕರ್ಮಾಚರಣೆಯ ಕಷ್ಟನಿಷ್ಠುರಗಳನ್ನು ವಿವರಿಸಿದೆ. ಇದರಿಂದ ತಾನು ಪಡೆಯಲುದ್ದೇಶಿಸಿದ ಅಲ್ಪಫಲಕ್ಕಾಗಿ ಎಷ್ಟು ಶ್ರಮಿಸಬೇಕಾಗುತ್ತದೆ ಎಂಬುದನ್ನಾದರೂ ಚಿಂತಿಸಿ ಸಾಧಕನು ಆ ಮಾರ್ಗವನ್ನು ಕೈಬಿಡುವುದು ಉಚಿತವೆಂದು ಸೂಚಿಸಲಾಗಿದೆ. ಅಗ್ನಿಹೋತ್ರವನ್ನು ಮಾಡುವುದಕ್ಕೆ ಪೂರ್ವಭಾವಿಯಾಗಿ ದರ್ಶ, ಪೌರ್ಣಮಾಸ, ಚಾತುರ್ಮಾಸ್ಯ, ಆಗ್ರಯಣ, ಅತಿಥಿಸತ್ಕಾರ, ವೈಶ್ವದೇವ ಮುಂತಾದ ಕರ್ಮಗಳನ್ನು ಕ್ರಮವಾಗಿ ಆಚರಿಸದಿದ್ದರೆ ಮತ್ತು ವಿಧಿವತ್ತಾಗಿ ಆಹುತಿಯನ್ನು ಕೊಡದಿದ್ದರೆ ನಿರ್ದಿಷ್ಟವಾದ ಕರ್ಮಫಲದಿಂದ ಕರ್ತೃವು ವಂಚಿತನಾಗುವುದಲ್ಲದೆ ತನ್ನ ಏಳು ಲೋಕಗಳನ್ನು ನಾಶ ಮಾಡಿಕೊಳ್ಳುವನು ಎಂದು ಶ್ರುತಿಯು ಹೇಳುತ್ತದೆ.

ಏಳು ಲೋಕಗಳೆಂದರೆ ಏಳು ತಲೆಮಾರುಗಳು ಎಂದೂ ಅರ್ಥ

---

* ಪಿಂಡವನ್ನು ಕೊಡುವುದೇ ಮುಂತಾದ ಉಪಕಾರದಿಂದ (ತನಗೆ) ಸಂಬಂಧಿಸುವ ತಂದೆ, ಅಜ್ಜ, ಮುತ್ತಜ್ಜ - ಇವರೂ ಮಗ, ಮೊಮ್ಮಗ, ಮರಿಮಗ ಇವರೂ - ತಾನೂ ಉಪಕಾರವನ್ನು ಪಡೆಯುವುದರಿಂದ (ತನ್ನನ್ನೂ ಸೇರಿಸಿಕೊಂಡರೆ ಏಳು ಲೋಕಗಳಾಗುವುವು)

ಮಾಡಬಹುದು. ತಂದೆ, ಅಜ್ಜ, ಮುತ್ತಜ್ಜ, ಈ ಪಿತೃಗಳಲ್ಲದೆ ತನ್ನ ಮಗ, ಮೊಮ್ಮಗ್ಗ, ಮರಿಮಗ ಈ ಮುಂದಿನ ಪೀಳಿಗೆ ಮತ್ತು ತಾನೂ ಸೇರಿ – ಎಲ್ಲರೂ ಸದ್ಗತಿ ದೊರಕದೆ ನಾಶವಾಗುವರು ಎಂದು ಶ್ರುತಿಯಲ್ಲಿ ಹೇಳಿದೆ. ಇದು ವಿಧಿ ತಪ್ಪಿದರೆ ಸಿಗುವ ಕರ್ಮಫಲ !

ಒಟ್ಟಿನಲ್ಲಿ ಕರ್ಮಾಚರಣೆಯಿಂದ ವೃಥಾ ಆಯಾಸ, ಕಷ್ಟ, ಭಯ ಮತ್ತು ಹಾನಿ – ಇವುಗಳೇ ಪ್ರಾಯಶಃ ಹೆಚ್ಚು ಸಂಭವನೀಯ ಫಲಗಳೆಂದು ತಿಳಿಸುವುದರ ಮೂಲಕ ಶ್ರುತಿಯು ಸಾಧಕನನ್ನು ಕರ್ಮ ಮಾರ್ಗವನ್ನು ತ್ಯಜಿಸುವಂತೆ ಪ್ರಚೋದಿಸಿದೆ. ಕ್ಷುದ್ರಫಲಗಳ ಆಸೆಗಳನ್ನು ತೊರೆದು, ಅಲ್ಪಫಲಪ್ರದವಾದ ಕರ್ಮಮಾರ್ಗವನ್ನು ತ್ಯಜಿಸಿದಾಗಲೇ ಸಾಧಕನು ಆಧ್ಯಾತ್ಮಸಿದ್ಧಿಯ ಕಡೆಗೆ ಪೂರ್ಣ ಗಮನವಿಟ್ಟು ಧ್ಯಾನಮಾರ್ಗವನ್ನು ಅನುಸರಿಸಲು ಸಾಧ್ಯವಾಗುವುದು.

ಆದರೂ ಸಹ, ಒಂದು ವಿಷಯವನ್ನು ನಾವು ಗಮನದಲ್ಲಿಡಬೇಕು. ಈಗ ನಾವಿರುವ ಸ್ಥಿತಿಯಲ್ಲಿ ನಮ್ಮ ಈಗಿನ ಆಚರಣೆಯಲ್ಲಿರುವ ಕೆಲವು ಕರ್ಮಗಳು ನಮಗೆ ಮುಖ್ಯವೇ ಹೌದು. ಸ್ವಾರ್ಥರಹಿತ ಸೇವೆ, ಜಪ, ತಪ, ಪೂಜೆ, ಸಂಧ್ಯಾವಂದನೆ, ಉಪಾಸನೆ, ಧ್ಯಾನ – ಇತ್ಯಾದಿಗಳು ಪ್ರಾರಂಭದ ಹಂತದಲ್ಲಿರುವ ಸಾಧಕನಿಗೆ ಅಗತ್ಯ. ಈ ಕರ್ಮಗಳಿಂದಲೇ ಅವನು ತನ್ನ ವ್ಯಕ್ತಿತ್ವದ ಪೂರ್ಣವಿಕಾಸವನ್ನು ಪಡೆದು ಕ್ರಮೇಣ ಕರ್ಮ ಪದ್ಧತಿಗಳ ಬಂಧನಗಳನ್ನು ಕಿತ್ತೆಸೆದು ಜ್ಞಾನಮಾರ್ಗವನ್ನು ನಿಷ್ಠೆಯಿಂದ ಅನುಸರಿಸಲು ಸಮರ್ಥನಾಗುವನು. ಸಾಮಾನ್ಯ ದೈವಭಕ್ತನು ಕ್ರಮೇಣ ಪಕ್ವವಾಗಿ ಪರಮಾತ್ಮನ ವಿಷಯಕವಾಗಿ ಚಿಂತಿಸುತ್ತಾ ಜೀವ –ಜಗತ್ತು– ಈಶ್ವರ ಇವುಗಳ ವಿಚಾರವನ್ನು ಗಾಢವಾಗಿ ವಿಮರ್ಶಿಸಿ, ಆತ್ಮಜ್ಞಾನ ಪಡೆಯುವುದಕ್ಕೆ ಅಧಿಕಾರಿಯಾಗುವನು. ಆಗ ಅವನ ವ್ಯಕ್ತಿತ್ವವು ಪೂರ್ಣವಾಗಿ ವಿಕಾಸ ಹೊಂದಿ ತಾನು ನಿಂತಿರುವ ಗರ್ಭಗುಡಿ, ದೇಗುಲದ ಗೋಪುರ ಪ್ರಾಕಾರಗಳನ್ನು ಮೀರಿ ವಿಶ್ವದ ಅಳತೆಯನ್ನು ಮುಟ್ಟುವುದು !

## ಕರ್ಮದಿಂದ ದೊರೆಯುವ ಫಲ

**ಕಾಲೀ ಕರಾಲೀ ಚ ಮನೋಜವಾ ಚ**
**ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ**
**ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥** ೪

**ಕಾಲೀ** – ಕಪ್ಪಾಗಿರುವವಳು, **ಕರಾಲೀ** – ಭಯಂಕರಳು, **ಮನೋಜವಾ ಚ** – ಮನಸ್ಸಿನ ವೇಗವುಳ್ಳವಳು, **ಸುಲೋಹಿತಾ** – ಕೆಂಪುಬಣ್ಣದವಳು, **ಸುಧೂಮ್ರವರ್ಣಾ** – ಹೊಗೆಯ ಬಣ್ಣವುಳ್ಳವಳು, **ಸ್ಫುಲಿಂಗಿನೀ** – ಹೊಳೆಯುವ ಕಿಡಿಗಳುಳ್ಳವಳಾದ, **ದೇವೀ** – ಪೂಜಾರ್ಹಳಾದ, **ವಿಶ್ವರುಚೀ ಚ** – ಎಲ್ಲೆಲ್ಲಿಯೂ ಹೊಳೆಯುತ್ತಿರುವವಳು,

**ಇತಿ** – ಹೀಗೆ, **ಲೇಲಾಯಮಾನಾ** – ಚಲಿಸುತ್ತಿರುವ (ಅಗ್ನಿಯ), **ಸಪ್ತ** – ಏಳು, **ಜಿಹ್ವಾಃ** – ನಾಲಗೆಗಳು.

(೪) ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ದೇವಿಯಾದ ವಿಶ್ವರುಚೀ* ಎಂಬ ಈ ಏಳು ಅಗ್ನಿಯ ಜ್ವಲಿಸುತ್ತಿರುವ ನಾಲಗೆಗಳು ಇವು ಆಹುತಿಗಳನ್ನು ತೆಗೆದುಕೊಳ್ಳುವುದಕ್ಕೆ ಪ್ರಜ್ವಲಿಸುತ್ತಿರುವ ಅಗ್ನಿಯ ಏಳು ನಾಲಗೆಗಳು.

ಅಗ್ನಿಯ ವಿವಿಧ ರೂಪಗಳ ಅಥವಾ ಸ್ಥಿತ್ಯಂತರಗಳ ವಿಂಗಡಣೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ. ಪಾಶ್ಚಾತ್ಯರು ಕೂಡ ಬೆಂಕಿಯ ಜ್ವಾಲೆಯು ವಿಮರ್ಶೆಯ ವಿಚಾರವೆಂದು ಪರಿಗಣಿಸಿಲ್ಲ. ಮೋಂಬತ್ತಿ ಉರಿಯುವಾಗ ಅಥವಾ ಸಾಮಾನ್ಯವಾಗಿ ಬೆಂಕಿ ಉರಿಯುವಾಗ ಸಂಭವಿಸುವ ರಾಸಾಯನಿಕ ಬದಲಾವಣೆಗಳನ್ನು ಭೌತಶಾಸ್ತ್ರದಲ್ಲಿ ವಿವರಿಸಿರುವುದು ನಿಜ. ಆದರೆ ಬೆಂಕಿಯು ಜ್ವಲಿಸುತ್ತಿರುವಾಗ ಕಾಣುವ ವಿವಿಧ ಭಂಗಿಗಳನ್ನು ಎಲ್ಲಿಯೂ ಹೇಳಿಲ್ಲ. ಈ ಮಂತ್ರದಲ್ಲಿ ಬೆಂಕಿಯು ಹೊರಚಾಚುವ ಜ್ವಾಲೆಗಳನ್ನು ಅಗ್ನಿಯ ನಾಲಗೆಗಳು ಎಂದು ಕಲ್ಪಿಸಿ ಅವುಗಳಿಗೆ ಸುಂದರವಾದ ಮತ್ತು ಅನ್ವರ್ಥವಾಗುವ ಹೆಸರುಗಳನ್ನು ಕೊಟ್ಟಿದೆ.

ಯಜ್ಞ, ಯಾಗಾದಿಗಳನ್ನು ಮಾಡುವಾಗ ಅಗ್ನಿಗೆ ಪ್ರಥಮಸ್ಥಾನ. ಆದ್ದರಿಂದ ವೇದಗಳ ಕಾಲದಲ್ಲಿ ಅಗ್ನಿಯು ಬಹುಮುಖ್ಯ ಆರಾಧ್ಯದೇವತೆ. ಆಧ್ಯಾತ್ಮಿಕಜ್ಞಾನ ಬಯಸುತ್ತಿದ್ದ ಸಾಧಕರೆಲ್ಲರೂ ಅಗ್ನಿಯನ್ನು ಕುರಿತು ಉಪಾಸನೆ ಮಾಡುತ್ತಿದ್ದರು. ಆಗ ಅಗ್ನಿಯ ವಿವಿಧ ಬಣ್ಣಗಳೂ, ಭಂಗಿಗಳೂ ಅವರ ಧ್ಯಾನದ ವಿಷಯವಾಗಿದ್ದವು. ಇವು ಅವರ ಮನಸ್ಸಿನ ಏಕಾಗ್ರತೆಯನ್ನು ನೆಲೆಗೊಳಿಸುವ ಉಪಾಯಗಳಾಗಿದ್ದವು.

**ಏತೇಷು ಯಶ್ಚರತೇ ಭ್ರಾಜಮಾನೇಷು**
**ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।**
**ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ**
**ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥** ೫

**ಭ್ರಾಜಮಾನೇಷು ಏತೇಷು** – ಹೊಳೆಯುತ್ತಿರುವ ಈ ಅಗ್ನಿಶಿಖೆಗಳಲ್ಲಿ, **ಯಃ** – ಯಾರು, **ಯಥಾಕಾಲಂ** – ಕಾಲಕ್ಕೆ ಸರಿಯಾಗಿ, **ಚರತೇ** – ಕರ್ಮವನ್ನು ಮಾಡುತ್ತಾನೆಯೋ, **ತಂ** – ಆತನನ್ನು, **ಏತಾಃ ಆಹುತಯಃ** – ಈ ಆಹುತಿಗಳು, **ಹಿ ಆದದಾಯನ್** – ಕರೆದುಕೊಂಡು, **ಸೂರ್ಯಸ್ಯ** – ಸೂರ್ಯನ, **ರಶ್ಮಯಃ (ಭೂತ್ವಾ)** – ರಶ್ಮಿಗಳಾಗಿ, **ಯತ್ರ** – ಎಲ್ಲಿ, **ದೇವಾನಾಂಪತಿಃ ಏಕಃ** – ದೇವತೆಗಳ ಏಕಾಧಿಪತಿಯಾದ (ಇಂದ್ರನು), **ಅಧಿವಾಸಃ** – ವಾಸ ಮಾಡಿಕೊಂಡಿರುವನೋ, (ಆ ಸ್ವರ್ಗಕ್ಕೆ), **ನಯಂತಿ** – ಕರೆದುಕೊಂಡು ಹೋಗುವುವು.

(೫) ಯಾರು ಹೊಳೆಯುತ್ತಿರುವ ಈ ಅಗ್ನಿಶಿಖೆಗಳಲ್ಲಿ ಕಾಲಕಾಲಕ್ಕೆ ಸರಿಯಾಗಿ ಕರ್ಮವನ್ನು

* ಈ ಶಬ್ದಕ್ಕೆ 'ವಿಶ್ವರೂಪಿ' (ಸರ್ವರೂಪಗಳುಳ್ಳವಳು) ಎಂಬ ಪಾಠಾಂತರವಿದೆ.

**ಮಾಡುತ್ತಾನೋ ಆತನನ್ನು ಈ ಆಹುತಿಗಳು ಸೂರ್ಯರಶ್ಮಿಗಳಾಗಿ ಎಲ್ಲಿ ದೇವತೆಗಳ ಏಕಾಧಿಪತಿಯಾದ ಇಂದ್ರನು ವಾಸ ಮಾಡಿಕೊಂಡಿರುವನೋ ಆ ಸ್ವರ್ಗಕ್ಕೆ ಕರೆದುಕೊಂಡು ಹೋಗುವುವು**

ಕರ್ಮಕಾಂಡದ ಯಜ್ಞ, ಹೋಮಗಳನ್ನು ಮಾಡುವಾಗ ಅನುಸರಿಸಬೇಕಾದ ಕಟ್ಟುನಿಟ್ಟಾದ ನಿಯಮಗಳನ್ನು ಹಿಂದೆಯೇ ಶ್ರುತಿಯು ತಿಳಿಸಿದೆ. ಈ ಮಂತ್ರದಲ್ಲಿ ನಿಷ್ಠೆಯಿಂದ ಮಾಡಿದ ಕರ್ಮಕ್ಕೆ ದೊರಕಬೇಕಾದ ಫಲವು ಸಿಕ್ಕೇ ಸಿಗುತ್ತದೆ ಎಂದು ಹೇಳುತ್ತದೆ. ಕಾಲಕಾಲಕ್ಕೆ ವಿಧ್ಯುಕ್ತವಾದ ಕರ್ಮಗಳನ್ನು ಮಾಡಿದ ಯಜಮಾನನನ್ನು ಅವನು ಅರ್ಪಿಸಿದ ಆಹುತಿಗಳು ಸೂರ್ಯರಶ್ಮಿಗಳ ಮೂಲಕ ಇಂದ್ರಲೋಕಕ್ಕೆ ಸೂಕ್ಷ್ಮದೇಹದ ರೂಪದಲ್ಲಿ ಕರೆದೊಯ್ಯುವುವು ಎಂದು ಉಪನಿಷತ್ತು ಹೇಳುತ್ತದೆ. ಈ ಹೇಳಿಕೆಯನ್ನು ಸರಿಯಾದ ರೀತಿಯಲ್ಲಿ ವಿಚಾರ ಮಾಡದೆ, ಮೇಲಿನ ನೋಟಕ್ಕೆ ಕಾಣುವ ಅರ್ಥವನ್ನೇ ಗ್ರಹಿಸಿದರೆ ಹಾಸ್ಯಾಸ್ಪದವಾಗಿ ತೋರಬಹುದು. ಹಾಗೆ ಅರ್ಥ ಮಾಡಿಕೊಂಡು ಪರಿಹಾಸ್ಯ ಮಾಡುವವರೂ ಕೆಲವರು ಇದ್ದಾರೆ.

ತಾತ್ತ್ವಿಕ ದೃಷ್ಟಿಯಿಂದ ಸೂರ್ಯನು ಸ್ವಪ್ರಕಾಶಮಾನವಾಗಿ ಬೆಳಗುತ್ತ ಗ್ರಹ ಮತ್ತು ಉಪಗ್ರಹಗಳಿಂದ ಪರಿವೇಷ್ಟಿತವಾಗಿರುವ ಕೇವಲ ಆಕಾಶಕಾಯ ಮಾತ್ರವೆಂದು ಪರಿಗಣಿಸಲ್ಪಡುವುದಿಲ್ಲ. ಅದು ಮಾನವ ಕೋಟಿಯ ಅನಂತಕಾಲದ ಕರ್ಮದ ಸಮಷ್ಟಿಫಲ ಎಂದು ಭಾವಿಸಲ್ಪಡುತ್ತದೆ. ಈ ವಿಚಾರವಾಗಿ ಛಾಂದೋಗ್ಯ ಉಪನಿಷತ್ತಿನಲ್ಲಿ ಸೂರ್ಯೋಪಾಸನೆಯನ್ನು ಕುರಿತು ಹೇಳುವಾಗ ವಿಸ್ತಾರವಾಗಿ ಚರ್ಚೆ ಮಾಡಿದೆ.

ಈ ಭಾವನೆಯು ವಿಚಿತ್ರವಾಗಿ ಕಂಡರೂ, ಆಳವಾಗಿ ಯೋಚಿಸಿದಾಗ ಒಂದು ರೀತಿಯಲ್ಲಿ ಅದು ಅಸಂಭವನೀಯವಾದದ್ದೆಂದು ಎನಿಸುವುದಿಲ್ಲ. ನಮಗೆ ತಿಳಿದಿರುವಂತೆ ನಮ್ಮ ಜೀವನಕ್ರಮ, ಆಚಾರ, ನಡವಳಿಕೆ, ಸ್ವಭಾವ ಇತ್ಯಾದಿಗಳೆಲ್ಲ ನಮ್ಮ ಪರಿಸರದ ಪ್ರಕೃತಿಯ ವಾತಾವರಣವನ್ನು ಆಧರಿಸಿರುತ್ತದೆ. ವಾತಾವರಣವು ಸೂರ್ಯನಿಗೂ ಭೂಮಿಗೂ ಇರುವ ಅಂತರವನ್ನು ಅನುಸರಿಸಿರುತ್ತದೆ. ಭೂಮಿಯು ತನ್ನ ಪಥದಲ್ಲಿ ಸೂರ್ಯನಸುತ್ತ ಸುತ್ತುವಾಗ ಉಂಟಾಗುವ ಅಂತರದ ವ್ಯತ್ಯಾಸದಿಂದ ವಾತಾವರಣದ ವ್ಯತ್ಯಾಸ, ನಿಯಂತ್ರಣ ಮತ್ತು ಸಿಯಮನ. ಭೂಮಿಯು ಸೂರ್ಯನಿಗೆ ಈಗಿರುವುದಕ್ಕಿಂತ ಹೆಚ್ಚು ಸಮೀಪವಾಗಿದ್ದಿದ್ದರೆ ಅಥವಾ ಹೆಚ್ಚು ದೂರವಾಗಿದ್ದಿದ್ದರೆ ಅದರ ಸ್ಥಿತಿಗತಿಗಳೇ ಅತ್ಯಂತ ವಿರುದ್ಧವಾಗಿರುತ್ತಿದ್ದವು. ಈಗಿರುವಂತೆ ಸಸ್ಯಗಳಾಗಲೀ, ಪ್ರಾಣಿಗಳಾಗಲಿ ಇರುವುದು ಸಾಧ್ಯವಾಗುತ್ತಿರಲಿಲ್ಲ. ಕಾಲಕಾಲಕ್ಕೆ ಮಳೆ, ಬಿಸಿಲುಗಳನ್ನು ಅಗತ್ಯವಿದ್ದಷ್ಟು ಒದಗಿಸಿ ಸಸ್ಯಗಳನ್ನೂ, ಪ್ರಾಣಿಗಳನ್ನೂ ಪೋಷಿಸುವುದು ಸೂರ್ಯನೇ. ಆದ್ದರಿಂದ ಭೂಮಂಡಲವನ್ನು ಪಾಲಿಸುವ ಅಧಿಪತಿ ಸೂರ್ಯನೆಂದರೆ ತಪ್ಪಾಗದು

ಈ ಜಗತ್ತು ನಮ್ಮ ಕರ್ಮಭೂಮಿ ಹಾಗೂ ಕರ್ಮಫಲ ಭೋಗಭೂಮಿ. ನಾವು ಮಾಡಿದ ಕರ್ಮಫಲಗಳನ್ನು ಅನುಭವಿಸಲು ಯೋಗ್ಯವಾದ ಪರಿಸರವಿರುವುದು ಈ ಭೂಮಂಡಲದಲ್ಲೇ ಇದು ನಮ್ಮ ಕರ್ಮಾನುಷ್ಠಾನಕ್ಕೆ ಕರ್ಮವಿಪಾಕಾನುಭವಕ್ಕೆ ಹೇಳಿ ಮಾಡಿಸಿದಂತಿದೆ. ಆದರೆ ಈ ಭೂಮಂಡಲದ

ಪರಿಸರ, ಸ್ಥಿತಿಗತಿಗಳು, ಸೂರ್ಯನ ಸ್ಥಾನ, ಅಂತರ, ಔಷ್ಣ್ಯ ಈ ಲಕ್ಷಣಗಳನ್ನು ಆಧರಿಸಿವೆ. ಈ ಅರ್ಥದಲ್ಲಿ ತಾತ್ತ್ವಿಕವಾಗಿ ಜೀವಕೋಟಿಯ ಸಮಷ್ಟಿ ಕರ್ಮಗಳು ಅವುಗಳ ಫಲಾನುಭೋಗಯೋಗ್ಯ ಭೂಮಿಯ ಸೃಷ್ಟಿಗೆ ಕಾರಣವಾದ ಸೂರ್ಯನ ಆವಿರ್ಭಾವಕ್ಕೂ ಪ್ರಚೋದಕವೆಂದು ನಾವು ಚಿಂತಿಸಬಹುದು. ಇದು ಸ್ವಲ್ಪ ಸಂಕೀರ್ಣವಾದ ಕಲ್ಪನೆ ಎಂದು ತೋರಬಹುದು. ಆದರೂ ಆ ರೀತಿ ಊಹಿಸುವುದು ಯುಕ್ತವೆನಿಸುವುದು.

ಈ ಕಲ್ಪನೆಯನ್ನೇ ಮುಂದುವರಿಸಿ ಯಜ್ಞಯಾಗಾದಿಗಳಲ್ಲಿ ಸಮರ್ಪಿಸುವ ಆಹುತಿಗಳು ಯಜಮಾನನನ್ನು ಸೂರ್ಯರಶ್ಮಿಯ ಮೂಲಕ ಕರ್ಮಫಲಗಳನ್ನು ಅನುಭವಿಸಲು ಯೋಗ್ಯವಾದ ಲೋಕಗಳಿಗೆ ಕೊಂಡೊಯ್ಯುತ್ತವೆ ಎಂದು ಈ ಮಂತ್ರದಲ್ಲಿ ಹೇಳಿದೆ. ಸಾಧಕನು ಶ್ರದ್ಧೆಯಿಂದ ಮನಃಪೂರ್ವಕವಾಗಿ ಮಾಡುವ ಸತ್ಕಾರ್ಯಗಳ 'ಮಾನಸಿಕ ಸತ್ಪರಿಣಾಮ' ವನ್ನು ಇಲ್ಲಿ ಆಲಂಕಾರಿಕವಾಗಿ ಸೂರ್ಯರಶ್ಮಿಗಳಿಗೆ ಹೋಲಿಸಿದೆ ಎಂದೆನ್ನಬಹುದು.

ಸಾವು ಎಂಬುದು ಸ್ಥೂಲದೇಹಕ್ಕೂ ಸೂಕ್ಷ್ಮಶರೀರಕ್ಕೂ ಇರುವ ಸಂಬಂಧವು ಶಾಶ್ವತವಾಗಿ ಕಡಿದುಹೋದಾಗ ಸಂಭವಿಸುವ ಸ್ಥಿತಿ. ಮನಸ್ಸು ಬುದ್ಧಿಗಳು ಮತ್ತು ಅವುಗಳೊಡನೆ ಜ್ಞಾನೇಂದ್ರಿಯಗಳೇ ಮೊದಲಾದ ಕರಣಗಳು ಸೇರಿ ಸೂಕ್ಷ್ಮಶರೀರವೆನಿಸುವುದು. ಅವುಗಳನ್ನು ಬಳಸಿರುವ ಉಪಾಧಿಗಳೊಡನೆ ಸೂಕ್ಷ್ಮಶರೀರದ ಸಂಬಂಧವು ಕಡಿದುಹೋದಾಗ ಉಪಾಧಿಗಳು ಸಾವಿಗೆ ತುತ್ತಾದವೆಂದು ಹೇಳುತ್ತೇವೆ.

ನಾವು ಯಾವ ಕೆಲಸ ಮಾಡಿದರೂ ಯಾವುದೋ ಒಂದು ಪ್ರೇರಕಶಕ್ತಿ ನಮ್ಮನ್ನು ಆ ಕೆಲಸಕ್ಕೆ ತೊಡಗುವಂತೆ ಮಾಡುತ್ತದೆ. ಉದಾಹರಣೆಗೆ, ನಾನು ಒಂದು ಹೋಟಲಿಗೆ ಹೋಗಿ ಕಾಫಿ ಕುಡಿಯುತ್ತೇನೆ, ಎಂದಿಟ್ಟುಕೊಳ್ಳೋಣ. ನಾನು ಅದನ್ನು ಬಿಟ್ಟು ಬೇರೆ ಏನಾದರೂ ಕೆಲಸ ಮಾಡಿರಬಹುದಾಗಿತ್ತು. ಆದರೂ ನನಗೆ ಅಲ್ಲಿಗೆ ಹೋಗಿ ಕಾಫಿ ಕುಡಿಯಬೇಕೆಂಬ ಬಯಕೆ ತೀವ್ರವಾಗಿ ಬರುವುದಕ್ಕೆ ಅಭ್ಯಾಸ ಬಲವೋ, ರೂಢಿಯೋ ಕಾರಣವಾಗಿರುತ್ತದೆ. ಅದು ಬಲವಂತವಾಗಿ ನನ್ನಿಂದ ಆ ಕೆಲಸ ಮಾಡಿಸುತ್ತದೆ. ಹಾಗೆಯೇ ಒಂದು ಸಲ ಮಾಡಿದ ಕೆಲಸವನ್ನು ಪುನಃ ಅದನ್ನೇ ಮಾಡುವುದಕ್ಕೆ ಪ್ರೇರಕವಾಗುತ್ತದೆ.

ಅದೇ ರೀತಿ, ಅತ್ಯಂತ ಶ್ರದ್ಧೆಯಿಂದ, ಬುದ್ಧಿಪೂರ್ವಕವಾಗಿ ಮಾಡಿದ ಪುಣ್ಯ ಕೆಲಸವು ನಮ್ಮ ಮನಸ್ಸಿನ ಮೇಲೆ ಪರಿಣಾಮ ಬೀರಿ ಮಾನಸಿಕ ಕ್ರಿಯಾತಂತ್ರದ ಶೈಲಿಯನ್ನೇ ಬದಲಾಯಿಸುತ್ತದೆ. ಅದು ಅಭ್ಯಾಸಬಲದಿಂದ ಕ್ರಮೇಣ ಮನಸ್ಸಿನ ರಚನೆಯ ಅಂತರ್ಗತವಾದ ತಿರುಳಾಗಿ ಪರಿಣಮಿಸುತ್ತದೆ. ಅದನ್ನೇ ನಾವು 'ವಾಸನಾ' ಎನ್ನುವುದು. ಈ ವಿಚಾರವನ್ನು ಕರ್ಮಾಂಗವಾಗಿ ಕೊಡುವ ಆಹುತಿಯು ಸೂರ್ಯರಶ್ಮಿಗಳ ಮೂಲಕ ಯಜಮಾನನನ್ನು ದೇವತೆಗಳ ಬಳಿ ಕೊಂಡೊಯ್ಯುವುವು ಎಂದು ಋಷಿಯು ಸುಂದರವಾಗಿ ಹೇಳಿದ್ದಾನೆ. ಶಾಸ್ತ್ರಗಳ ವಿವರಣೆಯ ಪ್ರಕಾರ ನಮ್ಮ ಒಂದೊಂದು ಇಂದ್ರಿಯಕ್ಕೂ ಒಬ್ಬೊಬ್ಬ ದೇವತೆ

ಅಧಿಪತಿಯಾಗಿದ್ದಾನೆ. ಕಣ್ಣಿಗೆ ಅಧಿಪತಿ ಸೂರ್ಯ, ಕಿವಿಗೆ ಅಧಿಪತಿ ಆಕಾಶ (ದಿಗ್ದೇವತೆಗಳು) ಇತ್ಯಾದಿಯಾಗಿ. ಈ ವಿವರಣೆಗಳು ಈಗಿನ ಕಾಲದ ವಿದ್ಯಾವಂತರಿಗೆ ವಿಚಿತ್ರವಾಗಿ ತೋರಬಹುದು. ಆದರೆ ಉಪನಿಷತ್ತಿನ ಮಾತುಗಳ ಅರ್ಥಗರ್ಭಿತ ಶೈಲಿ ಹಾಗೂ ವೈಜ್ಞಾನಿಕ ಹಿನ್ನೆಲೆಗಳನ್ನು ಪರಿಶೀಲಿಸಿದಾಗ ಮಾತ್ರ ಅವುಗಳ ವಿವರಣೆಯು ಪ್ರಸಕ್ತವಾಗುವುದು.

ಕಣ್ಣಿಗೆ ನೋಡುವ ಶಕ್ತಿ ಇರುವುದು ಬೆಳಕಿದ್ದಾಗ ಮಾತ್ರ. ಆಕಾಶದಲ್ಲಿ ಮಾತ್ರ ಶಬ್ದದ ಅಲೆಗಳು ಹೊಮ್ಮಿ ನಮ್ಮ ಕಿವಿಗೆ ಶಬ್ದಾನುಭವವನ್ನು ಕೊಡುವುವು. ಜಗತ್ತು ಕತ್ತಲಲ್ಲೇ ಮುಳುಗಿದ್ದಿದ್ದರೆ ನಾವು ಕಣ್ಣಿದ್ದರೂ ಕುರುಡರಾಗಿರುತ್ತಿದ್ದೆವು. ಆಕಾಶದ ಮಾಧ್ಯಮವಿಲ್ಲದಿದ್ದರೆ ನಾವು ಕಿವಿಯಿದ್ದರೂ ಕಿವುಡರಾಗಿರುತ್ತಿದ್ದೆವು. ಇಂದ್ರಿಯಗಳು ತಮ್ಮ ತಮ್ಮ ಕೆಲಸ ಮಾಡಲು ಅಗತ್ಯವಾದ ಸನ್ನಿವೇಶವನ್ನು ಒದಗಿಸುವ ಶಕ್ತಿಗೆ ಆಯಾ ಇಂದ್ರಿಯದ ಅಧಿಪತಿ ಎಂದು ನಮ್ಮ ಪೂರ್ವಿಕರು ಹೇಳಿದ್ದಾರೆ. ಈ ರೀತಿ ಪ್ರತಿ ಇಂದ್ರಿಯಕ್ಕೂ ಒಬ್ಬೊಬ್ಬ ಅಧಿಪತಿ ಇದ್ದಾನೆ. ಅವರವರ ಕಟ್ಟುಪಾಡಿನಲ್ಲಿ ಮಾತ್ರ ನಮ್ಮ ಇಂದ್ರಿಯಗಳು ಕೆಲಸ ಮಾಡಬಲ್ಲವು. ಆ ಇಂದ್ರಿಯಗಳ ಅಧಿಪತಿಗಳನ್ನು 'ದೇವ' ಅಥವಾ 'ದೇವತಾ' ಎಂದು ನಮ್ಮ ಶಾಸ್ತ್ರಗಳಲ್ಲಿ ಕರೆದಿದ್ದಾರೆ. 'ದೇವ' ಅಥವಾ 'ದೇವತೆ' ಎಂಬ ಮಾತಿಗೆ ಸಂಸ್ಕೃತದಲ್ಲಿ ನಾನಾರ್ಥಗಳಿವೆ. ಒಟ್ಟಿನಲ್ಲಿ ಅವು ಸಮಾನಾರ್ಥ ಕೊಡುವುದಿದ್ದರೂ ಸ್ವಲ್ಪ ಸೂಕ್ಷ್ಮ ಭೇದಗಳಿವೆ. 'ದೇವತೆ' ಎಂದರೆ (೧) ಬೆಳಗುವವನು ಅಥವಾ ಬೆಳಕನ್ನು ಕೊಡುವವನು (೨) ಐಶ್ವರ್ಯವನ್ನು ಕೊಡುವವನು (೩) ಆರೋಗ್ಯವನ್ನುಂಟುಮಾಡುವವನು (೪) ಮಾರ್ಗದರ್ಶನ ಮಾಡುವವನು (೫) ಬೇರೆಯವ್ರೂ ಪ್ರಕಾಶವನ್ನು ಕೊಡುವಂತೆ ಮಾಡುವವನು (೬) ಸಂಗೀತವನ್ನುಂಟು ಮಾಡುವವನು (೭) ಜ್ಞಾನ ವಿವೇಕಗಳನ್ನು ಕೊಡುವವನು – ಇತ್ಯಾದಿ ಅರ್ಥಗಳಿವೆ. ಪ್ರೊ|| ಎಸ್.ಕೆ. ಗುಪ್ತ ಎನ್ನುವವರು 'ದೇವತಾ' ಎಂಬ ಮಾತಿನ ಪ್ರಯೋಗದಲ್ಲಿ ಎಷ್ಟು ವಿವಿಧ ಅರ್ಥಗಳಿವೆ ಎಂಬುದನ್ನು ತಮ್ಮ 'ವೇದವಾಣಿ' ಎಂಬ ಗ್ರಂಥದಲ್ಲಿ ಸ್ವಾರಸ್ಯವಾಗಿ ಬಣ್ಣಿಸಿದ್ದಾರೆ.

ನಮ್ಮ ಇಂದ್ರಿಯಗಳಿಂದ ಬಂದ ಪ್ರಚೋದನೆಗಳನ್ನು ಮನಸ್ಸು ಒಟ್ಟುಗೂಡಿಸಿ, [illegible]ಷಿಸಿ, ವ್ಯಾಖ್ಯಾನಿಸಿ ನಮಗೆ ಅರ್ಥವಾಗುವಂತೆ ಮಾಡಿ ತಿಳಿವನ್ನುಂಟು [illegible]ಡುತ್ತದೆ. ಇದರಿಂದ ಮನಸ್ಸು ಇಂದ್ರಿಯಗಳಿಗೆ ಒಡೆಯ ಎಂದು ಶಾಸ್ತ್ರಗಳು [illegible]ವೆ. ಆದ್ದರಿಂದ ಸಹಜವಾಗಿಯೇ ದೇವತೆಗಳ ಒಡೆಯನಾದ ಇಂದ್ರನೇ ಮನಸ್ಸಿಗೆ [illegible]ಪತಿ.

ಒಟ್ಟಿನಲ್ಲಿ ನಾವು ಮನಃಪೂರ್ವಕವಾಗಿ, ಯಾವುದಾದರೂ ಫಲವನ್ನುದ್ದೇಶಿಸಿ ಶ್ರದ್ಧೆಯಿಂದ ಮಾಡಿದ ಕೆಲಸವು ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮ ಬೀರುವುದೆಂದು ಮಂತ್ರವು ತಿಳಿಸುತ್ತದೆ. ಅದನ್ನೇ ಆಧುನಿಕ ವೈಜ್ಞಾನಿಕ ಭಾಷೆಯಲ್ಲಿ ಹೇಳುವುದಾದರೆ ನಾವು ಮಾಡುವ ಬಾಹ್ಯಕರ್ಮವು ಆಂತರಿಕವಾಗಿ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರಿ ಅದರ ಮೇಲೆ ತನ್ನ ವಿಶಿಷ್ಟವಾದ ಅಚ್ಚು ಅಥವಾ ಗುರುತನ್ನು ನೆಲೆಗೊಳಿಸುವುದೆಂದು ಹೇಳಬಹುದು.

**ಏಹ್ಯೇಹೀತಿ ತಮಾಹುತಯಃ ಸುವರ್ಚಸಃ**
**ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ ।**
**ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯ**
**ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥** ೬

**ಏಹಿ ಏಹಿ** – ಬಾ, ಬಾ, **ಇತಿ** – ಹೀಗೆಂದು, **ತಂ** – ಅವನನ್ನು (ಯಾಗ ಮಾಡುವವನನ್ನು) ಆಹ್ವಾನಿಸುತ್ತ (ಮತ್ತು), **ಏಷಃ** – ಇದು, **ವಃ** – ನಿಮಗೆ, **ಪುಣ್ಯಃ** – ಪುಣ್ಯವಾದ, **ಸುಕೃತಃ** – ಸುಕೃತವಾದ, **ಬ್ರಹ್ಮಲೋಕಃ** – ಬ್ರಹ್ಮ ಲೋಕವು (ಎಂದು), **ಪ್ರಿಯಾಂ ವಾಚಂ** – ಪ್ರಿಯವಾದ ಮಾತನ್ನು, **ಅಭಿವದಂತ್ಯಃ** – ಆಡುತ್ತ **ಅರ್ಚಯಂತ್ಯಃ** – ಪೂಜಿಸುತ್ತ, **ಸುವರ್ಚಸಃ** – ದೀಪ್ಯಮಾನವಾದ, **ಆಹುತಯಃ** – ಆಹುತಿಗಳು, **ತಂ ಯಜಮಾನಂ** – ಆ ಯಜಮಾನನನ್ನು, **ಸೂರ್ಯಸ್ಯ ರಶ್ಮಿಭಿಃ** – ಸೂರ್ಯನ ಕಿರಣಗಳ ಮೂಲಕ, **ವಹಂತಿ** – ಒಯ್ಯುತ್ತವೆ.

(೬) ಬಾ, ಎಂದು ಆಹ್ವಾನಿಸುತ್ತ 'ಇದು ನಿನಗೆ ಪುಣ್ಯವೂ ಸುಕೃತವೂ ಆದ ಬ್ರಹ್ಮಲೋಕ (ಸ್ವರ್ಗಲೋಕ)' ಎಂದು ಪ್ರಿಯವಾದ ಮಾತನ್ನು ಆಡುತ್ತ, ಪೂಜಿಸುತ್ತ ದೀಪ್ಯಮಾನವಾದ ಆಹುತಿಗಳು ಸೂರ್ಯ ರಶ್ಮಿಗಳ ಮೂಲಕ ಆ ಯಜಮಾನನನ್ನು (ಅಲ್ಲಿಗೆ) ಕರೆದೊಯ್ಯುತ್ತವೆ.

ಇದರಲ್ಲಿ ಹಿಂದಿನ ಮಂತ್ರದ ರೂಪಕವನ್ನೇ ಮುಂದುವರಿಸಿದೆ. ಯಜ್ಞ ಮಾಡುವ ಯಜಮಾನನಿಂದ ಸಮರ್ಪಿಸಲ್ಪಟ್ಟ ಆಹುತಿಯು ಸೂರ್ಯ ರಶ್ಮಿಗಳ ರೂಪದಲ್ಲಿ ಅವನ ವಾಸನೆಗಳ ಪ್ರಚೋದನೆಯಂತೆ ಹಿತವಚನಗಳನ್ನಾಡುತ್ತಾ, ಬಹಳ ಗೌರವದಿಂದ ಸ್ವಾಗತಿಸುತ್ತಾ, ಪುಣ್ಯ ಕರ್ಮದಿಂದ ಸುಕೃತವಾದ ಬ್ರಹ್ಮಲೋಕಕ್ಕೆ ಕರೆದೊಯ್ಯುವುವು ಎಂದು ಶ್ರುತಿಯು ಹೇಳುತ್ತದೆ. ಅಂದರೆ, ಯಜ್ಞ ಮಾಡುವವನ ಮನಸ್ಸಿನಲ್ಲಿ ರೂಪಗೊಂಡ ವಾಸನೆಗಳು ಅವನ ಮರಣಾನಂತರ ಅವನನ್ನು ಅವನ ಕರ್ಮಫಲಗಳ ಪೂರ್ಣಾನುಭವವನ್ನು ಹೊಂದಲು ಸಾಧ್ಯವಾಗುವ ಸನ್ನಿವೇಶವುಳ್ಳ ಲೋಕಕ್ಕೆ ಕರೆದೊಯ್ಯುತ್ತವೆ.

## ಕರ್ಮಫಲದ ಮಿತಿ

**ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ**
**ಅಷ್ಟಾದಶೋಕ್ತಮವರಂ ಯೇಷು ಕರ್ಮ ।**
**ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ**
**ಜರಾಮೃತ್ಯುಂ ತೇ ಪುನರೇವಾಪಿ ಯಂತಿ ॥** ೭

**ಏತೇ** – ಈ, **ಅಷ್ಟಾದಶ** – ಹದಿನೆಂಟು, **ಯಜ್ಞರೂಪಾಃ** – ಯಜ್ಞರೂಪಗಳು, **ಪ್ಲವಾಃ** – ನಾಶವಾಗತಕ್ಕವು, **ಅದೃಢಾಃ** – ಸ್ಥಿರವಲ್ಲದವು, **ಯೇಷು** – ಅವುಗಳಲ್ಲಿ, **ಅವರಂ ಕರ್ಮ** – ಕೆಳಮಟ್ಟದ ಕರ್ಮವು, **ಉಕ್ತಂ** – ಹೇಳಲ್ಪಟ್ಟಿದೆ, **ಏತತ್** – ಇದನ್ನು, **ಶ್ರೇಯಃ** – ಶ್ರೇಯಸ್ಸೆಂದು, **ಯೇ** – ಯಾವ, **ಮೂಢಾಃ** – ಮೂರ್ಖರು, **ಅಭಿನಂದಂತಿ**

— ಹಿಗ್ಗುವರೋ, (ಸಂತೋಷಿಸುವರೋ), **ತೇ** — ಅವರು, **ಪುನಃ ಏವ ಅಪಿ** — ಮತ್ತೆಯೂ **ಜರಾಮೃತ್ಯುಂ** — ಮುಪ್ಪು ಮರಣಗಳನ್ನು, **ಯಂತಿ** — ಹೊಂದುತ್ತಾರೆ.

**(೭) ಈ ಹದಿನೆಂಟು ಯಜ್ಞ ರೂಪಗಳು (ಹದಿನಾರು ಋತ್ವಿಕ್ಕುಗಳು, ಯಜಮಾನ ಮತ್ತು ಅವನ ಪತ್ನಿ) ನಾಶವಾಗತಕ್ಕವು ಮತ್ತು ದೃಢವಲ್ಲದವು ಅವುಗಳಲ್ಲಿ ಕೀಳುಮಟ್ಟದ ಕರ್ಮವು ಹೇಳಲ್ಪಟ್ಟಿದೆ ಯಾವ ಮೂಢರು ಇದನ್ನು ಶ್ರೇಯಸ್ಸೆಂದು ಹಿಗ್ಗುವರೋ ಅವರು ಪುನಃ ಮುಪ್ಪು ಮತ್ತು ಮರಣವನ್ನು ಹೊಂದುತ್ತಾರೆ.**

ಕರ್ಮಾಚರಣೆಗೆ ನಮ್ಮ ಶಿಸ್ತಿನ ಸಾಧನೆಯಲ್ಲಿ ಒಂದು ಸ್ಥಾನವಿದೆ. ವ್ಯಕ್ತಿತ್ವದ ಸಂಸ್ಕಾರಕ್ಕೆ, ಆತ್ಮೋದ್ಧಾರದ ಪ್ರಯತ್ನಕ್ಕೆ ಕರ್ಮವಿಧಿ ವಿಧಾನಗಳು ಸಹಾಯಕ. ಆತ್ಮಸಂಯಮದ ತರಬೇತಿಗೆ ಅವು ತಳಹದಿ. ಆದರೆ ಧ್ಯೇಯ ಸಾಧಿಸಲು ಅವು ಸಾಧನವೇ ಹೊರತು ಅವೇ ಧ್ಯೇಯವಲ್ಲ. ಅನೇಕರು ಸಾಧನಾ ಕ್ರಮವನ್ನೇ ಗುರಿಯೆಂದು ತಪ್ಪಾಗಿ ತಿಳಿದಿರುತ್ತಾರೆ. ಕರ್ಮವಿಧಿಗಳನ್ನು ಮೀರಿ ಅವುಗಳಿಂದ ಪಡೆಯಬಹುದಾದ ಫಲಕ್ಕಿಂತ ಉತ್ಕೃಷ್ಟವಾದ ಗುರಿ ಇರುವುದೆಂದು ಅವರು ಚಿಂತಿಸುವುದೇ ಇಲ್ಲ. ಈ ಮಂತ್ರದಲ್ಲಿ ಶ್ರುತಿಮಾತೆಯು ಅಂತಹ ಅವಿವೇಕಿಗಳಾದ ಕರ್ಮಠರನ್ನು ಹೊಡೆದೆಬ್ಬಿಸುವ ಪ್ರಯತ್ನ ನಡೆಸಿದ್ದಾಳೆ. ಇದರಿಂದ ಅವರನ್ನು ಮೇಲ್ಮಟ್ಟದ ಸಾಧನೆಗೆ ಪ್ರಚೋದಿಸುತ್ತಿದ್ದಾಳೆ. (ಯಜ್ಞದಲ್ಲಿ ಹದಿನೆಂಟು ಮಂದಿ ಸಹಾಯಕರು ಎಂದರೆ ಹದಿನಾರು ಜನ* ಋತ್ವಿಕರು, ಮತ್ತು ಯಜಮಾನ, ಅವನ ಪತ್ನಿ). ಯಾವುದೋ ಕೆಳದರ್ಜೆಯ ಫಲವನ್ನು ಬಯಸಿ ಮಾಡುವ ಯಜ್ಞದಲ್ಲಿ ಈ ಹದಿನೆಂಟು ಮಂದಿ ಭಾಗಿಗಳಿಗೂ ನಿಯತವಾದ ಕರ್ಮವಿಧಿಗಳನ್ನು ನಿಯೋಜಿಸಿದೆ. ಎಲ್ಲಾ ಕರ್ಮಾಚರಣೆಯಲ್ಲೂ, ಎಲ್ಲಾ ಸಂದರ್ಭಗಳಲ್ಲಿಯೂ, ಎಲ್ಲಾ ಸನ್ನಿವೇಶಗಳಲ್ಲೂ, ಗೃಹಸ್ಥನೂ ಅವನ ಪತ್ನಿಯೂ ಯಜ್ಞಾಧ್ಯಕ್ಷರಾಗಿರಲೇಬೇಕೆಂಬ ನಿಯಮವಿಲ್ಲವೆಂಬುದನ್ನು ಇಲ್ಲಿ ನಾವು ಗಮನದಲ್ಲಿಡಬೇಕು.

ಅಂಥ ಕರ್ಮಾಚರಣೆಯನ್ನು ಖಂಡಿಸುವುದು ಮಾತ್ರವಲ್ಲದೆ, ಉತ್ಕೃಷ್ಟವಾದ ಧ್ಯೇಯದ ಕಡೆಗೆ ಗಮನ ಕೊಡದ ಕರ್ಮಠರಿಗೆ ಉಂಟಾಗುವ ದುಸ್ಥಿತಿಯನ್ನು ಶ್ರುತಿಯು ವಿವರಿಸುತ್ತದೆ. ಎಷ್ಟೇ ಮಹತ್ವಪೂರ್ಣ ಯಜ್ಞಕರ್ಮವಾದರೂ, ಎಷ್ಟೇ ಕಟ್ಟುನಿಟ್ಟಾಗಿ ವಿಧಿವತ್ತಾಗಿ ಅಕ್ಷರಶಃ ಅದನ್ನು ಆಚರಿಸಿದ್ದರೂ ಆ ಯಜಮಾನನಿಗೆ ಸಿಗುವುದು ಶಾಸ್ತ್ರ ಗ್ರಂಥಗಳಲ್ಲಿ ಮೇಲಿನ ಲೋಕಗಳೆಂದು ಹೇಳಿರುವ ಸ್ವರ್ಗಲೋಕ, ಸತ್ಯಲೋಕ, ಬ್ರಹ್ಮಲೋಕಗಳೆಂಬ ಉನ್ನತಮಟ್ಟದ ಅತ್ಯಂತ ಸೂಕ್ಷ್ಮ ಸುಖಾನುಭವವನ್ನು ಕೊಡುವ ವಿಶಿಷ್ಟ ಆಧ್ಯಾತ್ಮಿಕ ಕ್ಷೇತ್ರಗಳು ಮಾತ್ರ. ಅವನ ಸ್ಥಾನ ಏನೇ ಆಗಿರಲಿ, ಅವನು ಎಂತಹ ಸ್ವರ್ಗ ಸುಖದ ಸುಪ್ಪತ್ತಿಗೆಯಲ್ಲಾದರೂ ಓಲಾಡುತ್ತಿರಲಿ, ಅದು ಅಲ್ಪಕಾಲದ ತಂಗುದಾಣವೇ ಹೊರತು ಆತ್ಮಸಾಕ್ಷಾತ್ಕಾರದ ಶಾಶ್ವತ ಶಾಂತಿಧಾಮವಾಗಲಾರದು. ಎಂತಹ ಯಜ್ಞಯಾಗ, ಹೋಮ ಹವನಗಳ

***ಯಜ್ಞದಲ್ಲಿ ಹದಿನಾರು ಜನ ಋತ್ವಿಕರು ಯಾರೆಂದರ - ಬ್ರಹ್ಮಾ, ಬ್ರಾಹ್ಮಣಾಚ್ಛಂಸೀ, ಅಗ್ನೀಧ್ರಃ, ಪೋತಾ, ಉದ್ಗಾತಾ, ಪ್ರಸ್ತೋತಾ, ಪ್ರತಿಹರ್ತಾ, ಸುಬ್ರಹ್ಮಣ್ಯಃ, ಹೋತಾ, ಮೈತ್ರಾವರುಣಃ, ಅಚ್ಛಾವಾಕಃ, ಗ್ರಾವಸ್ತುತ್, ಅಧ್ವರ್ಯುಃ, ಪ್ರತಿಪ್ರಸ್ಥಾತಾ, ನೇಷ್ಟಾ ಮತ್ತು ಉನ್ನೇತಾ**

ಮಹತ್ಕರ್ಮಗಳನ್ನು ಮಾಡಿದ ಪುಣ್ಯಾತ್ಮನೂ ಅವುಗಳ ಫಲವಾಗಿ ಆನಂದದಾಯಕವೂ, ಸುಖಪ್ರದವೂ ಆದ ಭೋಗಗಳನ್ನು ಅನುಭವಿಸಿ ಅವು ಮುಗಿದನಂತರ ಪುನಃ ಮರ್ತ್ಯಲೋಕಕ್ಕೇ ವಾಪಸ್ಸು ಬರುವನು. 'ಅಂತಹವರು ಜರಾಮೃತ್ಯುಗಳನ್ನು' ಪುನಃ ಹೊಂದುವರು, ಎಂದು ಶ್ರುತಿಯು ಹೇಳುತ್ತದೆ. ಇಲ್ಲಿ 'ಜರಾ ಮೃತ್ಯು' ಎಂಬ ಮಾತಿನಿಂದ ಸಕಲ ಜೀವಿಗಳಿಗೂ ಸಂಭವಿಸುವ ಕ್ಲೇಶದಾಯಕವಾದ ಎಲ್ಲಾ ವಿಕಾರಗಳನ್ನೂ ಉಪಲಕ್ಷಣವಾಗಿ ಸೂಚಿಸುತ್ತಿದೆ. ಹುಟ್ಟು, ವೃದ್ಧಿ, ಪರಿಣಾಮ, ಅಪಕ್ಷಯ, ಮೃತ್ಯು ಈ ಐದು ಪರಿಣಾಮಗಳೂ[1] ಪ್ರಾಣಿವರ್ಗಕ್ಕೆಲ್ಲ ಅನ್ವಯಿಸುವ ಸಂಕಟಕರವಾದ ವಿಕಾರಗಳು. ಕರ್ಮನಿರತನು ಇವುಗಳಿಂದ ಮುಕ್ತನಾಗಲಾರ.

## ಅವಿದ್ಯಾಗ್ರಸ್ತ ಕರ್ಮಠರ ದುಸ್ಥಿತಿ

**ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾಃ**
**ಅಂಧೇನೈವ ನೀಯಮಾನಾ ಯಥಾಂಧಾಃ ॥** ೮

**ಮೂಢಾಃ** – ಮೂಢರು, **ಅವಿದ್ಯಾಯಾಂ** – ಅವಿದ್ಯೆಯ, **ಅಂತರೇ** – ಮಧ್ಯದಲ್ಲಿ, **ವರ್ತಮಾನಾಃ** – ಇರುವವರಾಗಿ, **ಸ್ವಯಂ** – ತಾವೇ, **ಧೀರಾಃ** – ಧೀರರೂ, **ಪಂಡಿತಂ** – ಪಂಡಿತರೂ (ಎಂದು), **ಮನ್ಯಮಾನಾಃ** – ಭಾವಿಸಿಕೊಂಡು, **ಜಂಘನ್ಯಮಾನಾಃ** – ಸಂಕಟಪಡುತ್ತಾ, **ಅಂಧೇನ ಏವ** – ಕುರುಡನಿಂದ, **ನೀಯಮಾನಾಃ** – ಕರೆದುಕೊಂಡು ಹೋಗಲ್ಪಡುವ, **ಯಥಾ ಅಂಧಾಃ** – ಕುರುಡರ ಹಾಗೆ, **ಪರಿಯಂತಿ** – ತೊಳಲಾಡುತ್ತಿರುವರು.

**(೮) ಮೂಢರು ಅವಿದ್ಯೆಯಿಂದ ಕೂಡಿದವರಾಗಿ, ತಾವೇ ಧೀರರು ಮತ್ತು ಪಂಡಿತರು ಎಂದು ಭಾವಿಸಿಕೊಂಡು ಸಂಕಟಪಡುತ್ತಾ ಕುರುಡನಿಂದ ಕರೆದುಕೊಂಡು ಹೋಗಲ್ಪಡುತ್ತಿರುವ ಕುರುಡರಂತೆ ತೊಳಲಾಡುತ್ತಿರುವರು.**

ಯಜ್ಞ, ಯಾಗಾದಿಗಳನ್ನೇ ನಂಬಿ ಕರ್ಮಾಚರಣೆಯಿಂದಲೇ ಶಾಶ್ವತ ಸುಖ ಪಡೆಯಲೆಳಸುವ ಕರ್ಮಠರನ್ನು ಎಚ್ಚರಿಸಿ, ವಿವೇಕವನ್ನು ಬೋಧಿಸಿ ಅವರಿಗೆ ಜ್ಞಾನಮಾರ್ಗದಲ್ಲಿ ಆಸಕ್ತಿಯುಂಟಾಗುವಂತೆ ಮಾಡುವುದೇ ಈ ಪರಿಚ್ಛೇದದ ಉದ್ದೇಶ. ಕರ್ಮಮಾರ್ಗದಲ್ಲಿ ಬರುವ ತೊಂದರೆಗಳು ವೈದಿಕ ವಿಧಿಯನ್ನು ಚಾಚೂ ತಪ್ಪದೆ ಮಾಡಲು ಯತ್ನಿಸುವಾಗ ಒದಗುವ ಅಡ್ಡಿ ಆತಂಕಗಳು, ಕಷ್ಟ ನಿಷ್ಠುರಗಳು, ವಿಧಿ ತಪ್ಪಿ ಮಾಡಿದ ಕರ್ಮಗಳಿಂದ ಉಂಟಾಗುವ ಹಾನಿಗಳು, ಅಷ್ಟನ್ನೂ ಸಹಿಸಿ ಸಾಹಸದಿಂದ ಮಾಡಿದರೂ ಕರ್ಮಗಳಿಂದ ಬರುವ ಪರಿಮಿತಿಯಾದ ಫಲ – ಇವುಗಳನ್ನೆಲ್ಲಾ ಶ್ರುತಿಯು ಈ ಹಿಂದೆ ವಿವರಿಸಿದೆ. ಇಷ್ಟು ಹೇಳಿದರೂ

[1] ಶಾಸ್ತ್ರಗಳಲ್ಲಿ 'ಅಸ್ತಿತ್ವ' ಎಂಬ ಸ್ಥಿತಿಯನ್ನೂ ಸೇರಿಸಿ 'ಷಡ್ ವಿಕಾರಗಳು' ಎಂದು ಹೇಳಿದೆ.

ಅರಿತುಕೊಳ್ಳದ ಮೂಢರನ್ನು ಕುರಿತು ಇಲ್ಲಿ ಪರಿಹಾಸ್ಯ ಮಾಡಿದೆ. ಇದೇ ಮಂತ್ರವು ಕಠೋಪನಿಷತ್ತು* ಮತ್ತು ಬೃಹದಾರಣ್ಯಕಗಳಲ್ಲೂ ಪುನರುಕ್ತವಾಗಿರುವುದರಿಂದ ಈ ವಿಚಾರದಲ್ಲಿ ಶ್ರುತಿಮಾತೆಯ ಕಳಕಳಿಯು ಎಷ್ಟರಮಟ್ಟಿಗಿದೆ ಎಂಬುದು ವ್ಯಕ್ತವಾಗುತ್ತದೆ.

ಈ ಮಂತ್ರವೂ ಉಪನಿಷತ್ತಿನ ಮಂತ್ರವಾದ್ದರಿಂದ ಇದೂ ವೇದಭಾಗ. ಸಮನ್ವಯ ಮಾಡಿಕೊಂಡು ಸರಿಯಾಗಿ ಅರ್ಥ ಮಾಡಿಕೊಳ್ಳುವುದಾದರೆ, ವೇದಗಳಲ್ಲಿ ವಿರೋಧಾಭಾಸಗಳಿಗೆ ಎಡೆಯಿರುವುದಿಲ್ಲ. ವೇದಗಳ ಮೊದಲ ಭಾಗದಲ್ಲಿ ಬರುವ ಕರ್ಮಕಾಂಡದಲ್ಲಿ ಕರ್ಮಾಚರಣೆಗೆ ಪ್ರಾಶಸ್ತ್ಯ ಕೊಟ್ಟು ಅದನ್ನು ಹೊಗಳಿದೆ. ಕೊನೆಯಲ್ಲಿ ಬರುವ ಉಪನಿಷತ್ತಿನ ಭಾಗವಾದ ಈ ಮಂತ್ರದಲ್ಲಿ ಕಂಡುಬರುವಂತೆ ಕರ್ಮವನ್ನು ತೆಗಳಿದೆ ಇವು ವಿರೋಧೋಕ್ತಿಗಳಲ್ಲವೇ ಎಂದರೆ, ಅಲ್ಲ.

ನಿಮ್ಮ ಮಗನು ಪ್ರಾಥಮಿಕ ತರಗತಿಗಳಲ್ಲಿ ಓದುತ್ತಿದ್ದಾಗ ಅವನಿಗೆ ನಿತ್ಯವೂ ಮಗ್ಗಿ ಕೋಷ್ಟಕವನ್ನು ಓದಿ ಕಂಠಪಾಠ ಮಾಡುವಂತೆ ಹೇಳುತ್ತಿದ್ದಿರಿ. ಅವನು ದೊಡ್ಡವನಾಗಿ ಮೇಲಿನ ತರಗತಿಗಳಿಗೆ ಬಂದು ಗಣಿತಶಾಸ್ತ್ರದಲ್ಲಿ ಪರಿಣತನಾದ ಮೇಲೆ ಕೂಡ ಮಗ್ಗಿಕೋಷ್ಟಕವನ್ನು ಓದಲು ಹೇಳುತ್ತೀರಾ ? ಇಲ್ಲ. ಈಗ ಅವನು ಆ ಮಟ್ಟವನ್ನು ಅತಿಕ್ರಮಿಸಿರುತ್ತಾನೆ. ಹಾಗೆಯೇ ಕರ್ಮವಿಧಿಗಳಿಗೆ ಪ್ರಾರಂಭದ ಹಂತದಲ್ಲಿ ಒಂದು ಪ್ರಯೋಜನವಿದೆ, ಉದ್ದೇಶವಿದೆ. ಅದನ್ನು ಸಾಧಿಸದೆ ಮೇಲಿನ ಸ್ತರದ ಆಧ್ಯಾತ್ಮಿಕ ಪ್ರಗತಿಯನ್ನು ಪಡೆಯುವುದು ಸಾಧ್ಯವಿಲ್ಲ. ಆದರೆ ಕೊನೆಯವರೆಗೆ ವೈದಿಕ ಕರ್ಮಾಚರಣೆಯಲ್ಲೇ ನಿರತರಾಗಿದ್ದರೆ ಜೀವನದ ಗುರಿಯೇ ಅಳಿಸಿಹೋಗುವುದು. ಬಾಳು ವ್ಯರ್ಥವಾಗುವುದು. ಆದ್ದರಿಂದ ಆಧ್ಯಾತ್ಮಿಕ ಗುರಿಯನ್ನು ಗಮನದಲ್ಲಿಟ್ಟುಕೊಳ್ಳದೆ ಮಾಡುವ ಕರ್ಮಗಳ ನಿರರ್ಥಕತೆಯನ್ನು ಶ್ರುತಿಯು ಸಾಧಕರಿಗೆ ಒತ್ತಿ ಹೇಳುತ್ತಿದೆ

**ಅವಿದ್ಯಾಯಾಂ ಬಹುಧಾ ವರ್ತಮಾನಾ**
**ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ ।**
**ಯತ್ ಕರ್ಮಿಣೋ ನ ಪ್ರವೇದಯಂತಿ ರಾಗಾತ್**
**ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥**

**ಅವಿದ್ಯಾಯಾಂ** – ಅವಿದ್ಯೆಯಲ್ಲಿ, **ಬಹುಧಾ** – ಅನೇಕ ವಿಧಗಳಲ್ಲಿ, **ವರ್ತಮಾನಾಃ** – ಇರುವವರಾಗಿ, **ಬಾಲಾಃ** – ಅಜ್ಞಾನಿಗಳು, **ವಯಂ** – ನಾವು, **ಕೃತಾರ್ಥಾಃ** – ಕೃತಾರ್ಥರು, **ಇತಿ** – ಹೀಗೆಂದು, **ಅಭಿಮನ್ಯಂತಿ** – ಅಭಿಮಾನಪಡುತ್ತಾರೆ, **ಯತ್** – ಯಾವ ಕಾರಣದಿಂದ, **ಆತುರಾಃ** – ದುಃಖಾರ್ತರಾಗಿ, **ಕರ್ಮಿಣಃ** – ಕರ್ಮಿಗಳು,

* ಈ ಮಂತ್ರದ ಹೆಚ್ಚು ವಿವರಣೆಗಾಗಿ ಕಠೋಪನಿಷತ್ತಿನ ಒಂದನೆಯ ಅಧ್ಯಾಯ ಎರಡನೆಯ ವಲ್ಲಿ, ಐದನೆಯ ಮಂತ್ರಕ್ಕೆ ಕೊಟ್ಟಿರುವ ವ್ಯಾಖ್ಯಾನವನ್ನು ನೋಡಿ.

**ರಾಗಾತ್** – ಕರ್ಮಫಲಾಸಕ್ತಿಯಿಂದ, **ನ ಪ್ರವೇದಯಂತಿ** – (ತತ್ತ್ವವನ್ನು) ತಿಳಿಯುವುದಿಲ್ಲವೋ, **ತೇನ** – ಆ ಕಾರಣದಿಂದ, **ಕ್ಷೀಣಲೋಕಾಃ** – ಕರ್ಮಫಲವನ್ನು ಕಡಮೆ ಮಾಡಿಕೊಂಡವರಾಗಿ, (ಸ್ವರ್ಗ ಲೋಕದಿಂದ) **ಚ್ಯವಂತೇ** – ಕೆಳಗೆ ಬೀಳುತ್ತಾರೆ.

(೯) ಅವಿದ್ಯೆಯಲ್ಲಿ ಬಹುಪ್ರಕಾರವಾಗಿ ಮುಳುಗಿ 'ನಾವು ಕೃತಾರ್ಥರು' ಎಂದು ಈ ಅಜ್ಞಾನಿಗಳು ಹೆಮ್ಮೆಪಡುತ್ತಿರುತ್ತಾರೆ ಕರ್ಮಿಗಳು ಕರ್ಮಫಲದ ಆಸೆಯಿಂದ (ಯಥಾರ್ಥವನ್ನು) ತಿಳಿಯದೆ ದುಃಖಾರ್ತರಾಗಿ ಕರ್ಮಫಲವು ತೀರಿದ ನಂತರ (ಸ್ವರ್ಗಲೋಕದಿಂದ) ಕೆಳಕ್ಕೆ ಜಾರಿಬೀಳುವರು.

ಈ ಮಂತ್ರದಲ್ಲಿ ಹಿಂದೆ ಹೇಳಿರುವುದನ್ನೇ ಪುನಃ ಒತ್ತಿ ಹೇಳಿದೆ. ತಪ್ಪು ದಾರಿ ಹಿಡಿದ ಮಕ್ಕಳನ್ನು ದಂಡಿಸಿ ತಿದ್ದುವಂತೆ ಸಾಧಕರಿಗೆ ಶ್ರುತಿಮಾತೆಯು ಎಚ್ಚರಿಸುತ್ತಾಳೆ. ಇಲ್ಲಿ 'ಬಾಲಾಃ' (ಬಾಲರು) ಎಂದರೆ ಕರ್ಮವಿಧಿಗಳನ್ನು ಅಂಧ ನಂಬಿಕೆಯ ಛಲದಿಂದ ಆಚರಿಸುವ ಅಜ್ಞರು ಎಂಬ ಅರ್ಥ. ಶ್ರುತಿಮಾತೆಯ ಕರೆಯನ್ನು ಕೇಳಿಯಾದರೂ ದಾರಿ ತಪ್ಪಿ ಅಲೆಯುತ್ತಿರುವ ಅಜ್ಞಾನಿಗಳು ಸರಿಯಾದ ದಾರಿಗೆ ಬರಲೆಂಬುದೇ ಇಲ್ಲಿನ ಆಶಯ.

ಕಾಮಿತ ಫಲಗಳನ್ನು ಬಯಸಿ ಯಜ್ಞ ಯಾಗಾದಿಗಳನ್ನು ಮಾಡುವ ಕರ್ಮಠರಿಗೆ ಕರ್ಮಾಚರಣೆಯು ಒಂದು ವ್ಯಾಪಾರ – ತಾವು ಕೊಡಬೇಕಾದ ಬೆಲೆಯನ್ನು ಕೊಟ್ಟು ತಾವು ಬಯಸಿದ ಫಲವನ್ನು ಪಡೆಯುವ ವ್ಯವಹಾರ. ಕಾಮನೆಗಳನ್ನು ತೃಪ್ತಿಪಡಿಸುತ್ತಾ ಹೋದಷ್ಟೂ ಅವುಗಳು ಒಂದಕ್ಕೆರಡಾಗಿ ವೃದ್ಧಿಯಾಗುವುವೆಂದು ಈ ಮೊದಲಲ್ಲೇ ಹೇಳಿದೆ. ಆಸೆಗಳು ಉದಿಸುವ ಮೂಲಸ್ಥಾನವನ್ನು ನಂದಿಸುವವರೆಗೆ ಅವುಗಳು ಪುನಃ ಪುನಃ ಬಂದೇ ಬರುವುವು. ಕರ್ಮಫಲಗಳ ಬಯಕೆಯಿಂದ ತುಂಬಿದವರಾಗಿ ಮಹಾ ಪಂಡಿತರುಗಳು ಕೂಡಾ ತಮ್ಮ ಜೀವಮಾನವನ್ನೆಲ್ಲಾ ವೈದಿಕ ಕರ್ಮಗಳಲ್ಲಿ ವ್ಯರ್ಥವಾಗಿ ವ್ಯಯ ಮಾಡುತ್ತಾ, ಆತ್ಮತತ್ತ್ವವನ್ನು ಅರಿಯದೆ ದುಃಖಕ್ಕೆ ಈಡಾಗುವರಲ್ಲಾ ಎಂಬ ಅರ್ಥವನ್ನು 'ರಾಗಾತ್' ಎಂಬ ಮಾತಿನಿಂದ ಶ್ರುತಿಯು ತಿಳಿಸುತ್ತದೆ.

ಆಸೆಯಿಂದ ನಮ್ಮ ಮನಸ್ಸಿನಲ್ಲಿ ಯೋಚನೆಗಳು ಹುಟ್ಟುತ್ತವೆ. ಆ ಯೋಚನೆಗಳ ಗುಣ, ಶಕ್ತಿ, ಒತ್ತಡ, ದಿಕ್ಕುದೆಸೆಗಳನ್ನನುಸರಿಸಿ ನಮ್ಮ ಕಾರ್ಯವು ನಿರ್ಧರಿಸಲ್ಪಡುತ್ತದೆ. ಆಸೆಗಳೇ ಅಳಿದಾಗ ಯಾವ ಕರ್ಮದ ಅಗತ್ಯವೂ ಇರದು. ಆಸೆಗಳಿಲ್ಲದಿದ್ದರೆ ಯೋಚನೆಗಳೂ ಹುಟ್ಟವು. ಯೋಚನೆಗಳು ತುಂಬಿರುವಾಗ ಮನಸ್ಸಿನ ಪರದಾಟ. ಯೋಚನೆಗಳು ಇಲ್ಲವಾದರೆ ಮನಸ್ಸು ತಟಸ್ಥವಾಗಿರುವುದು. ಅದು ಮನೋನಾಶದ ಸ್ಥಿತಿ. ಆದ್ದರಿಂದ ಆಸೆಗಳು ನಿರ್ಮೂಲವಾದರೇ ಮನೋನಾಶ. ಶ್ರದ್ಧಾಭಕ್ತಿಗಳಿಂದ ಕೂಡಿದ ಬುದ್ಧಿವಂತರೂ ವಿವೇಕಿಗಳೂ ಎನಿಸಿಕೊಂಡ ಕರ್ಮಠರು ಮಹಾ ಶ್ರಮದಿಂದ ಅನುಸರಿಸುವ ವ್ಯರ್ಥವಾದ ವೈದಿಕ ಕರ್ಮಾಚರಣೆಗಳೆಲ್ಲವೂ ಅವರ ಕಾಮನೆಗಳಿಂದಲೇ ಪ್ರಚೋದಿಸಲ್ಪಟ್ಟವು. ಆದ್ದರಿಂದ ಶಾಂತಿಯನ್ನು ಅರಸುವವರು ಜಗತ್ತಿನ ಎಲ್ಲ ಮತಗಳಲ್ಲಿಯೂ ಹೇಳಿರುವಂತೆ ಪ್ರಾಪಂಚಿಕ ವಿಷಯಸುಖಗಳ ವಿಚಾರವಾಗಿ ಬಹಳ

ಜಾಗರೂಕತೆಯಿಂದಲೂ, ವಿವೇಕದಿಂದಲೂ ವರ್ತಿಸಬೇಕು. ಈ ಮುಂದಿನ ಮಂತ್ರದಲ್ಲಿ ಶ್ರುತಿಯೇ ಇದಕ್ಕೆ ತಕ್ಕ ಉಪಾಯವನ್ನೂ ಸೂಚಿಸಿದೆ.

**ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ**
**ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।**
**ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವಾ**
**ಇಮಂ ಲೋಕಂ ಹೀನತರಂ ವಾ ವಿಶಂತಿ ॥** ೧೦

**ಪ್ರಮೂಢಾಃ** – ಪ್ರಮತ್ತರಾದ ಮೂಢರು, **ಇಷ್ಟಾಪೂರ್ತಂ** – ಇಷ್ಟಾಪೂರ್ತಗಳನ್ನು,* **ವರಿಷ್ಠಂ** – ಶ್ರೇಷ್ಠವೆಂದು, **ಮನ್ಯಮಾನಾಃ** – ತಿಳಿದವರಾಗಿ, **ಅನ್ಯತ್** – ಬೇರೆ, **ಶ್ರೇಯಃ** – ಶ್ರೇಯಸ್ಸನ್ನು, **ನ ವೇದಯಂತೇ** – ತಿಳಿಯುವುದಿಲ್ಲ, **ತೇ** – ಅವರು, **ನಾಕಸ್ಯ** – ಸ್ವರ್ಗದ, **ಪೃಷ್ಠೇ** – ಮೇಲಿರುವ, **ಸುಕೃತೇ** – ಭೋಗಸ್ಥಾನದಲ್ಲಿ, **ಅನುಭೂತ್ವಾ** – ಕರ್ಮಫಲಗಳನ್ನು ಅನುಭವಿಸಿ, **ಇಮಂ ಲೋಕಂ** – ಈ ಲೋಕವನ್ನು, **ವಾ** – ಅಥವಾ, **ಹೀನತರಂ** – ಇದಕ್ಕಿಂತ ಕೀಳಾದ ಲೋಕವನ್ನು, **ವಿಶಂತಿ** – ಪ್ರವೇಶಿಸುತ್ತಾರೆ.

**(೧೦) ಪ್ರಮತ್ತರಾದ ಮೂಢರು ಇಷ್ಟ ಮತ್ತು ಪೂರ್ತಗಳನ್ನೇ ಅತ್ಯಂತ ಅತಿಶಯವಾದವುಗಳೆಂದು ಭಾವಿಸಿ, ಬೇರೆ ಶ್ರೇಯಃಸಾಧನೆಯನ್ನು ತಿಳಿಯದೆ, ಸ್ವರ್ಗದ ಮೇಲಿನ ಭೋಗಸ್ಥಾನದಲ್ಲಿ ಕರ್ಮಫಲವನ್ನು ಅನುಭವಿಸಿದ್ದಾದನಂತರ, ಈ ಲೋಕವನ್ನೋ ಅಥವಾ ಇದಕ್ಕಿಂತ ಕೀಳಾದ ಲೋಕವನ್ನೋ ಪ್ರವೇಶಿಸುತ್ತಾರೆ**

ಬಾಹ್ಯ ಪ್ರಪಂಚದಲ್ಲಿ ಹೊರನೋಟಕ್ಕೆ ಕಾಣುವಂತಹ ಕರ್ಮ ಮತ್ತು ತಟಸ್ಥವಾಗಿ ಶಾಂತ ರೀತಿಯಿಂದ ಮಾನಸಿಕವಾಗಿ ಮಾಡುವ ಚಿಂತನೆ – ಇವುಗಳೆರಡಕ್ಕೂ ಜಗತ್ತಿನಲ್ಲಿ ವಾದವಿವಾದಗಳು ಮೊದಲಿಂದಲೂ ಇದ್ದದ್ದೇ. ಕರ್ಮ ಮತ್ತು ಜ್ಞಾನ ಈ ಇತ್ತಂಡಗಳಲ್ಲಿ ಸೆಣಸಾಟ ಎಲ್ಲಾ ಕಾಲದಲ್ಲೂ ಕಂಡುಬರುವ ಬಗೆಹರಿಯದ ಸಮಸ್ಯೆಯೇ. ಹಿಂದೂಧರ್ಮವು ಒಡೆದು ಚೂರಾಗದೆ ಪ್ರತಿಷ್ಠಿತವಾಗಿರುವುದೂ ಬಲವತ್ತರವಾದ ಈ ವೈಶಿಷ್ಟ್ಯದಿಂದಲೇ. ಜಗತ್ತಿನ ಪ್ರಗತಿಯ ಚರಿತ್ರೆಯಲ್ಲಿಯೂ ಒಂದು ಕಾಲದಲ್ಲಿ ಕರ್ಮ, ಮತ್ತೊಂದು ಕಾಲದಲ್ಲಿ ಜ್ಞಾನ, ಪ್ರಾಧಾನ್ಯವನ್ನು ಪಡೆದು ಮೆರೆಯುತ್ತಿದ್ದ ವಿಚಾರ ಲಹರಿಗಳಾಗಿದ್ದವು. ಈಗಿನ ಕಾಲದಲ್ಲಿ ಕರ್ಮಕ್ಕೇ ಹೆಚ್ಚು ಪ್ರಾಶಸ್ತ್ಯ. ವೈರಾಗ್ಯ ಸನ್ಯಾಸಗಳಿಗೆ ಅಷ್ಟಾಗಿ ಮಾನ್ಯತೆ ಇಲ್ಲ.

ವಿದ್ಯಾವಂತರೆನಿಸಿಕೊಂಡಿರುವ ಈಗಿನ ಜನರಲ್ಲಿ ಆಧ್ಯಾತ್ಮ ಸಾಧನೆಗೆ ಹೆಚ್ಚು ಮೌಲ್ಯವಿಲ್ಲ. ಜೀವನದ ಜೀವಾಳವಾಗಿರುವ ಧ್ಯಾನ, ಉಪಾಸನೆ, ತಪಸ್ಸು ಇವುಗಳಿಗೆ ಅವರು ಅಷ್ಟು ಮಹತ್ವ ಕೊಡುವುದಿಲ್ಲ. ಅವರ ಹೃದಯವೆಲ್ಲ ಚಿನ್ನ, ಹಣ, ವ್ಯಾಪಾರ, ಬ್ಯಾಂಕು, ಚೆಕ್ ಪುಸ್ತಕಗಳಲ್ಲೇ ತಲ್ಲೀನವಾಗಿರುವುದರಿಂದ ಆ

* ಇಷ್ಟ ಎಂದರೆ ಯಜ್ಞ ಯಾಗಾದಿ ಶ್ರೌತಕರ್ಮಗಳು ಪೂರ್ತವೆಂದರೆ ಭಾವಿ, ಕೆರೆ, ಕಟ್ಟೆ ಮೊದಲಾದ ಉಪಕಾರಕವಾದ ಸ್ಮಾರ್ತಕರ್ಮಗಳು

ಐಶ್ವರ್ಯಗಳಿಗಾಗಿ ದುಡಿಯುವುದನ್ನು ಬಿಟ್ಟು ಆತ್ಮೋನ್ನತಿಯ ಸುಖಶಾಂತಿಗಳ ಕಡೆಗೆ ಅವರ ಗಮನ ಹರಿಯದು. ಆಸೆಗಳನ್ನು ತಣಿಸುವ ಕಾರ್ಯಗಳಲ್ಲಿ ತೊಡಗುವುದೇ ಜೀವನ ಸಾಫಲ್ಯಕ್ಕೆ ಸುಗಮ ಪಥ ಎಂಬ ತತ್ತ್ವ ಈಗಿನ ಕಾಲಕ್ಕೆ ಇದ್ದೇ ಇದೆ. ಆಗಲೂ ಹಾಗೆಯೇ ಇತ್ತು ಎಂಬುದಕ್ಕೆ ಶ್ರುತಿಯಲ್ಲಿ ಉಕ್ತವಾಗಿರುವ ಈ ಮಂತ್ರಗಳೇ ನಿದರ್ಶನ. ಆದರೂ ಉತ್ತಮ ಧ್ಯೇಯವನ್ನು ಸಾಧಿಸುವುದಕ್ಕೆ ಅಗತ್ಯವಾದ ಉಪಾಸನೆ, ಧ್ಯಾನ ಮುಂತಾದ ಜ್ಞಾನಮಾರ್ಗದ ಮಹತ್ವವನ್ನು ಋಷಿಗಳು ಅರಿತಿದ್ದರು. ಆದ್ದರಿಂದ ಕ್ಷುಲ್ಲಕ ಕಾಮನೆಗಳನ್ನು ತೃಪ್ತಿಪಡಿಸುವ ಉದ್ದೇಶದಿಂದ ಆಚರಿಸುವ ಕರ್ಮಗಳನ್ನು ಖಂಡಿಸುವುದು ಅಷ್ಟೇ ಪ್ರಾಚೀನವಾದ ವಿಚಾರಧಾರೆಯಾಗಿತ್ತೆಂಬುದೂ ಶ್ರುತಿವಚನಗಳಿಂದಲೇ ತಿಳಿದುಬರುತ್ತದೆ.

ಶ್ಲಾಘನೀಯವಾದ ಕಾರ್ಯಗಳನ್ನು ನಮ್ಮ ಪ್ರಾಚೀನ ಋಷಿವರ್ಯರು ಶಾಸ್ತ್ರಗ್ರಂಥಗಳನ್ನನುಸರಿಸಿ ಎರಡು ವರ್ಗಗಳಾಗಿ ವಿಂಗಡಿಸಿದ್ದಾರೆ – ಇಷ್ಟ ಮತ್ತು ಪೂರ್ತ. ಶ್ರುತಿಯಲ್ಲಿ ಹೇಳಿರುವ ಯಜ್ಞಯಾಗಾದಿ ಕಾರ್ಯಗಳನ್ನು 'ಇಷ್ಟ'ವೆಂದು ಕರೆದರು. ಇದೇ ಶ್ರೌತಕರ್ಮ. ಸ್ಮೃತಿಯಲ್ಲಿ ಹೇಳಿರುವಂತೆ ಬಾವಿ, ಕೆರೆ, ಕಟ್ಟೆ, ರಸ್ತೆ, ಧರ್ಮಶಾಲೆ ಮುಂತಾದುವುಗಳನ್ನು ನಿರ್ಮಿಸುವುದು, ಬಡಬಗ್ಗರಿಗೆ ಅನ್ನದಾನ, ವಿದ್ಯಾದಾನ ಮಾಡುವುದು 'ಪೂರ್ತ' ಎನಿಸಿಕೊಳ್ಳುತ್ತದೆ. ಇವು ಸ್ಮಾರ್ತಕರ್ಮಗಳು.

ಈ 'ಇಷ್ಟಾಪೂರ್ತ' ಕರ್ಮಗಳೇ ಅತ್ಯಂತ ಶ್ರೇಷ್ಠವಾದ ದೈವಿಕ ಕರ್ಮಗಳು, ಇವುಗಳಿಗಿಂತ ಹೆಚ್ಚಿನ ಪವಿತ್ರವಾದ ಕಾರ್ಯಗಳಿಲ್ಲ, ಎಂದು ಯಾರಾದರೂ ಭಾವಿಸಿದ್ದರೆ ಅಂತಹವರಿಗಿಂತ ಹೆಚ್ಚಿನ ದಡ್ಡರಿಲ್ಲ. ಏಕೆಂದರೆ, ಪ್ರಶಂಸನೀಯವಾದ ಇಷ್ಟಾಪೂರ್ತ ಕರ್ಮಗಳೆರಡರಿಂದಲೂ ಬರುವ ಫಲ – ಸ್ವರ್ಗವೆಂದು ಕರೆಸಿಕೊಳ್ಳುವ ಸುಖದಾಯಕ ಸೂಕ್ಷ್ಮ ಅನುಭವಕ್ಷೇತ್ರ. ಸ್ವರ್ಗ ಅಥವಾ ಅದಕ್ಕಿಂತ ಮೇಲಿನ ಲೋಕವನ್ನೇರಿದ ಪುಣ್ಯವಂತನು ತನ್ನ ಸತ್ಕರ್ಮದ ಫಲವನ್ನು ಅನುಭವಿಸಿ ತನ್ನ ಪುಣ್ಯ ಮುಗಿದ ಕೂಡಲೇ ಪುನಃ ಕಷ್ಟ, ಸಂಕಟ, ಹಿಂಸೆ, ನೋವುಗಳಿಂದ ತುಂಬಿದ ಮರ್ತ್ಯಲೋಕಕ್ಕೆ ಮರಳಿ ಬಂದು, ಸುಖ–ದುಃಖ, ಆಶೆ – ನಿರಾಶೆ, ಲಾಭ – ನಷ್ಟ, ಹುಟ್ಟು–ಸಾವುಗಳ ಅನುಭವಗಳಲ್ಲಿ ತೊಳಲಾಡಬೇಕಾಗುತ್ತದೆ. ಅಥವಾ ಅವನು ಈ ಲೋಕಕ್ಕಿಂತ ಹೀನವಾದ ಲೋಕಕ್ಕಾದರೂ ಬೀಳಬಹುದು.

ಈ ಮಂತ್ರದಲ್ಲಿ ಸ್ವರ್ಗ ಎನ್ನುವ ಪದಕ್ಕೆ ಪರ್ಯಾಯವಾಗಿ 'ನಾಕ' ಎಂಬ ಶಬ್ದವನ್ನು ಪ್ರಯೋಗಿಸಿದೆ. ಆ ಶಬ್ದದ ವ್ಯುತ್ಪತ್ತಿ ಹೀಗಿದೆ. 'ಕಾಮ' ಎಂದರೆ ಸಂಸ್ಕೃತದಲ್ಲಿ ಸುಖ ಎಂದರ್ಥ. 'ಅಕಾಮ' ಎಂದರೆ ದುಃಖ. ನ + ಅಕಾಮ (ನ ಅಕಾಮ, ನಾಕ) ಎಂದರೆ ದುಃಖರಹಿತ ಸ್ಥಿತಿ ಎಂದಾಗುತ್ತದೆ. ಸ್ವರ್ಗ ಎಂಬ ಶಬ್ದಕ್ಕೆ ಬದಲಾಗಿ 'ನಾಕ' ಎಂದು ಶ್ರುತಿಯಲ್ಲಿ ಹೇಳಿರುವುದು ಅರ್ಥಪೂರ್ಣವಾಗಿದೆ. ಸ್ವರ್ಗದಲ್ಲಿ ಮರ್ತ್ಯಲೋಕದ ನೋವು ಸಂಕಟಗಳಿರುವುದಿಲ್ಲವೆಂಬುದೇನೋ ನಿಜ. ಆದರೆ ಅಲ್ಲಿ ಸಿಗುವ ಸುಖವು ಸಾಪೇಕ್ಷಿಕವಾದುದು, ತಾರತಮ್ಯವುಳ್ಳದ್ದು. ಬ್ರಹ್ಮಾನುಭವದ ಆನಂದಕ್ಕೆ ಹೋಲಿಸಿದರೆ ಸ್ವರ್ಗಸುಖವು ಕೆಳಮಟ್ಟದ ದರ್ಜೆಯದು. ಉಪನಿಷತ್ತುಗಳು ನಿರ್ದೇಶಿಸುವುದು ಅತ್ಯುತ್ತಮವಾದ, ಅವಿನಾಶಿಯಾದ,

ಅಸಮಾನವಾದ ಅವ್ಯಯ ಆನಂದ; ಶಾಶ್ವತವಾದ ಪಾರಮಾರ್ಥಿಕ ನಿರಪೇಕ್ಷ ಸುಖ. ಉಳಿದ ಸ್ಥಿತಿಗಳೆಲ್ಲ ಶ್ರುತಿಯ ದೃಷ್ಟಿಯಲ್ಲಿ ಕೇವಲ ದುಃಖರಹಿತ ಅವಸ್ಥೆ. ಅದು ಅಭಾವ ಸ್ಥಿತಿಯೇ ಹೊರತು ಭಾವ ಪೂರ್ಣ ಅನುಭವವಲ್ಲ. ಅಲ್ಲದೆ, ಆ ಸ್ಥಿತಿಯೂ ಅಶಾಶ್ವತವಾದದ್ದೇ.

ಒಂದು ಸಲ ಮಾನವಜನ್ಮ ಬಂದ ಮೇಲೆ ಅವನು ಎಂತಹ ಹೀನ ಕಾರ್ಯ ಮಾಡಿದರೂ ಅದಕ್ಕಿಂತ ಕೀಳಾದ ಪಶು ಪ್ರಾಣಿ, ಕ್ರಿಮಿ ಕೀಟಗಳ ಜನ್ಮ ಬರಲಾರದೆಂದು ಕೆಲವು ಪಂಡಿತರೂ, ಗುರುಗಳೂ ಹೇಳುವವರಿದ್ದಾರೆ. ಆ ಅಭಿಪ್ರಾಯವನ್ನು ಈ ಮಂತ್ರದಲ್ಲಿ ಧ್ವಂಸ ಮಾಡಿದೆ. ಯಾವ ಮನುಷ್ಯನು ಸ್ವೇಚ್ಛೆಯಿಂದ ರಾಕ್ಷಸೀಕೃತ್ಯಗಳನ್ನು ಮಾಡಿ ಪಾಪವನ್ನು ಸಂಪಾದಿಸುವನೋ ಅಂತಹವನು ಸೃಷ್ಟಿಯ ವಿಕಾಸ ಸರಣಿಯಲ್ಲಿ ಅತ್ಯಂತ ಕೆಳಮಟ್ಟದ ಯಾವ ತಿರ್ಯಕ್ ಜಂತುವಾಗಿ ಬೇಕಾದರೂ ಹುಟ್ಟಬಹುದು.* ತನ್ನ ಪುಣ್ಯ ವಿಶೇಷವು ಮುಗಿದನಂತರ ಅವನು ಪುನಃ ಈ ಲೋಕಕ್ಕಾಗಲಿ ಅಥವಾ ಇನ್ನೂ ಹೀನವಾದ ಲೋಕಕ್ಕಾಗಲಿ ಹೋಗುವನು, ಎಂದು ಈ ಮಂತ್ರದಲ್ಲಿ ಹೇಳಿರುವ ಅರ್ಥವು ಅದೇ ಆಗಿದೆ.

## ಕರ್ಮಜ್ಞಾನ ಸಮುಚ್ಚಯ ಫಲ

**ತಪಃಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ**
**ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಃ ।**
**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ**
**ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥** ೧೧

**ಯೇ ಹಿ** – ಆದರೆ ಯಾರು, **ಭೈಕ್ಷಚರ್ಯಾಂ** – ಭಿಕ್ಷಾವೃತ್ತಿಯನ್ನು, **ಚರಂತಃ** – ಮಾಡಿಕೊಂಡು, **ಅರಣ್ಯೇ** – ಕಾಡಿನಲ್ಲಿ, **ತಪಃ ಶ್ರದ್ಧೇ** – ತಪಸ್ಸು ಮತ್ತು ಶ್ರದ್ಧೆಗಳನ್ನು; **ಉಪವಸಂತಿ** – ಆಚರಿಸುವರೋ, **ಶಾಂತಾಃ ವಿದ್ವಾಂಸಃ** – ಶಾಂತರಾದ ವಿದ್ವಾಂಸರೋ, **ತೇ** – ಅವರು, **ವಿರಜಾಃ** – ವಿರಕ್ತರಾಗಿ, (ಪುಣ್ಯಪಾಪಗಳನ್ನು ಕಳೆದುಕೊಂಡವರಾಗಿ), **ಸೂರ್ಯದ್ವಾರೇಣ** – ಉತ್ತರಾಯಣ ಮಾರ್ಗದಿಂದ, **ಯತ್ರ** – ಎಲ್ಲಿ, **ಅಮೃತಃ** – ಅಮೃತನೂ, **ಅವ್ಯಯಾತ್ಮಾ** – ನಾಶರಹಿತನೂ ಆದ ಪುರುಷನಿರುವನೋ (ಅಲ್ಲಿಗೆ), **ಪ್ರಯಾಂತಿ** – ಹೋಗುತ್ತಾರೆ.

(೧೧) ಆದರೆ ಯಾರು ಭಿಕ್ಷಾಟನೆ ಮಾಡಿಕೊಂಡು ಅರಣ್ಯದಲ್ಲಿ ತಪಸ್ಸು (ಆಶ್ರಮಕ್ಕೆ ವಿಹಿತವಾದ ಕರ್ಮ) ಮತ್ತು ಶ್ರದ್ಧೆ (ಹಿರಣ್ಯಗರ್ಭನೇ ಮೊದಲಾದವರ ವಿಷಯದ ವಿದ್ಯೆ)ಗಳನ್ನು ಆಚರಿಸುವರೋ, ಶಾಂತರಾದ ವಿದ್ವಾಂಸರೋ ಅವರು ವಿರಕ್ತರಾಗಿ (ಪುಣ್ಯ ಪಾಪ ಕರ್ಮಗಳನ್ನು ಕಳೆದುಕೊಂಡು)

---

*ಸ್ವಾಮೀಜಿಯವರು ಕಠೋಪನಿಷತ್ತಿನ ಎರಡನೆಯ ಅಧ್ಯಾಯ, ಎರಡನೆಯ ವಲ್ಲಿ, ಏಳನೆಯ ಮಂತ್ರಕ್ಕೆ ಕೊಟ್ಟಿರುವ ವ್ಯಾಖ್ಯಾನವನ್ನು ನೋಡಿ

ಸೂರ್ಯದ್ವಾರದ ಮೂಲಕ (ಉತ್ತರಾಯಣ ಮಾರ್ಗವಾಗಿ) ಅಮೃತನೂ ನಾಶರಹಿತನೂ ಆದ ಪುರುಷನೆಡೆಗೆ ಹೋಗುತ್ತಾರೆ.

ಇವು ಅಪರವಿದ್ಯೆಯಿಂದ ಪಡೆಯುವ ಸಂಸಾರಗತಿಗಳು. ಇದಾ ಹಿರಣ್ಯಗರ್ಭನ ಲೋಕದವರೆಗಿನ ಪ್ರಾಪ್ತಿಯೇ ಹೊರತು ಆತ್ಯಂತಿಕ ಮೋಕ್ಷವಲ್ಲ.

ಕರ್ಮಾನುಷ್ಠಾನಕ್ಕೆ ದಾಸರಾಗಿ ತೊಳಲಾಡುತ್ತಿರುವ ಕರ್ಮಮಾರ್ಗಿಗಳನ್ನೂ, ಧ್ಯಾನ ತಪಸ್ಸುಗಳಿಂದ ಕೂಡಿದ ಜ್ಞಾನಮಾರ್ಗ ಅನುಸರಿಸುವವರನ್ನೂ ತುಲನೆ ಮಾಡುತ್ತ ಸನ್ಯಾಸದ ಮಹಿಮೆಯನ್ನು ಈ ಮಂತ್ರದಲ್ಲಿ ಪ್ರಶಂಸಿಸಿದೆ. ಯಾವುದೋ ಕಾಮನೆಯ ಪೂರೈಕೆಗಾಗಿ ಮಾಡುವ ವೈದಿಕ ಕರ್ಮಗಳಿಂದ ಬರುವ ಸುಖ ಸಂತೋಷಗಳು ಅಲ್ಪಕಾಲಿಕವಾದವು. ಅವುಗಳನ್ನು ಅನುಭವಿಸಿದ ನಂತರ ಪುನಃ ಕಷ್ಟಕಾರ್ಪಣ್ಯಗಳ, ದುಃಖ ದಾರಿದ್ರ್ಯಗಳ ಇಹಲೋಕಕ್ಕೇ ಬರಬೇಕಾಗುತ್ತದೆ. ಆದರೆ ಸಕಲ ಕಾಮನೆಗಳನ್ನೂ ತ್ಯಜಿಸಿ ಅರಣ್ಯವನ್ನೋ, ನಿರ್ಜನವಾದ ಪ್ರದೇಶವನ್ನೋ ಸೇರಿ ಯದೃಚ್ಛಾಲಾಭದಿಂದ ಅಥವಾ ಭಿಕ್ಷಚರ್ಯೆಯಿಂದ ಜೀವಿಸುತ್ತ ಉಪಾಸನೆ, ತಪಸ್ಸುಗಳಿಂದ ಇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸನ್ನು ಏಕಾಗ್ರವಾಗಿ ಮಾಡಿ ಅದನ್ನು ಆತ್ಮಚಿಂತನೆಯಲ್ಲಿ ತೊಡಗಿಸುವವರಿಗೆ ಬರುವ ಫಲವು ಅತ್ಯಧಿಕವಾದದ್ದೆಂದು ಶ್ರುತಿಯು ಆಶ್ವಾಸನೆ ಕೊಡುತ್ತದೆ.

ಪುಣ್ಯ ಕರ್ಮಗಳನ್ನು ಮಾಡಿದವರು ಉತ್ಕ್ರಾಂತಿ ಸಮಯದಲ್ಲಿ ಅಂದರೆ ಪ್ರಾಣಗಳು ಸ್ಥೂಲ ಶರೀರವನ್ನು ಬಿಟ್ಟು ಹೋಗುವಾಗ ಸೂಕ್ಷ್ಮಶರೀರಗಳ ಮೂಲಕ ಮೇಲಿನ ಲೋಕಗಳಿಗೆ ಹೋಗುವರು. ಹಾಗೆ ಹೋಗುವಾಗ ಎರಡು ವಿಧವಾದ ಮಾರ್ಗಗಳಿವೆ: (i) ಚಂದ್ರಪಥ (ii) ಸೂರ್ಯಪಥ. ಚಂದ್ರದ್ವಾರದ ಮೂಲಕ ಹೋಗುವುದನ್ನು ದಕ್ಷಿಣಾಯನವೆಂದೂ, ಸೂರ್ಯದ್ವಾರದ ಮೂಲಕ ಹೋಗುವುದನ್ನು ಉತ್ತರಾಯಣವೆಂದೂ ಕರೆಯುತ್ತಾರೆ.

(೧) ವೇದಾಂತದ ಪ್ರಮೇಯಗಳ ಪ್ರಕಾರ ಕೇವಲ ಕರ್ಮಾಚರಣೆಯಲ್ಲೇ ತೊಡಗಿದ್ದವರು ಮರಣಾನಂತರ ದಕ್ಷಿಣಾಯನ ಮಾರ್ಗವಾಗಿ ಪಿತೃಲೋಕಗಳನ್ನು ಸೇರುವರು. ಅಲ್ಲಿ ಅವರವರ ಪುಣ್ಯಕರ್ಮಾನುಸಾರ ಭೋಗಗಳನ್ನು ಅನುಭವಿಸಿ, ಅವರ ಪುಣ್ಯವು ಮುಗಿದ ಮೇಲೆ ಪುನಃ ಕೆಳಗಿನ ಲೋಕಗಳಿಗೆ ಬಂದು ಸೇರುತ್ತಾರೆ.

(೨) ಯಜ್ಞ ಯಾಗಾದಿಗಳ ಜೊತೆಗೆ ಉಪಾಸನೆ, ತಪಸ್ಸು, ಆತ್ಮಚಿಂತನೆಗಳ ಅಭ್ಯಾಸವನ್ನೂ ಮಾಡಿದವರು ಮರಣಾನಂತರ ಸೂರ್ಯನೆಂಬ ಉಪಲಕ್ಷಣವುಳ್ಳ ಉತ್ತರಾಯಣ ಮಾರ್ಗವಾಗಿ ಸೃಷ್ಟಿಕರ್ತನಾದ ಹಿರಣ್ಯಗರ್ಭನ ಲೋಕವನ್ನು ಪ್ರವೇಶಿಸುವರು. ಅಲ್ಲಿ ಅನಂತ ಭೋಗಗಳನ್ನು ಅನುಭವಿಸಿ ಬ್ರಹ್ಮವಿದ್ಯೆಯ ಮೊದಲ ಗುರುವಾದ ಬ್ರಹ್ಮನಿಂದ ಉಪದೇಶ ಪಡೆದು ಕಲ್ಪಾಂತದ ಪ್ರಳಯ ಕಾಲದಲ್ಲಿ ಬ್ರಹ್ಮದೇವನೊಡನೆ ಪರಮಾತ್ಮನಲ್ಲಿ ಲೀನವಾಗುತ್ತಾರೆ. ಇದನ್ನು ಕ್ರಮಮುಕ್ತಿ ಎನ್ನುತ್ತಾರೆ.

ಇದು ಜ್ಞಾನಕರ್ಮ ಸಮುಚ್ಚಯದಿಂದ ಪ್ರಾಪ್ತವಾಗುವ ಮಾರ್ಗ. ಇದನ್ನು

'ದೇವಯಾನ', 'ಅರ್ಚಿರಾದಿ ಮಾರ್ಗ' ಎಂದು ಕರೆಯುತ್ತಾರೆ. ಇವುಗಳಿಂದ ಬರುವ ಫಲವೂ ಪರಮಾರ್ಥ ಮೋಕ್ಷವಲ್ಲ.

ಆದರೆ ಕೇವಲ ಜ್ಞಾನಮಾರ್ಗವನ್ನೇ ಅನುಸರಿಸಿ ಸಾಕ್ಷಾತ್ಕಾರ ಪಡೆದ ಜ್ಞಾನಿಗಳಿಗೆ ನೇರವಾದ ಮುಕ್ತಿ ತಕ್ಷಣವೇ ದೊರಕುವುದು. ಇದನ್ನು 'ಕೈವಲ್ಯಮುಕ್ತಿ' ಅಥವಾ 'ಸದ್ಯೋಮುಕ್ತಿ' ಎನ್ನುತ್ತಾರೆ. ಅಂತಹವರು ಮುಕ್ತಿಗಾಗಿ ಕಾಯಬೇಕಾದ್ದಿಲ್ಲ. ಬುದ್ಧ, ಶಂಕರ, ರಾಮಕೃಷ್ಣ ಪರಮಹಂಸ, ರಮಣ, ಅರಬಿಂದೊ ಮುಂತಾದವರೆಲ್ಲ ಈ ರೀತಿಯ ಮುಕ್ತಿ ಪಡೆದವರೇ !

## ಪರವಿದ್ಯಾಪ್ರಾಪ್ತಿಗಾಗಿ ಗುರುವಿನ ಬಳಿ ಸಾರಬೇಕು.

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ**
**ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ।**
**ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್**
**ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥** ೧೨

**ಬ್ರಾಹ್ಮಣಃ** – ಬ್ರಹ್ಮಜಿಜ್ಞಾಸುವು, **ಕರ್ಮಚಿತಾನ್** – ಕರ್ಮಗಳಿಂದ ಉಂಟಾಗಿರುವ, **ಲೋಕಾನ್** – ಲೋಕಗಳನ್ನು, **ಪರೀಕ್ಷ್ಯ** – ಪರೀಕ್ಷಿಸಿ, **ಅಕೃತಃ** – ಅಕೃತವಾದದ್ದು (ಶಾಶ್ವತವಾದದ್ದು), **ಕೃತೇನ** – ಅನಿತ್ಯವಾದ ಕರ್ಮದಿಂದ, **ನಾಸ್ತಿ** – ಆಗುವುದಿಲ್ಲ, **ಇತಿ** – ಹೀಗೆಂದು, **ನಿರ್ವೇದಂ** – ವೈರಾಗ್ಯವನ್ನು, **ಆಯಾತ್** – ಹೊಂದಬೇಕು, **ಸಃ** – ಅಂತಹವನು, **ತದ್ವಿಜ್ಞಾನಾರ್ಥಂ** – ಅದನ್ನು ತಿಳಿಯಲು, **ಸಮಿತ್ಪಾಣಿಃ** – ಸಮಿತ್ತುಗಳ ಕಂತೆ ಕೈಯಲ್ಲಿ ಹಿಡಿದು, **ಶ್ರೋತ್ರಿಯಂ** – ಶ್ರೋತ್ರಿಯನಾದ, **ಬ್ರಹ್ಮನಿಷ್ಠಂ** – ಬ್ರಹ್ಮನಿಷ್ಠನಾದ, **ಗುರುಮೇವ** – ಗುರುವಿನ ಬಳಿಗೇ, **ಅಭಿಗಚ್ಛೇತ್** – ಹೋಗಬೇಕು.

(೧೨) ಬ್ರಹ್ಮಜಿಜ್ಞಾಸುವು ಕರ್ಮಗಳನ್ನು ಮಾಡುವುದರಿಂದ ಉಂಟಾಗುವ ಲೋಕಗಳನ್ನು ಪರೀಕ್ಷೆ ಮಾಡಿ, "ಶಾಶ್ವತವಾದ ಗತಿಯು ಅನಿತ್ಯವಾದ ಕರ್ಮದಿಂದ ಆಗುವುದಿಲ್ಲ" ಎಂದು ತಿಳಿದು ವೈರಾಗ್ಯವನ್ನು ಹೊಂದಬೇಕು. ಅಂತಹವನು ನಿತ್ಯವಸ್ತುವಾದ ಬ್ರಹ್ಮವನ್ನು ತಿಳಿಯಲು ಸಮಿತ್ತುಗಳನ್ನು ಕೈಯಲ್ಲಿ ಹಿಡಿದುಕೊಂಡು ಶ್ರೋತ್ರಿಯನೂ (ಅಧ್ಯಯನ ಶ್ರುತಾರ್ಥ ಸಂಪನ್ನನೂ), ಬ್ರಹ್ಮನಿಷ್ಠನೂ (ಬ್ರಹ್ಮದಲ್ಲೇ ನಿಷ್ಠೆಯನ್ನು ಹೊಂದಿರುವವನೂ) ಆದ ಗುರುವಿನ ಬಳಿಗೇ ಹೋಗಬೇಕು.

ಶಾಸ್ತ್ರಜ್ಞನಾದರೂ ಸ್ವತಂತ್ರವಾಗಿ ಗುರುವಿನ ಮಾರ್ಗದರ್ಶನವಿಲ್ಲದೆ ಬ್ರಹ್ಮಜ್ಞಾನವನ್ನು ಅನ್ವೇಷಿಸಕೂಡದು, ಎಂದು ಭಾವ.

ಯಜ್ಞ ಯಾಗಾದಿ ಕರ್ಮಗಳು ಪರಮಾರ್ಥವನ್ನು ದೊರಕಿಸಿ ಕೊಡಲಾರವು ಎಂದ ಮೇಲೆ, ಸಾಧಕನು ಮತ್ತೇನು ಮಾಡಬೇಕು ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಕರ್ಮಗಳನ್ನು ಮಾಡಿ ಮುಗಿಸಿದ ನಂತರ ಸಾಧಕನು ಏನು ಮಾಡಬೇಕೆಂಬುದನ್ನು ಈ ಮಂತ್ರದಲ್ಲಿ ಹೇಳಿದೆ.

**ಬ್ರಾಹ್ಮಣಃ –**

ಅತ್ಯಂತ ಪವಿತ್ರವಾದ ಅರ್ಥವುಳ್ಳ ಈ ಪದವನ್ನು ದುರುಪಯೋಗದಿಂದ ಅಪಭ್ರಂಶ ಮಾಡಿರುವುದು ನಮ್ಮ ದುರಂತ. ಈಗಿನ ಕಾಲಕ್ಕೆ 'ಬ್ರಾಹ್ಮಣ' ಎಂದರೆ ಯಾವನಾದರೊಬ್ಬ ಬ್ರಾಹ್ಮಣನ ಮಗ ಎಂಬರ್ಥ ಬರುತ್ತದೆ. ಸ್ವಲ್ಪಮಟ್ಟಿಗೆ ಈ ಅರ್ಥವು ಶ್ರೀಶಂಕರರ ಕಾಲದಲ್ಲಿ ಕೂಡ ರೂಢಿಯಲ್ಲಿದ್ದರೂ ಆಗ ಆಚಾರದಲ್ಲಿದ್ದ ಸನಾತನ ಧರ್ಮದ ಸಂಪ್ರದಾಯಬದ್ಧ ಜೀವನಕ್ರಮಕ್ಕೆ ಆ ಅರ್ಥ ಹೊಂದಿಕೊಳ್ಳುತ್ತಿತ್ತು. ಆದರೆ ಈಗಿನ ಕಾಲದ ನಮ್ಮ ಆಚಾರ ವ್ಯವಹಾರಗಳು ಆಗ ಇದ್ದ ಪರಿಶುದ್ಧ ಬಾಳಿನ ಉತ್ಕೃಷ್ಟ ಮೌಲ್ಯವನ್ನು ಕಳೆದುಕೊಂಡಿವೆ. ನಮ್ಮ ಸಂಸ್ಕೃತಿಯ ಮಟ್ಟ ಬಹಳ ಮಟ್ಟಿಗೆ ಹದಗೆಟ್ಟಿರುವುದರಿಂದ ಶ್ರುತಿಯಲ್ಲಿ ಹೇಳಿರುವ 'ಬ್ರಾಹ್ಮಣ' ಎಂಬ ಪದಕ್ಕೆ ಹೇಳಿರುವ ಅರ್ಥ ಈಗಿನ ಕಾಲಕ್ಕೆ ಅನ್ವಯಿಸದು.

ಯಥಾರ್ಥವಾದ ಬ್ರಾಹ್ಮಣನಿಗೆ ಇರಬೇಕಾದ ಲಕ್ಷಣಗಳು ಭೌತಿಕವಲ್ಲ, ಶುದ್ಧ ಮಾನಸಿಕ ಮತ್ತು ಬೌದ್ಧಿಕ. ನಿರ್ಮಲವಾದ ಮನಸ್ಸು, ತರ್ಕಬದ್ಧ ಚಿಂತನೆ, ನಿಷ್ಕಪಟವಾದ ಉದ್ದೇಶ – ಎಲ್ಲಕ್ಕಿಂತ ಹೆಚ್ಚಾಗಿ ಆತ್ಮೋದ್ಧಾರದ ತವಕ ಇವೇ ಮುಂತಾದ ಗುಣಗಳು ಅವನ ಅಸ್ತಿತ್ವದ ಅಡಿಗಲ್ಲು. ಅವನು ಎಲ್ಲೇ ಇರಲಿ, ಏನೇ ಮಾಡುತ್ತಿರಲಿ ಅವನ ರೀತಿನೀತಿಗಳು ಬದಲಾಗವು. ಒಟ್ಟಿನಲ್ಲಿ ಸರ್ವಕಾಲದಲ್ಲಿಯೂ ಆತ್ಮೋನ್ನತಿಯನ್ನು ಗುರಿಯಾಗಿಟ್ಟುಕೊಂಡು, ಉತ್ತಮ ಜೀವನಕ್ಕಾಗಿ ಶ್ರಮಿಸುತ್ತಿರುವ ಸುಸಂಸ್ಕೃತನಾದ ಜೀವಿಯನ್ನು 'ಬ್ರಾಹ್ಮಣ' ಎನ್ನಬಹುದು.

ಅಂತಹ ಬ್ರಾಹ್ಮಣನಿಗೆ ಶ್ರುತಿಯು ಇಲ್ಲಿ ವಿವೇಕ ಕೊಡುತ್ತಿದೆ. ಕರ್ಮವಿಧಿಗಳಿಂದ ಶ್ರುತಿವಿಹಿತ ಕರ್ಮಾನುಷ್ಠಾನದಿಂದ ಬರಬಹುದಾದ ಫಲಗಳನ್ನೆಲ್ಲಾ ಜಾಗರೂಕತೆಯಿಂದ ಪರೀಕ್ಷಿಸಿ ಸರಿಯಾದ ನಿರ್ಧಾರಕ್ಕೆ ಬರುವಂತೆ ಎಚ್ಚರಿಸುತ್ತದೆ. ಯಾವುದಾದರೂ 'ಅಕೃತವಾದ' ಅಂದರೆ ಕರ್ಮದಿಂದ ಸಿದ್ಧವಾಗದ ಅರ್ಥಾತ್ ಸ್ವತಃಸಿದ್ಧವಾದ ವಸ್ತುವನ್ನು ಕರ್ಮದಿಂದ ಮಾಡಲು ಸಾಧ್ಯವಿಲ್ಲವೆಂಬುದನ್ನು ಮನಗಂಡು ವೈರಾಗ್ಯ ಹೊಂದಬೇಕು, ಎಂದು ಬೋಧಿಸುತ್ತದೆ.

ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ಮೋಕ್ಷವು ಯಾವ ಕರ್ಮದಿಂದಲೂ ಸಿದ್ಧವಾದುದಲ್ಲ, ಏಕೆಂದರೆ ಕರ್ಮದಿಂದ ಮಾಡಲ್ಪಟ್ಟವುಗಳೆಲ್ಲಾ ಅನಿತ್ಯ, ಅಶಾಶ್ವತ. ಕುಂಬಾರನ ಕರ್ಮದಿಂದ ತಯಾರಾಗುವ ಮಡಕೆಯಂತೆ ಮೋಕ್ಷವೂ ಕರ್ಮಗಳಿಂದ ಉತ್ಪಾದ್ಯವಾಗುವುದಿದ್ದರೆ, ಅದೂ ಮಡಕೆಯಂತೆ ವಿನಾಶಿಯಾಗಬೇಕಾಗುತ್ತದೆ. ಆದ್ದರಿಂದ ಶಾಶ್ವತವಾದುದಕ್ಕೆ ಎಂದಿಗೂ ಹುಟ್ಟು ಎಂಬುದಿರುವುದಿಲ್ಲ. ಹುಟ್ಟಿರುವ ವಸ್ತುಗಳೆಲ್ಲಾ ಸಾವಿಗೆ ಅಂದರೆ ವಿನಾಶಕ್ಕೆ ಒಳಪಡಲೇಬೇಕು. ಲೋಕದಲ್ಲಿ ಕರ್ಮದಿಂದ ಆಗುವ ವಸ್ತುಗಳೆಲ್ಲಾ ಅನಿತ್ಯವೇ. ಇದನ್ನು ವಿವೇಚಿಸಿದಾಗ ಕರ್ಮದಿಂದ ಲಭಿಸುವ ಅಲ್ಪಕಾಲದ ಈ ಫಲಕ್ಕಾಗಿ ಅಷ್ಟು ಶ್ರಮಿಸುವುದು ಸಾರ್ಥಕವಲ್ಲವೆಂದು ಸಾಧಕರ ಸೂಕ್ಷ್ಮಬುದ್ಧಿಗೆ ತೋರುವುದು. ಹೀಗೆ

ಅವುಗಳಲ್ಲಿ ಅವರಿಗೆ ಅನಾಸಕ್ತಿಹುಟ್ಟಿ, ಅದಕ್ಕಿಂತ ಉತ್ಕೃಷ್ಟವಾದ, ಶಾಶ್ವತದ ಫಲಪ್ರಾಪ್ತಿಯನ್ನು ಬಯಸುವರು. 'ಯಾವ ಒಂದು ಜ್ಞಾನವನ್ನು ಪಡೆದರೆ ಎಲ್ಲವೂ ಅರಿತಂತೆ ಆಗುವುದೋ' ಅಂತಹ ತಿಳಿವಿಗಾಗಿ ಸಾಧಕರು ಉತ್ಸುಕರಾಗುವರು. ಅಂತಹದರಲ್ಲಿ ಆಸಕ್ತಿ ವಹಿಸುವರು.

ಆ ರೀತಿಯ ಜ್ಞಾನವನ್ನು ಅಂದರೆ ಆತ್ಮಜ್ಞಾನವನ್ನು ಪಡೆಯಲು ಬ್ರಾಹ್ಮಣನು ಗುರುವಿನ ಬಳಿಗೆ ಹೋಗಬೇಕೆಂದು ಶ್ರುತಿಯು ಅಪ್ಪಣೆಕೊಡಿಸುತ್ತದೆ. ಈ ಮಂತ್ರದಲ್ಲಿ, ಪರಿಪೂರ್ಣವಾದ ಗುರುವಿನ ಲಕ್ಷಣಗಳನ್ನು ಸ್ಪಷ್ಟಪಡಿಸಿದೆ. ಶ್ರೇಷ್ಠ ಗುರುವಿನ ಲಕ್ಷಣಗಳನ್ನು ಇಲ್ಲಿ ವಿವರಿಸಿರುವಂತೆ ಬೇರೆ ಯಾವ ಶ್ರುತಿಯಲ್ಲೂ ಹೇಳಿಲ್ಲ. ಶ್ರೇಷ್ಠಗುರುವಿಗೆ ಇರಬೇಕಾದವು ಎರಡು ಮುಖ್ಯ ಅರ್ಹತೆಗಳು: (೧) ಶಾಸ್ತ್ರವಾಙ್ಮಯದಲ್ಲಿ ಸಂಪೂರ್ಣ ಪಾಂಡಿತ್ಯ (೨) ಸ್ವತಃ ಸಾಧಿಸಿಕೊಂಡಿರುವ ಬ್ರಹ್ಮಾನುಭವ.

ಹಾಗೆಂದರೆ, ಬ್ರಹ್ಮಸಾಕ್ಷಾತ್ಕಾರ ಪಡೆಯಲು ಪೂರ್ವಭಾವಿಯಾಗಿ ಶಾಸ್ತ್ರಗಳಲ್ಲಿ ಪಾಂಡಿತ್ಯ, ಪರಿಣತಿ ಬೇಕೇಬೇಕು ಎಂದಲ್ಲ. ಜಗದ್ಗುರು ಎಂದೆನಿಸಿಕೊಳ್ಳಬೇಕಾದರೆ ಮಾತ್ರ ಶಾಸ್ತ್ರಗಳಲ್ಲಿ ಪಾಂಡಿತ್ಯ, ಪ್ರಭುತ್ವ ಅಗತ್ಯವೇ ಹೌದು. ಆದರೆ ಬ್ರಹ್ಮಾನುಭವಕ್ಕೆ ಅದರ ಅಗತ್ಯ ಅನಿವಾರ್ಯವಲ್ಲ. ನಮ್ಮ ಈ ಪವಿತ್ರ ದೇಶದಲ್ಲಿ ಮಹಾತ್ಮರಾದ ಬ್ರಹ್ಮಜ್ಞಾನಿಗಳೆಷ್ಟೋ ಮಂದಿ ಇದ್ದಾರೆ. ಅವರೆಲ್ಲರೂ ಸಾಂಪ್ರದಾಯಕವಾಗಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದವರಲ್ಲ. ಅನಿರ್ವಚನೀಯವಾದ ಅನುಭವವನ್ನು ಅವರು ವಿವರಿಸುವುದಕ್ಕೂ ಯತ್ನಿಸುವುದಿಲ್ಲ. ಇದ್ದುದ್ದರಲ್ಲಿ ಶ್ರುತಿಯೇ ಆ ಅದ್ಭುತ ಅನುಭವವನ್ನು ತಕ್ಕಮಟ್ಟಿಗೆ ನಮಗೆ ಪರಿಚಯಮಾಡಿಕೊಟ್ಟಿರುವುದು.

ಇದಕ್ಕೆ ವ್ಯತಿರಿಕ್ತವಾಗಿ ವೇದಗಳಲ್ಲಿ ಅತಿಶಯವಾದ ನೈಪುಣ್ಯವನ್ನೂ ಪಾಂಡಿತ್ಯವನ್ನೂ ಗಳಿಸಿರುವ ನೂರಾರು ಮಂದಿ ವಿದ್ವಾಂಸರಿದ್ದಾರೆ. ಅವರು ವೇದೋಪನಿಷತ್ತುಗಳ ಹೇಳಿಕೆಗಳ ವಾಕ್ಯಾರ್ಥ ಮಾಡಬಲ್ಲರು; ಪ್ರತಿಭಾನ್ವಿತ ಪ್ರವಚನ ನೀಡಬಲ್ಲರು. ಆದರೆ ಅವರು ಆಧ್ಯಾತ್ಮಿಕ ಪ್ರಪಂಚದಲ್ಲಿ ಗುರುಗಳಾಗಿ, ನೇತಾರರಾಗಿ ಜನಾಂಗಕ್ಕೆ ಸೇವೆ ಸಲ್ಲಿಸಲಾರರು; ಜನಸಾಮಾನ್ಯರ ಜೀವನಕ್ಕೆ ಬೆಳಕನ್ನು ಕೊಡಲಾರರು. ಆತ್ಮೋನ್ನತಿಯ ಮಾರ್ಗದರ್ಶಕರೂ ಆಗಲಾರರು. ಈ ಪಂಡಿತರು ಶ್ರುತಿಯ ಅಧ್ಯಾಪನದಲ್ಲಿ ಪರಿಣತರು. ಆದರೆ ಉಪನಿಷತ್ತಿನ ಸಂಸ್ಕೃತಿಗೆ ಹೊಸಬರು.

ಆದ್ದರಿಂದ ನಿಜವಾದ ಗುರುವೆನಿಸಿದವನು ಉಪನಿಷತ್ತು ಮತ್ತು ಮತಧರ್ಮಗಳ ತತ್ತ್ವಜ್ಞಾನದಲ್ಲಿ ಸಿಷ್ಣಾತನಾಗಿರುವುದಲ್ಲದೆ, ಶ್ರುತಿಯಲ್ಲಿ ನಿರ್ದೇಶಿತವಾಗಿರುವಂತೆ ಆತ್ಮಪ್ರಜ್ಞೆಯ ಅನುಭವಿಯೂ ಆಗಿರಬೇಕು. ಅವನು ಬ್ರಹ್ಮನಲ್ಲಿಯೇ ಸ್ಥಿರವಾಗಿ ನೆಲೆಸಿದ ಮನಸ್ಸುಳ್ಳವನಾಗಿ ಅನುಭವ ಜ್ಞಾನಿಯಾಗಿರಬೇಕು. ಅಂತಹ ಗುರುಮಾತ್ರವೇ ಶ್ರುತಿಯಲ್ಲಿ ಹೇಳಿರುವಂತೆ ಆತ್ಮವಿದ್ಯೆಯನ್ನು ಬೋಧಿಸಬಲ್ಲ. ಅವನು ಸಾಧಕರಲ್ಲಿ ಉತ್ಸಾಹವನ್ನು ತುಂಬಿ, ಕಷ್ಟಪರಂಪರೆಗಳ ಸಮುದ್ರವನ್ನು ದಾಟಿಸಿ, ಸವಾಲುಗಳ ಪ್ರವಾಹವನ್ನು ಎದುರಿಸಿ ಅವರ ಜೀವನದ ಗುರಿ ಮುಟ್ಟಿಸಬಲ್ಲ.

**ಸಮಿತ್ಪಾಣಿಃ –**

ಯೋಗ್ಯನಾದ ಶಿಷ್ಯನು ತನ್ನ ಗುರುವನ್ನು ಹೇಗೆ ಸಮೀಪಿಸಬೇಕೆಂದು ಇಲ್ಲಿ ಹೇಳಿದೆ. ಹಿಂದಿನ ಕಾಲದಲ್ಲಿ ಶಿಷ್ಯನು ತನ್ನ ಗುರುವಿನ ಸಾನ್ನಿಧ್ಯವನ್ನು ಸೇರುವಾಗ ಯಜ್ಞಾಗ್ನಿಗೆ ಸಮರ್ಪಿಸಲು ಸಮಿತ್ತುಗಳ ಕಟ್ಟನ್ನು ತೆಗೆದುಕೊಂಡು ಹೋಗುವ ಪದ್ಧತಿ ಇತ್ತು. ಇದು ವಿದ್ಯೆ ಕಲಿಸುವ ಗುರುವಿಗೆ ತನ್ನ ಸರ್ವ ಸಮರ್ಪಣೆಯ ಭಾವದ ಸಂಕೇತವಾಗಿತ್ತು. ಈ ಸಂಕೇತಕ್ಕೆ ಇನ್ನೊಂದು ವಿವರಣೆ ಕೊಟ್ಟಿರುವುದೂ ಕಂಡುಬಂದಿದೆ. ತನ್ನ ದುಷ್ಟ ಸ್ವಭಾವಗಳನ್ನೂ, ಪಾಶವೀವೃತ್ತಿಗಳನ್ನೂ, ಅಹಂಕಾರದ ಡಂಭಾಚಾರಗಳನ್ನೂ, ಲೌಕಿಕ ಮೋಹಗಳನ್ನೂ ಸುಟ್ಟುಹಾಕಿರುವ ಸಂಕೇತವಾಗಿ ಸಮಿತ್ತುಗಳ ಕಟ್ಟನ್ನು ಗುರುವಿನ ಚರಣಗಳಲ್ಲಿ ಶಿಷ್ಯನು ಅರ್ಪಿಸುವನೆಂಬ ಅರ್ಥ.

ಅದೇನಾದರೂ ಇರಲಿ, ಹಿಂದಿನ ಕಾಲದಲ್ಲಿ ಗುರುವನ್ನು ಸಮೀಪಿಸಿ ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸುವಂತೆ ಪ್ರಾರ್ಥಿಸಲು ಸರ್ವಸಮರ್ಪಣ ಭಾವದಿಂದ, ಅತ್ಯಂತ ವಿನೀತನಾಗಿ, ಶುಶ್ರೂಷಾವೃತ್ತಿಯನ್ನು ಅನುಸರಿಸಲು ಸಿದ್ಧವಾಗಿರುವ ಇಂಗಿತವನ್ನು ಆ ರೀತಿ ಸೂಚಿಸುವ ಕ್ರಮವಿತ್ತು. ಈಗಿನ ಕಾಲದಲ್ಲಾದರೋ ಪತ್ರ, ತಾರು ಇಲ್ಲವೆ ದೂರವಾಣಿಗಳ ಮೂಲಕ ಸಂಪರ್ಕ ನಡೆಸಬಹುದು. ಹಿಂದಿನ ಕಾಲದ ಪದ್ಧತಿ ಈಗ ಅನುಸರಿಸುವುದಾದರೆ ನಮಗೆ ಸಿಗುವ ಫಲವೇನೆಂದು ತಿಳಿದೇ ಇದೆ !

## ಶಿಷ್ಯನಿಗೆ ಗುರುವಿನ ಉಪದೇಶ ಪ್ರದಾನ

**ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್**
**ಪ್ರಶಾಂತಚಿತ್ತಾಯ ಶಮಾನ್ವಿತಾಯ**
**ಯೇನಾಕ್ಷರಂ ಪುರುಷಂ ವೇದ ಸತ್ಯಂ**
**ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥** ೧೩

**ಸಃ ವಿದ್ವಾನ್** – ಆ ಬ್ರಹ್ಮಜ್ಞಾನಿಯಾದ ಗುರುವು, **ಸಮ್ಯಕ್** – ವಿಧಿವತ್ತಾಗಿ, **ಉಪಸನ್ನಾಯ** – ಹತ್ತಿರ ಬಂದಿರುವ, **ಪ್ರಶಾಂತ ಚಿತ್ತಾಯ** – ಪ್ರಶಾಂತವಾದ ಮನಸ್ಸುಳ್ಳ, **ಶಮಾನ್ವಿತಾಯ** – ಇಂದ್ರಿಯ ನಿಗ್ರಹದಿಂದ ಕೂಡಿರುವ, **ತಸ್ಮೈ** – ಅವನಿಗೆ, **ಯೇನ** – ಯಾವುದರಿಂದ, **ಸತ್ಯಂ** – ಪರಮಾರ್ಥ ಸ್ವರೂಪವುಳ್ಳ, **ಅಕ್ಷರಂ** – ನಾಶರಹಿತನಾದ, **ಪುರುಷಂ** – ಪುರುಷನನ್ನು, **ವೇದ** – ತಿಳಿಯುವನೋ, **ತಾಂ** – ಅದನ್ನು (ಬ್ರಹ್ಮವಿದ್ಯೆಯನ್ನು), **ತತ್ತ್ವತಃ** – ಯಥಾರ್ಥವಾಗಿ, **ಪ್ರೋವಾಚ** – ಉಪದೇಶಿಸಬೇಕು.

(೧೩.) ಹೀಗೆ ವಿಧಿವತ್ತಾಗಿ ಬಳಿ ಸಾರಿರುವ ಪ್ರಶಾಂತ ಮನಸ್ಸುಳ್ಳ, ಬಾಹ್ಯೇಂದ್ರಿಯಗಳ ನಿಗ್ರಹದಿಂದ ಕೂಡಿರುವ ಆ ಜಿಜ್ಞಾಸುವಿಗೆ ಯಾವುದರಿಂದ ಪರಮಾರ್ಥ ಸ್ವರೂಪವುಳ್ಳ ಅಕ್ಷಯನಾದ ಪುರುಷನನ್ನು ತಿಳಿಯುವನೋ, ಆ ಬ್ರಹ್ಮವಿದ್ಯೆಯನ್ನು ಗುರುವು ವಿಧಿವತ್ತಾಗಿ ಉಪದೇಶಿಸಬೇಕು.

ಶ್ರುತಿಯು ಈ ಮಂತ್ರದಲ್ಲಿ ಆಚಾರ್ಯಸಮೂಹಕ್ಕೆ ಆದೇಶ ನೀಡುತ್ತಿದೆ. ಇದಕ್ಕೆ ಮೊದಲು, ಅನೇಕ ವರ್ಷಗಳು ವೈದಿಕ ಕರ್ಮನಿಷ್ಠನಾಗಿ ಶ್ರದ್ಧಾಸಕ್ತಿಗಳಿಂದ, ಯಜ್ಞಯಾಗಾದಿಗಳನ್ನು ಮಾಡಿ, ಕೊನೆಗೆ ಅದಕ್ಕೆ ಸಿಕ್ಕುವ ಫಲ ಅನಿತ್ಯವೂ, ಅಪೂರ್ಣವೂ, ಅಲ್ಪಾನಂದದ ಬ್ರಹ್ಮಲೋಕವೇ ಹೊರತು ಶಾಶ್ವತದ ಅತಿಶಯಾನಂದದ ಮೋಕ್ಷವಲ್ಲವೆಂದರಿತು ಬ್ರಾಹ್ಮಣನು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನ ಬಳಿಗೆ ಸಮಿತ್ಪಾಣಿಯಾಗಿ ಬ್ರಹ್ಮಜ್ಞಾನೋಪದೇಶ ಪಡೆಯಲು ಹೋಗಬೇಕೆಂದು ತಿಳಿಸಿಯಾಗಿದೆ.

ಈಗ, ಅಂತಹ ಶಿಷ್ಯನು ಗುರುವಿನ ಸಮೀಪಕ್ಕೆ ವಿನಯಪೂರ್ವಕವಾಗಿ ಬಂದಾಗ, ಗುರುವು ಅವನನ್ನು ತಿರಸ್ಕರಿಸದೆ ಅವನಿಗೆ ತತ್ತ್ವಬೋಧನೆ ಮಾಡಬೇಕೆಂಬ ಆದೇಶವನ್ನು ಶ್ರುತಿಯು ಕೊಡುತ್ತಿದೆ. ಅವನನ್ನು ಪುರಸ್ಕರಿಸಿ, ಅವನ ಜ್ಞಾನಪಿಪಾಸೆಯನ್ನು ಪ್ರೋತ್ಸಾಹಿಸಿ, ಗುರಿಯನ್ನು ಸಾಧಿಸಲು ಅವನಿಗೆ ಸಂಪೂರ್ಣ ಸಹಾಯ ಮಾಡಬೇಕು ಎಂದು ಶ್ರುತಿಯು ಹೇಳುತ್ತದೆ. ಶಿಷ್ಯನೂ ಬ್ರಹ್ಮವಿದ್ಯೆಯನ್ನು ಪಡೆಯಲು ತಕ್ಕ ಅಧಿಕಾರವುಳ್ಳವನಾಗಿರಬೇಕು; ಶಮದಮಾದಿಗಳಿಂದೊಡಗೂಡಿ ವೈರಾಗ್ಯಸಂಪನ್ನನಾಗಿರಬೇಕು. ಅಂತಹ ಉತ್ತಮ ಶಿಷ್ಯನಿಗೆ ಗುರುವು ಬ್ರಹ್ಮವಿದ್ಯೆಯನ್ನು ಕರಗತಮಾಡಿಸಬೇಕು. ಗುರುವು ಶ್ರುತಿಯ ಶಬ್ದಾರ್ಥವನ್ನು ಮಾತ್ರ ತಿಳಿಸಿದರೆ ಸಾಲದು. ಶಬ್ದಾರ್ಥದಿಂದಾಚೆ ಅದು ಸೂಚಿಸುವ ಧ್ವನಿ ಮತ್ತು ಅನಿರ್ವಚನೀಯವಾದದ್ದನ್ನು ಅಂತಃಕರಣದಲ್ಲಿ ಸ್ಫುರಿಸುವಂತೆ ಬೋಧಿಸಬೇಕು.

**ಇಲ್ಲಿಗೆ ಮುಂಡಕೋಪನಿಷತ್ತಿನ ಮುಂಡಕ ೧ ಖಂಡ ೨ ಸಮಾಪ್ತವಾಯಿತು.**

---

# ಎರಡನೆಯ ಮುಂಡಕ – ಒಂದನೆಯ ಖಂಡ

## ಅಕ್ಷರದಿಂದ ಜಗತ್ತಿನ ಉತ್ಪತ್ತಿ ಮತ್ತು ಲಯ

**ತದೇತತ್ ಸತ್ಯಂ ಯಥಾ ಸುದೀಪ್ತಾತ್ ಪಾವಕಾದ್**
**ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।**
**ತಥಾಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ**
**ಪ್ರಜಾಯಂತೇ ತತ್ರ ಚೈವಾಪಿಯಂತಿ ॥** ೧

**ತದೇತತ್** – ಆ ಇದು, **ಸತ್ಯಂ** – ಸತ್ಯವು, **ಯಥಾ** – ಹೇಗೆ, **ಸುದೀಪ್ತಾತ್** – ಚೆನ್ನಾಗಿ ಪ್ರಜ್ವಲಿತವಾದ, **ಪಾವಕಾತ್** – ಅಗ್ನಿಯಿಂದ, **ಸಹಸ್ರಶಃ** – ಸಾವಿರಾರು ಸಂಖ್ಯೆಯಲ್ಲಿ, **ವಿಸ್ಫುಲಿಂಗಾಃ** – ಕಿಡಿಗಳು, **ಸರೂಪಾಃ** – ಸಮಾನರೂಪದಿಂದ, **ಪ್ರಭವಂತೇ** – ಹುಟ್ಟುತ್ತವೆಯೋ, **ತಥಾ** – ಹಾಗೆಯೇ, **ಸೋಮ್ಯ** – ಎಲೈ ಸೋಮ್ಯನೆ, **ಅಕ್ಷರಾತ್** – ಅಕ್ಷರದಿಂದ, **ವಿವಿಧಾಃ** – ಬಗೆ ಬಗೆಯ, **ಭಾವಾಃ** – ಜೀವಗಳು, **ಪ್ರಜಾಯಂತೇ** – ಹುಟ್ಟುತ್ತವೆ, **ಚ** – ಮತ್ತು, **ತತ್ರ ಏವ** – ಅದರಲ್ಲಿಯೇ, **ಅಪಿಯಂತಿ** – ಲೀನವಾಗುತ್ತವೆ.

(೧) ಆ ಇದು ಸತ್ಯ. ಚೆನ್ನಾಗಿ ಪ್ರಜ್ವಲಿತವಾದ ಅಗ್ನಿಯಿಂದ ಸಮಾನರೂಪವಾದ ಕಿಡಿಗಳು ಹೇಗೆ ಸಾವಿರಾರು ಸಂಖ್ಯೆಯಲ್ಲಿ ಹುಟ್ಟುತ್ತವೆಯೋ ಹಾಗೆಯೇ ಎಲೈ ಸೋಮ್ಯನೇ, ಅಕ್ಷರದಿಂದ ವಿಧವಿಧವಾದ ಜೀವಗಳು ಹುಟ್ಟುತ್ತವೆ ಮತ್ತು ಅದರಲ್ಲಿಯೇ ಲೀನವಾಗುತ್ತವೆ.

ಮೊದಲನೆಯ ಮುಂಡಕದಲ್ಲಿ ಅಪರವಿದ್ಯೆಯ ವಿಷಯವನ್ನು ತಿಳಿಸಿ ಾಯಿತು. ಪರವಿದ್ಯೆಯ ಕಡೆಗೆ ಸಾಧಕರ ಮನವೊಲಿಸಲು ಶ್ರುತಿಯು ಅದರಲ್ಲಿ ಅಪರವಿದ್ಯೆಯಿಂದ ಸಿಗುವ ಸೀಮಿತ ಫಲಗಳ ಒಕ್ಕಣೆ ಕೊಟ್ಟಿರುವುದಲ್ಲದೆ ಅದನ್ನು ಅಪಹಾಸ್ಯಕೂಡ ಮಾಡಿದೆ. ಈ ಮುಂಡಕದಲ್ಲಿ ಬ್ರಹ್ಮವಿದ್ಯೆಯ ಲಕ್ಷಣ, ವಿಷಯ ಮತ್ತು ಫಲಗಳನ್ನು ಬಣ್ಣಿಸಲು ಯತ್ನಿಸಿದೆ. ಎಷ್ಟೇ ಪ್ರಯತ್ನಪಟ್ಟರೂ ಅನಂತವೂ, ರೂಪರಹಿತವೂ, ಅಲೌಕಿಕವೂ ಆದ ಅಕ್ಷರವನ್ನು ಮಿತಿಗೊಳಪಟ್ಟ ಭಾಷೆಯಿಂದ ವಿವರಿಸುವುದು ಅಸಾಧ್ಯ. ಭಾಷೆಯ ಅರ್ಥಬಾಹುಳ್ಯವು ನಿಗದಿಯಾದದ್ದು. ಅದು ಅನಂತತೆಯ ಮಟ್ಟಕ್ಕೆ ಏರಲಾರದು. ಮನಸ್ಸಿಗೇ ಮೀರಿದ ವಸ್ತುವನ್ನು ಮಾತು ವರ್ಣಿಸುವುದು ಹೇಗೆ ಸಾಧ್ಯ? ಆದರೂ ಜಗತ್ತಿನಲ್ಲಿ ಯಾವ ಪವಿತ್ರ ಗ್ರಂಥವೂ ಪರಮಾರ್ಥ ವಸ್ತುವನ್ನು ನಿರ್ದೇಶಿಸುವಾಗ ಉಪನಿಷತ್ತುಗಳ ಸೂಕ್ಷ್ಮ ವಿವರಣೆಯ ಮಟ್ಟಕ್ಕೆ ಬರಲಾರವು. ತನ್ನದೇ ಆದ ವಿಶಿಷ್ಟ ಶಬ್ದ ವೈಖರಿಯನ್ನೂ, ಶೈಲಿಯನ್ನೂ

ಬಳಸಿಕೊಂಡು ಅನುಭವೈಕವೇದ್ಯವಾದ ಅಕ್ಷರವಸ್ತುವಿನ ಅತ್ಯಂತ ಸಮೀಪವಾದ ಸ್ವರೂಪಭಾವವನ್ನು ನಮ್ಮ ಮನಸ್ಸಿಗೆ ತರುವ ಪ್ರಯತ್ನ ಮಾಡಿರುವುದನ್ನು ಈ ಮುಂಡಕದಲ್ಲಿ ನಾವು ಕಾಣುತ್ತೇವೆ. ಈ ಪ್ರಕರಣವಿಲ್ಲದಿದ್ದರೆ ಈ ಗ್ರಂಥವನ್ನು ಉಪನಿಷತ್ತು ಎಂದು ಪರಿಗಣಿಸುವುದೇ ಅಸಂಭವವಾಗಿರುತ್ತಿತ್ತು ಎನ್ನಬಹುದು. ಅಂದಮೇಲೆ ಈ ಮುಂಡಕದ ಮಹತ್ವ ಎಷ್ಟು ಎಂಬುದನ್ನು ಊಹಿಸಬಹುದು.

ಯೋಗ್ಯನಾದ ಗುರುವಿನ ಸಹಾಯವಿಲ್ಲದೆ ಹಿಂದೂ ಪವಿತ್ರ ಗ್ರಂಥಗಳನ್ನು ಸ್ವತಂತ್ರವಾಗಿ ಅಧ್ಯಯನ ಮಾಡಲು ಹೊರಟ ಪಾಶ್ಚಿಮಾತ್ಯರಿಗೆ ಆಗುವ ಗೊಂದಲ ಆಭಾಸಗಳು ಅಷ್ಟಿಷ್ಟಲ್ಲ. ಹಿಂದಿನ ಮುಂಡಕದ ಪ್ರಾರಂಭದಲ್ಲೇ 'ಸುಕೃತ ಲೋಕಕ್ಕೆ ವೈದಿಕ ಕರ್ಮಗಳೇ ನಿಜವಾದ ಹಾದಿ – ಇದು ಸತ್ಯವು'* ಎಂದು ಘೋಷಿಸಿದೆ. ಈಗ ಈ ಮುಂಡಕದಲ್ಲಿ – 'ಎಲ್ಲಾ ಕರ್ಮಗಳನ್ನೂ ಮೀರಿ ಅವುಗಳಿಂದಾಚೆಗಿರುವ ಪರಮಾರ್ಥಜ್ಞಾನವೇ ಮೋಕ್ಷಕ್ಕೆ ಹಾದಿ. ಇದು ಸತ್ಯವು' ಎಂದು ಹೇಳುತ್ತಿದೆ. ಈ ರೀತಿಯಾಗಿ ಕರ್ಮಾನುಷ್ಠಾನವೇ ಅತ್ಯುತ್ತಮ ಎಂದು ಒಂದು ಸಲ, ಬ್ರಹ್ಮತತ್ತ್ವ ಜ್ಞಾನವೇ ಅತ್ಯುತ್ಕೃಷ್ಟ ಎಂದು ಇನ್ನೊಂದು ಸಲ, ಅದೂ ಸತ್ಯ, ಇದೂ ಸತ್ಯ – ಎಂದು ಒಂದೇ ಉಪನಿಷತ್ತಿನಲ್ಲಿ ಒತ್ತಿ ಒತ್ತಿ ಹೇಳಿರುವುದನ್ನು ಕೇಳಿ ಪಾಶ್ಚಾತ್ಯರು ರೊಚ್ಚಿಗೆದ್ದು 'ಇದು ಹುಚ್ಚುತನ' ಎಂದು ಆರ್ಭಟಿಸಬಹುದು. ಕೇಕೆಹಾಕಿ ನಗಬಹುದು. ಅವರ ಧಾಟಿಯಲ್ಲೇ ವಿದ್ಯಾಭ್ಯಾಸಮಾಡಿದ ಹಿಂದುಗಳು ಕೂಡ ಅದೇ ಅಭಿಪ್ರಾಯವನ್ನು ಪ್ರತಿಧ್ವನಿಸಿದರೆ ಆಶ್ಚರ್ಯವಿಲ್ಲ. ಹೀಗಾಗಿ ಪಾಶ್ಚಾತ್ಯ ವಿದ್ಯಾಭ್ಯಾಸದಲ್ಲೇ ಹೆಚ್ಚು ಶ್ರದ್ಧೆಯುಳ್ಳ ನಮ್ಮ ದೇಶದ ವಿದ್ಯಾವಂತರು ನಮ್ಮ ಪವಿತ್ರ ಶಾಸ್ತ್ರಗಳನ್ನು ಅಲ್ಲಗಳೆಯುತ್ತಾರೆ.

ಆದರೆ ಶ್ರುತಿಯ ಬೋಧನಾಕ್ರಮವನ್ನು ಅರಿತವರಿಗೆ ಹಿಂದೆ ಹೇಳಿರುವ ಯಾವ ವಾಕ್ಯಕ್ಕೂ ಇಲ್ಲಿ ವಿರೋಧವು ಕಂಡುಬರುವುದಿಲ್ಲ. ಕರ್ಮಾನುಷ್ಠಾನದಿಂದ ಶಿಸ್ತು, ಸಂಯಮ, ಶ್ರದ್ಧೆಗಳನ್ನು ಕಲಿತು ಮುಂದಿನ ಮೇಲ್ಮಟ್ಟದ ವಿದ್ಯೆಗೆ ಅರ್ಹತೆ ಪಡೆಯಲೆಂಬ ಉದ್ದೇಶದಿಂದ ಋಷಿಯು ಕರ್ಮವಿಧಿಗಳನ್ನು ಶ್ಲಾಘಿಸುತ್ತಾನೆ. ಕರ್ಮಾಚರಣೆಯಲ್ಲಿ ನಿರತನಾಗಿ ಅವುಗಳ ವಿಚಾರವನ್ನು ಕೂಲಂಕಷವಾಗಿ ತಿಳಿದು, ಅವುಗಳ ಅಭ್ಯಾಸಬಲದಿಂದ ಬರುವ ಫಲಗಳಿಂದ ವಿಕಾಸತೆಪಡೆದು, ಅವುಗಳ ಇತಿಮಿತಿಗಳನ್ನು ತಾನಾಗಿ ಅರಿತುಕೊಳ್ಳುವ ಮನಸ್ಸಿನ ಪರಿಪಾಕ ಪಡೆದಾಗ, ಇದಕ್ಕಿಂತ ಉತ್ಕೃಷ್ಟವಾದ ಸಾಧನವಿದೆ ಎಂಬ ಅರಿವು ಅವನಲ್ಲಿ ಮೂಡುತ್ತದೆ. ಆಗ ಬ್ರಹ್ಮವಿದ್ಯೆಯ ಮಹತ್ವವನ್ನು ಹೇಳಿದರೆ ಅದು ಅವನ ಮನಸ್ಸಿಗೆ ಹಿಡಿಯುತ್ತದೆ. ಅದರಲ್ಲಿ ಉತ್ಸಾಹ ಮೂಡುತ್ತದೆ. ಅದನ್ನು ಕರಗತಮಾಡಿಕೊಳ್ಳುವ ತೀವ್ರ ಆಸಕ್ತಿಯಲ್ಲಿ ಅವನು ಮುಂದಿನ ಸಾಧನಗಳನ್ನು ಹುಡುಕುತ್ತಾನೆ. ಅದನ್ನು ಬಿಟ್ಟು, ಕರ್ಮ ಮಾರ್ಗವು ನಿರ್ಥಕವೆಂದು ಮೊದಲೇ ತಿಳಿಸಿದರೆ ಯಾವನಿಗೆ ಅದರಲ್ಲಿ ಆಸಕ್ತಿ ಹುಟ್ಟೀತು ? ನೇರವಾಗಿ ಜ್ಞಾನಮಾರ್ಗವನ್ನು ಅನುಸರಿಸಲು ಹೊರಟು ಅವನು ಧ್ಯಾನಕ್ಕೆಂದು ಕುಳಿತು ನಿದ್ರೆಮಾಡುತ್ತಾನೆ, ಅಷ್ಟೆ. ಎಲ್ಲಕ್ಕೂ ಒಂದು ಕ್ರಮ,

*ಮುಂಡಕೋಪನಿಷತ್ತು - ಮುಂಡಕ ೧ - ಖಂಡ ೨ - ಮಂತ್ರ ೧ನ್ನು ನೋಡಿ.

ಶಿಸ್ತಿನ ತಳಹದಿ ಬೇಕಲ್ಲವೇ ? ಈ ಕಾರಣದಿಂದಲೇ ವಿಧಿಪೂರ್ವಕ ಕರ್ಮಾನುಷ್ಠಾನವನ್ನೇ ಶ್ರುತಿಯು ಮೊದಲು ಹೊಗಳಿ, ಅನಂತರ ಕ್ರಮವಾಗಿ, ಅವುಗಳ ಕಷ್ಟ ನಿಷ್ಠುರ, ಫಲದ ಮಿತಿ ಇವುಗಳನ್ನು ತಿಳಿಸಿ ಅದನ್ನು ತ್ಯಜಿಸಿ ಅದಕ್ಕಿಂತ ವಿಶೇಷವಾಗಿ ಫಲಕೊಡುವ ಜ್ಞಾನಮಾರ್ಗವನ್ನು ಅನುಸರಿಸುವಂತೆ ಪ್ರೋತ್ಸಾಹಿಸುತ್ತದೆ. ಮೊದಲು ಹೇಳಿದ್ದು ಸತ್ಯವೆಂದರೆ – ಸಾಪೇಕ್ಷಿಕ ಸತ್ಯ. ಜ್ಞಾನದಿಂದ ಬರುವುದು ನಿರಪೇಕ್ಷವಾದ ಪಾರಮಾರ್ಥಿಕ ಸತ್ಯ.

ಹಿಂದಿನ ಮುಂಡಕದಲ್ಲಿ ಪರವಿದ್ಯೆಯ ಸೂಕ್ಷ್ಮ ಪರಿಚಯ ಮಾಡಿದೆ. ಆದರೆ ರೂಪರಹಿತವೂ, ಶಾಶ್ವತವೂ, ಅನಂತವೂ, ಅಜವೂ ಆದ ಪರಿಶುದ್ಧ ಪರಮಾರ್ಥದಿಂದ ಪರಿಮಿತಿಗೊಳಪಟ್ಟ, ಮೃತ್ಯುವಿಗೆ ಅಧೀನವಾದ, ಅನೇಕಾನೇಕ ವ್ಯಕ್ತಿಗಳು ಹೇಗೆ ಉತ್ಪನ್ನವಾದವು ಎಂಬುದು ಸಾಧಕನನ್ನು ಬಾಧಿಸುವ ಸಮಸ್ಯೆ. ತನ್ನ ಸುತ್ತಮುತ್ತಲೂ ನಾಮರೂಪಗಳಿಂದ ಕೂಡಿ ರಾರಾಜಿಸುತ್ತಿರುವ ವಸ್ತುಗಳು ಹೇಗೆ ಉಂಟಾದವೆಂಬುದು ಅವನನ್ನು ಕಾಡುತ್ತಿರುವ ಪ್ರಶ್ನೆ. ಅಗೋಚರವಾದ ಶಾಶ್ವತ ವಸ್ತುವಿಗೂ, ಗೋಚರಕ್ಕೆ ಬರುವ ವಿನಾಶಿಯಾದ ಸುತ್ತಮುತ್ತಲಿರುವ ವಸ್ತುಗಳಿಗೂ ಯಾವುದೋ ಸಂಬಂಧವಿರಬೇಕೆಂದು ಅವನ ನಂಬಿಕೆ. ಏಕೆಂದರೆ ಉಪನಿಷತ್ತುಗಳ ಪ್ರಕಾರ ಎಲ್ಲವೂ ಶಾಶ್ವತ ವಸ್ತುವಿನ ರೂಪಗಳೇ. ಇವುಗಳ ಸಂಬಂಧವನ್ನು ಅತ್ಯಂತ ಸುಂದರವೂ, ಸರಳವೂ ಆದ ಉಪಮೆಯ ಮೂಲಕ ಈ ಮಂತ್ರದಲ್ಲಿ ವಿವರಿಸಿದೆ. ಪ್ರತಿ ವ್ಯಕ್ತಿಯೂ ಬ್ರಹ್ಮದಿಂದಲೇ ಉತ್ಪತ್ತಿಯಾಗಿ, ಅದರಲ್ಲೇ ಪ್ರತಿಷ್ಠಿತವಾಗಿ, ಕೊನೆಗೆ ಅದರಲ್ಲೇ ಲೀನವಾಗುವುದರಿಂದ ಅವನು ಬ್ರಹ್ಮನೇ. ಇದನ್ನು ವಿವರಿಸಲು, ಪ್ರಜ್ವಲಿಸುತ್ತಿರುವ ಬೆಂಕಿಯ ಉರಿಯಿಂದ ಹೊರಡುವ ಕಿಡಿಗಳು ಸ್ವಲ್ಪಕಾಲವಿದ್ದು ಬೆಂಕಿಗೇ ಬಿದ್ದು ಅದರಲ್ಲಿಯೇ ಸೇರಿಹೋಗುವುದನ್ನು ಉಪಮಾನವಾಗಿ ಹೇಳಿದೆ. ಆ ಕಿಡಿಗಳೂ ಬೆಂಕಿಯ ಲಕ್ಷಣವುಳ್ಳವಾದ್ದರಿಂದ ಅವೂ ಬೆಂಕಿಯೇ.

ಪರಿಣಾಮವು ಪರಿಸಮಾಪ್ತವಾಗುವುದು, ಅದು ತನ್ನ ಮೂಲ ಸ್ವರೂಪಕ್ಕೆ ಅಥವಾ ತನ್ನ ಕಾರಣರೂಪಕ್ಕೇ ಹಿಂದಿರುಗಿದಾಗ ಎಂಬುದು ವೇದಾಂತ ತತ್ತ್ವವೂ ಹೌದು, ವೈಜ್ಞಾನಿಕ ತತ್ತ್ವವೂ ಹೌದು. ಒಂದು ಮರವು ಒಣಗಿ ಕೆಳಗುರುಳಿದಾಗ ಅದರ ಬೀಜದ ಫಲವಾಗಿ ಅದೇ ಜಾತಿಯ ಇನ್ನೊಂದು ಮರ ಹುಟ್ಟುವುದು. ನೀರು ವಿಭಜನೆಯಾದಾಗ ಅದರ ಮೂಲವಸ್ತುಗಳಿಂದ ಜಲಜನಕ ಮತ್ತು ಆಮ್ಲಜನಕವಾಗುವುದು. ಪಂಚಭೂತಗಳಿಂದಾದ ಯಾವ ವಸ್ತುವೂ ಅದರ ನಾಶವಾದಾಗ ಪುನಃ ಪಂಚಭೂತಗಳೊಡನೆ ಒಂದಾಗುವುದು. ಚಿನ್ನದ ಒಡವೆಯನ್ನು ಕರಗಿಸಿದಾಗ ಅದು ಪುನಃ ಚಿನ್ನವೇ ಆಗುವುದು. ಹಾಗೆಯೇ ಬೆಂಕಿಯ ಕಿಡಿಯು ಉರಿಯಲ್ಪಡುವ ವಸ್ತುವಿನ ಕಣವನ್ನು ದಹಿಸುತ್ತಿದ್ದು, ಆ ವಸ್ತು ಸುಟ್ಟು ಬೂದಿಯಾದಮೇಲೆ ಉರಿಗೇ ಬಿದ್ದು ಅದರಲ್ಲಿ ಒಂದಾಗುವುದು. ಕಿಡಿಯು ಉರಿಯುತ್ತಿರುವ ವಸ್ತುವಿನ ಕಣವನ್ನು ಸ್ವಲ್ಪಕಾಲ ಆಶ್ರಯಿಸಿರುತ್ತದೆ. ಅದು ಸುಟ್ಟುಹೋದಮೇಲೆ ಕಿಡಿಯು ಬೆಂಕಿಯೊಳಗೇ ಪುನಃ ಬಿದ್ದು ಅದರಲ್ಲೇ ಸೇರಿಹೋಗುವುದು.

ಅದೇ ರೀತಿ ಒಬ್ಬ ವ್ಯಕ್ತಿಯು ತನ್ನ ಉಪಾಧಿ ಇರುವವರೆಗೂ ಚೇತನಸ್ವರೂಪದ

ಲಕ್ಷಣಗಳನ್ನು ಪ್ರದರ್ಶಿಸುವನು. ಆದರೆ ಆ ಉಪಾಧಿಯು ನಾಶವಾದ ಮೇಲೆ ವ್ಯಕ್ತಿಗತವಾಗಿದ್ದ ಚೇತನವು ತನ್ನ ಮೂಲಚೇತನವನ್ನು ಸೇರುವುದು. ಜೀವವು ತನ್ನ ಕರ್ಮಫಲಗಳನ್ನು ಅನುಭವಿಸಲು ಮತ್ತೊಂದು ದೇಹವನ್ನು ಆಶ್ರಯಿಸಿ ಹುಟ್ಟುತ್ತದೆ. ಆ ದೇಹವೂ ಪತನವಾದಮೇಲೆ ಪ್ರತ್ಯೇಕವಾಗಿದ್ದ ಆ ಜೀವವು ಸಮಷ್ಟಿ ಜೀವದೊಡನೆ ಬೆರೆತು ಒಂದಾಗುತ್ತದೆ.

## ಅಕ್ಷರದ ಸ್ವರೂಪ

**ದಿವ್ಯೋಹ್ಯಮೂರ್ತಃ ಪುರುಷಃ**
**ಸಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ**
**ಹ್ಯಕ್ಷರಾತ್ ಪರತಃ ಪರಃ ॥** ೨

**ದಿವ್ಯಃ ಹಿ** – ಸ್ವಯಂ ಪ್ರಕಾಶನೂ, **ಅಮೂರ್ತಃ ಹಿ** – ಯಾವ ಆಕಾರವೂ ಇಲ್ಲದ, **ಪುರುಷಃ** – ಪುರುಷನು (ಅಕ್ಷರನು), **ಸಬಾಹ್ಯಾಭ್ಯಂತರಃ** – ಹೊರಗೂ ಒಳಗೂ ಇರುವವನು, **ಅಜಃ ಹಿ** – ಜನ್ಮರಹಿತನು, **ಅಪ್ರಾಣಃ** – ಪ್ರಾಣರಹಿತನು, **ಅಮನಾಃ ಹಿ** – ಮನಸ್ಸಿಲ್ಲದವನು, **ಶುಭ್ರಃ ಹಿ** – ಶುದ್ಧನು, **ಪರತಃ ಅಕ್ಷರಾತ್** – ಉತ್ತಮವಾದ ಅಕ್ಷರಕ್ಕಿಂತ, **ಪರಃ** – ಶ್ರೇಷ್ಠನು.

(೨) ಸ್ವಯಂಪ್ರಕಾಶನೂ, ಆಕಾರರಹಿತನೂ ಆದ ಅಕ್ಷರನು ಹೊರಗೂ ಒಳಗೂ ಇರುವವನು, ಜನ್ಮರಹಿತನು, ಪ್ರಾಣರಹಿತನು, ಮನಸ್ಸಿನಲ್ಲದವನು, ಪರಿಶುದ್ಧನು, ಉತ್ತಮವಾದ ಅಕ್ಷರಕ್ಕಿಂತ ಶ್ರೇಷ್ಠನು

ಸುತ್ತಮುತ್ತ ನಾವು ಕೇಳುವ, ನೋಡುವ ನಾಮರೂಪಗಳೆಲ್ಲ ಪರಮಾರ್ಥ ಚೈತನ್ಯದ ಕಿಡಿಗಳು ಎಂದು ಹೇಳುವುದಾದರೆ ಆ ಪರಮಾರ್ಥ ಚೈತನ್ಯದ ಸ್ವರೂಪ ಹೇಗಿರಬೇಕು ಎಂಬುದು ಸಾಧಕರನ್ನು ಕಾಡುವ ಪ್ರಶ್ನೆ. ಅದಕ್ಕಾಗಿ ಅದರ ಸ್ವರೂಪ ಲಕ್ಷಣಗಳನ್ನು ಸೂಚ್ಯವಾಗಿಯಾದರೂ ತಿಳಿಸಲು ಈ ಮಂತ್ರದಲ್ಲಿ ಪ್ರಯತ್ನಿಸಿದೆ. ಅದು ಒಂದು ಜ್ಯೋತಿರಾಶಿ. ಆದರೆ ಅದಕ್ಕೆ ಯಾವ ನಿರ್ದಿಷ್ಟವಾದ ರೂಪವೂ ಇಲ್ಲ. ಅದು ಮೊದಲು ದಟ್ಟವಾಗಿದ್ದು ಕೊನೆಗೆ ಸಣ್ಣವಾಗುವುದೂ ಅಲ್ಲ. ಗೋಳಾಕಾರದ ಬೆಳಕೂ ಅಲ್ಲ. ತುದಿಯಲ್ಲಿ ಮೊನಚಾಗಿ ಕಾಣುವ ದೀಪದ ಉರಿಯಂತೆಯೂ ಅಲ್ಲ. ಅದು ಆಕಾರವಿಲ್ಲದ ಪ್ರಕಾಶಮಾನವಾದ ಬೆಳಕು ಮಾತ್ರ. ಶ್ರೀರಾಮಕೃಷ್ಣ ಪರಮಹಂಸರು ಹೇಳಿರುವಂತೆ 'ಅದು ಸರ್ವ ವಿಶೇಷಣವರ್ಜಿತ ಜ್ಯೋತಿ'. ಪ್ರಜ್ಞೆಯು ನಮ್ಮ ಮನಸ್ಸಿನಲ್ಲಿ ತಿಳಿವಿನ ಬೆಳಕನ್ನು ಹರಡುತ್ತದೆ. ಒಂದು ವಸ್ತುವಿನ ತಿಳಿವು, ವೇದನೆ ಅಥವಾ ಭಾವನೆ ನಮಗಾಗಿದೆ ಎಂದರೆ ನಮ್ಮ ಪ್ರಜ್ಞೆಯಿಂದ ಹೊರಟ ಬೆಳಕಿನ ಕಿರಣಜಾಲವು ಆ ರೀತಿಯಲ್ಲಿ ಆ ವಸ್ತುವನ್ನು ನಮ್ಮ ಅಂತರಂಗಕ್ಕೆ ಪ್ರಕಾಶಪಡಿಸುತ್ತಿದೆ, ಎಂದು ಅಭಿಪ್ರಾಯ. ಪ್ರಜ್ಞಾರೂಪದಲ್ಲಿ ಪ್ರಕಟವಾಗುವ ನಮ್ಮ ಚೈತನ್ಯಶಕ್ತಿಯ ಕಿಡಿಯನ್ನು ಶ್ರುತಿಯು 'ದಿವ್ಯ' ಎಂದು ವರ್ಣಿಸುತ್ತದೆ.

ಮೇಲೆ ಹೇಳಿರುವುದನ್ನು ವಿಚಾರಮಾಡಿದಮೇಲೆ, ನಮ್ಮೊಳಗಷ್ಟೇ ಸೀಮಿತವಾಗಿರುವ ಚೈತನ್ಯಶಕ್ತಿಯು ಕಿಡಿಯೇ ಪರಮಾರ್ಥವೆನಿಸುವ 'ಪುರುಷ' ಅಥವಾ 'ಆತ್ಮ' ಎಂದು ನಮಗೆ ಅನ್ನಿಸಬಹುದು. ಆ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸುವುದಕ್ಕೋಸ್ಕರ ಶ್ರುತಿಯು ಆ ಆತ್ಮನು ಒಳಗೂ ಹೊರಗೂ ಒಂದಾಗಿರುವವನು ಎಂದು ವಿವರಿಸುತ್ತದೆ. ಆ ಪರಮಾರ್ಥಶಕ್ತಿಯು ಎಲ್ಲೆಡೆ ಇರುವುದರಿಂದಲೇ ಬದುಕು ಸಾಧ್ಯವಾಗಿರುವುದು. ಸರ್ವವ್ಯಾಪಿಯಾದ ಈ ಜ್ಯೋತಿಸ್ಸ್ವರೂಪವು ಶಾಶ್ವತವಾದದ್ದರಿಂದ ಅದಕ್ಕೆ ಹುಟ್ಟೆಂಬುದು ಇರಲು ಸಾಧ್ಯವಿಲ್ಲ. ಅದು ಅಜ ಮತ್ತು ಅಮರವಾದದ್ದು.

ಸರ್ವಗತವಾದ ಈ ಚೇತನವನ್ನು 'ಅಪ್ರಾಣನು', 'ಅಮನನು' ಎಂದು ಶ್ರುತಿಯು ಹೇಳಿದೆ. ಪ್ರತಿಯೊಂದು ಜೀವಿಗೂ ಇರುವಂತೆ ಪ್ರತ್ಯೇಕವಾದ ಪ್ರಾಣವಾಗಲಿ, ಮನಸ್ಸಾಗಲಿ ಆ ಚೇತನಕ್ಕೆ ಇಲ್ಲ. ಅದರಲ್ಲಿ ಯಾವ ಕ್ರಿಯಾವಿಶೇಷವೂ ನಡೆಯದು. ಯಾವ ಚಲನವಲನವೂ ಇಲ್ಲ ಎಂದಮೇಲೆ ಪ್ರಾಣವಾಯುಗಳು ಅದರೊಳಗಿರಲು ಹೇಗೆ ಸಾಧ್ಯ ? ಹಾಗೆಯೇ ಅದರಲ್ಲಿ ಯಾವ ಮನೋವ್ಯಾಪಾರವೂ ಇಲ್ಲ. ಆದ್ದರಿಂದ ಅದಕ್ಕೆ ಜೀವಿಗಳಿಗಿರುವಂತೆ ಮನಸ್ಸು ಇರುವುದಿಲ್ಲ. ಅದಕ್ಕೆ ಪ್ರಾಣವಾಯುಗಳು, ಕರ್ಮೇಂದ್ರಿಯಗಳು, ಬುದ್ಧೀಂದ್ರಿಯಗಳು ಯಾವುವೂ ಇರವು. ಅಂದರೆ ಅದು ನಾವು ಲೌಕಿಕವಾಗಿ ಕಾಣುವ ಯಾವ ಅವಯವ, ಅಂಗಗಳನ್ನೂ ಹೊಂದಿಲ್ಲ. ಹಾಗೇನಾದರೂ ಅವುಗಳು ಇದ್ದಿದ್ದರೆ ಅದು ಅಮೂರ್ತವೆನಿಸಿಕೊಳ್ಳುತ್ತಿರಲಿಲ್ಲ. ಪರಮಾರ್ಥವು ಲೋಕದ ಸಮಸ್ತ ವ್ಯವಹಾರ ವ್ಯಾಪಾರಗಳನ್ನೂ ನಡೆಸುವ ಚೈತನ್ಯವಿಶೇಷ. ಅದಕ್ಕೆ ಬೇರೆ ಸಹಾಯಕ ಶಕ್ತಿಯಾಗಲಿ ಕರಣಗಳಾಗಲಿ ಅಗತ್ಯವಿಲ್ಲ. ಆದ್ದರಿಂದ ಅದು 'ಅಪ್ರಾಣನು' ಮತ್ತು 'ಅಮನನು'. ಇದು ಮುಂದಿನ ಮಂತ್ರದಲ್ಲಿ ಇನ್ನೂ ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ.

ಈ ಚೈತನ್ಯವು ಶುಭ್ರವಾದದ್ದು. ಅದು ಸರ್ವವಸ್ತುಗಳ ಮೇಲೆ ಪ್ರಕಾಶಬೀರಿ ಬೆಳಗುವ ಪ್ರಜ್ಞೆ. ಅದಕ್ಕೆ ಶುಭ್ರ ಅಶುಭ್ರ ಎಂಬ ಭೇದವಿಲ್ಲ. ಅದು ಸರ್ವಸ್ವವನ್ನೂ ಸಮನಾಗಿ ಬೆಳಗುವ ತೇಜಸ್ಸು. ಸೂರ್ಯನಿಗೆ ತನ್ನ ಬೆಳಕಿನಲ್ಲಿ ಆಚರಿಸಲ್ಪಟ್ಟ ಯಜ್ಞದ ಪುಣ್ಯವಾಗಲಿ, ಅದೇ ಬೆಳಕಿನಲ್ಲಿ ನಡೆದ ಕಗ್ಗೊಲೆಯ ಪಾಪವಾಗಲಿ ಅಂಟುವುದಿಲ್ಲ. ಶುಭವಾಗಲಿ, ಅಶುಭವಾಗಲಿ ಎರಡನ್ನೂ ಯಾವ ಪರಿವೆಯೂ ಇಲ್ಲದೆ ಸಮನಾಗಿ ಬೆಳಗುವುದು ಅವನ ಜ್ಯೋತಿ. ಅದರಂತೆ ಶುದ್ಧಚೈತನ್ಯವೂ ಪರಿಶುದ್ಧವಾದದ್ದು. ಅದಕ್ಕೆ ಯಾವ ಪಾಪದ ಕಳಂಕವೂ ಸೋಕದು.

ಪರಮಾರ್ಥ ಚೈತನ್ಯವು ದೊಡ್ಡದಕ್ಕಿಂತ ದೊಡ್ಡದು. ಏಕೆಂದರೆ ವ್ಯಾಕೃತವಾಗಿ ಹಬ್ಬಿರುವ ನಾಮರೂಪಗಳ ಬೀಜರೂಪವಾಗಿ ತೋರುವ ಅಕ್ಷರವು ಪರವು, ಅಂದರೆ ಶ್ರೇಷ್ಠವಾದದ್ದು. ಅದಕ್ಕಿಂತಲೂ ಸೂಕ್ಷ್ಮವಾಗಿ ನಿರುಪಾಧಿಕವಾಗಿರುವ ಅವ್ಯಾಕೃತ ಪುರುಷ, ಅಂದರೆ ಪರಮಾರ್ಥ ಚೈತನ್ಯವು ಇನ್ನೂ ಪರವಾದದ್ದು, ಶ್ರೇಷ್ಠವಾದದ್ದು. ಒಟ್ಟಿನಲ್ಲಿ ನಾಮರೂಪಗಳು ಪ್ರಕಟವಾಗುವುದಕ್ಕಿಂತ ಮುಂಚೆಯೇ ಅವ್ಯಾಕೃತವಾಗಿದ್ದ ಚೈತನ್ಯವೇ ಪರಮಾರ್ಥವಾದದ್ದು, ಅತ್ಯಂತ ಶ್ರೇಷ್ಠವಾದದ್ದು ಎಂಬುದು ಶ್ರುತಿಯ ಅಭಿಪ್ರಾಯ.

# ಅಕ್ಷರದಿಂದ ಪ್ರಾಣವೇ ಮೊದಲಾದವುಗಳ ಉತ್ಪತ್ತಿ

**ಏತಸ್ಮಾಜ್ಜಾಯತೇ ಪ್ರಾಣೋ**
**ಮನಃ ಸರ್ವೇಂದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ**
**ಪೃಥಿವೀ ವಿಶ್ವಸ್ಯ ಧಾರಿಣೀ ॥** ೩

**ಏತಸ್ಮಾತ್** – ಈ ಪುರುಷನಿಂದ, **ಪ್ರಾಣಃ** – ಪ್ರಾಣವು, **ಜಾಯತೇ** – ಹುಟ್ಟುತ್ತದೆ, **ಮನಃ** – ಮನಸ್ಸೂ, **ಸರ್ವೇಂದ್ರಿಯಾಣಿ** – ಎಲ್ಲ ಇಂದ್ರಿಯಗಳೂ, **ಖಂ** – ಆಕಾಶವೂ, **ವಾಯುಃ** – ವಾಯುವೂ, **ಜ್ಯೋತಿಃ** – ಅಗ್ನಿಯೂ, **ಆಪಃ** – ನೀರೂ, **ವಿಶ್ವಸ್ಯ ಧಾರಿಣೀ** – ಎಲ್ಲವನ್ನೂ ಧರಿಸಿರುವ, **ಪೃಥ್ವೀ ಚ** – ಪೃಥ್ವಿಯೂ ಹುಟ್ಟುತ್ತವೆ.

(೩) ಈ ಪುರುಷನಿಂದಲೇ ಪ್ರಾಣವೂ, ಮನಸ್ಸೂ, ಸರ್ವೇಂದ್ರಿಯಗಳೂ, ಆಕಾಶ, ವಾಯು, ಅಗ್ನಿ, ನೀರು ಎಲ್ಲವನ್ನೂ ಧರಿಸಿರುವ ಪೃಥ್ವಿ ಇವುಗಳೂ ಹುಟ್ಟುತ್ತವೆ

ಹಿಂದಿನ ಮಂತ್ರದಲ್ಲಿ ವಿವರಿಸಿದ ಪರಮಾರ್ಥ ಚೈತನ್ಯ ಅಥವಾ ಬ್ರಹ್ಮವಸ್ತುವಿನಿಂದಲೇ ನಾವು ಕಾಣುವ, ತಿಳಿಯುವ ಪ್ರಪಂಚವೂ, ಪ್ರಪಂಚದಲ್ಲಿರುವ ಸಕಲ ವಸ್ತುಗಳೂ ಉತ್ಪನ್ನವಾಗಿವೆ. ಈ ಮಂತ್ರದಲ್ಲಿ ಪಂಚಭೂತಗಳೂ, ದಶೇಂದ್ರಿಯಗಳೂ, ಪ್ರಾಣ ಮತ್ತು ಮನಸ್ಸು ಇವೆಲ್ಲವೂ ಆ ಬ್ರಹ್ಮನಿಂದಲೇ ಉಂಟಾದವೆಂದು ವಿವರಿಸಿದೆ. ಸೃಷ್ಟಿಯಲ್ಲಿ ನಮಗೆ ತೋರುವ ವಸ್ತುಗಳ ರೂಪ ಮತ್ತು ಗುಣಗಳು ಮೇಲೆ ಹೇಳಿದ ಈ ಹದಿನೇಳು ತತ್ತ್ವಗಳಿಂದ ವಿರಚಿತವಾಗಿವೆಯೆಂದು ನಮ್ಮ ಶಾಸ್ತ್ರಗಳು ಸಾರಿಹೇಳಿವೆ. ಅಲ್ಲದೆ, ಎಲ್ಲ ಚಟುವಟಿಕೆಗಳೂ (ಪ್ರಾಣ) ಸಂವೇದನೆಗಳೂ (ಮನಸ್ಸು) ಮತ್ತು ತಿಳಿವಳಿಕೆಯೂ (ಇಂದ್ರಿಯಗಳು) ಹಾಗೂ ಪಂಚಭೂತಗಳಿಂದ ರಚಿತವಾದ ನಾವಿರುವ ಪ್ರಪಂಚವೂ – ಇವೆಲ್ಲವೂ ಆ ಬ್ರಹ್ಮವಸ್ತುವಿನಿಂದಲೇ ಹೊರಬಂದಿವೆ ಎಂದೂ ಹೇಳುತ್ತವೆ. ಎಲ್ಲ ವಸ್ತುಗಳ ಅಸ್ತಿತ್ವಕ್ಕೂ ಬ್ರಹ್ಮವಸ್ತುವೇ ಆಶ್ರಯ. ಸ್ಪಷ್ಟವಾದ ಈ ಜಗತ್ತಿನಿಂದ ಬ್ರಹ್ಮದ ಅಸ್ತಿತ್ವವನ್ನು ತೆಗೆದುಹಾಕಿದರೆ ಜಗತ್ತೇ ನಮ್ಮಿಂದ ಕಣ್ಮರೆಯಾಗುವುದು. ಆದ್ದರಿಂದ ಜಗತ್ತಿನ ಇರುವಿಕೆಗೆ ಬ್ರಹ್ಮವಸ್ತುವೇ ಕಾರಣವೆಂಬುದು ಖಚಿತ.

ವೇದಾಂತದಲ್ಲಿ ಈ ಅಭಿಪ್ರಾಯವನ್ನು ಒಂದು ಸುಂದರ ಉಪಮಾನದ ಮೂಲಕ ವಿವರಿಸಿದೆ. ಒಂದು ಬಟ್ಟೆಯ ಚೌಕವನ್ನು ನೇಯುವಾಗ ಅದೇ ದಾರದಿಂದ ಒಂದು ಕಲಾತ್ಮಕವಾದ ಆಕೃತಿಯನ್ನೂ ಹೆಸರನ್ನೂ ಅದರ ಮೇಲೆ ಕಾಣಿಸುವಂತೆ ನೆಯ್ದಿದೆ ಎಂದಿಟ್ಟುಕೊಳ್ಳೋಣ. ಆ ಬಟ್ಟೆಯು ಇರುವವರೆಗೂ ಆ ಕಸೂತಿಯ ಆಕೃತಿಯೂ, ಹೆಸರೂ ಅಂದವಾಗಿ ಕಾಣುತ್ತಿರುತ್ತದೆ. ಆದರೆ ಆ ಬಟ್ಟೆಯನ್ನು ನೆಯ್ದಿರುವ ದಾರದ ಎಳೆಯನ್ನು ಅದು ಬಿಚ್ಚಿಕೊಳ್ಳುವಂತೆ ಎಳೆಯುತ್ತಾ ಹೋದರೆ ಕೊನೆಗೆ ಬಟ್ಟೆಯೂ ಇಲ್ಲ, ಅದರ ಮೇಲಿದ್ದ ನಕಾಸೆಯೂ ಇಲ್ಲ, ಹೆಸರೂ ಇಲ್ಲ. ಎಲ್ಲವೂ ಮಾಯೆಯಾಗಿ ದಾರದ ಎಳೆಯ ಉಂಡೆಮಾತ್ರ ಉಳಿಯುತ್ತದೆ. ಆ ದಾರದ ಹೊಸಗೆಯನ್ನೂ ಬಿಚ್ಚಿಕೊಳ್ಳುವಂತೆ ಮಾಡಿದರೆ ಆಗ ಉಳಿಯುವುದು ಹತ್ತಿ

ಮಾತ್ರ. ಅಂದರೆ ಬಟ್ಟೆ, ಅದರ ಮೇಲಿದ್ದ ಕಸೂತಿ, ಹೆಸರು ಎಲ್ಲವೂ ಹತ್ತಿಯಿಂದಾದ ಬದಲಾವಣೆಯ ರೂಪಗಳು. ಆ ನಾಮರೂಪಗಳಿಗೆ ಹತ್ತಿಯೇ ಆಧಾರವಾಗಿತ್ತು.

ಆ ಹತ್ತಿಯನ್ನೂ ತೆಗೆದುಹಾಕಿದರೆ, ದಾರವಿಲ್ಲ, ಬಟ್ಟೆಯಿಲ್ಲ, ಅದರ ಮೇಲಿದ್ದ ಆಕೃತಿಯೂ ಇಲ್ಲ. ಹತ್ತಿಯಿಂದ ಅವುಗಳ ಹುಟ್ಟು, ಹತ್ತಿಯನ್ನು ಆಶ್ರಯಿಸಿ ಅವುಗಳ ಅಸ್ತಿತ್ವ, ಕೊನೆಗೆ ಹತ್ತಿಯಲ್ಲೇ ಅವುಗಳ ವಿಲೀನ. ಹೇಗೆ ಹತ್ತಿಯ ವಿಷಯವನ್ನು ತಿಳಿದರೆ ಅವುಗಳಿಂದಾಗುವ ಸಕಲ ಪದಾರ್ಥಗಳನ್ನೂ ನಾವು ತಿಳಿಯಬಹುದೋ ಹಾಗೆಯೇ, ಸಕಲ ಜ್ಞಾನಕ್ಕೂ ಮೂಲವಾಗಿರುವ, ಪ್ರಜ್ಞಾಸ್ವರೂಪವಾಗಿರುವ ಬ್ರಹ್ಮವನ್ನು ತಿಳಿದರೆ ಎಲ್ಲವೂ ತಿಳಿದಂತಾಗುವುದು. ನಾಮರೂಪಗಳಿಂದ ಕಂಗೊಳಿಸುವ ಜಗತ್ತಿನ ಸಕಲ ಪದಾರ್ಥಗಳೂ ಅದರಿಂದಲೇ ಉತ್ಪನ್ನವಾಗಿವೆ, ಅದರಲ್ಲೇ ಅಸ್ತಿತ್ವ ಹೊಂದಿವೆ, ಕೊನೆಗೆ ಅದರಲ್ಲೇ ವಿಲೀನವಾಗುತ್ತವೆ. ಈ ತತ್ತ್ವವನ್ನು ತಿಳಿಸುವುದಕ್ಕೋಸ್ಕರವೇ ಬೇರೆ ಬೇರೆ ಮಂತ್ರಗಳಲ್ಲಿ, ವಿವಿಧ ರೀತಿಗಳಲ್ಲಿ ಶ್ರುತಿಯು ಉಪನಿಷತ್ತಿನ ಈ ಖಂಡದಲ್ಲಿ ಹೇಳುತ್ತಿದೆ.

## ಅಕ್ಷರದಿಂದ ವಿರಾಟ್‌ಪುರುಷನ ಹುಟ್ಟು

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ**
**ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ ।**
**ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ**
**ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ॥** ೪

**ಯಸ್ಯ** – ಯಾರಿಗೆ, **ಅಗ್ನಿಃ** – ಅಗ್ನಿಯು (ದ್ಯುಲೋಕವು), **ಮೂರ್ಧಾ** – ತಲೆಯೋ, **ಚಂದ್ರಸೂರ್ಯೌ** – ಚಂದ್ರಸೂರ್ಯರು, **ಚಕ್ಷುಷೀ** – ಎರಡು ಕಣ್ಣುಗಳೋ, **ದಿಶಃ** – ದಿಕ್ಕುಗಳು, **ಶ್ರೋತ್ರೇ** – ಕಿವಿಗಳೋ, **ವಿವೃತಾಃ ವೇದಾಃ ಚ** – ಪ್ರಕಟಿತವಾದ ವೇದಗಳು, **ವಾಕ್** – ವಾಣಿಯೋ, **ವಾಯುಃ** – ವಾಯುವು, **ಪ್ರಾಣಃ** – ಪ್ರಾಣವೋ, **ವಿಶ್ವಂ** – ವಿಶ್ವವು, **ಅಸ್ಯ** – ಇವನ, **ಹೃದಯಂ** – ಹೃದಯವೋ, **ಪದ್ಭ್ಯಾಂ** – ಯಾವನ ಪಾದಗಳಿಂದ, **ಪೃಥಿವೀ (ಜಾತಾ)** – ಪೃಥ್ವಿಯು ಹುಟ್ಟಿರುವುದೋ, **ಏಷ ಹಿ** – ಇವನೇ, **ಸರ್ವಭೂತಾಂತರಾತ್ಮಾ** – ಸರ್ವಪ್ರಾಣಿಗಳ ಅಂತರಾತ್ಮನು.

**(೪) ಯಾವನಿಗೆ ಅಗ್ನಿಯು (ದ್ಯುಲೋಕವು) ತಲೆಯೋ, ಚಂದ್ರಸೂರ್ಯರು ಕಣ್ಣುಗಳೋ, ದಿಕ್ಕುಗಳು ಕಿವಿಗಳೋ, ವಿವರವಾದ ವೇದಗಳು ವಾಣಿಯೋ, ವಾಯುವು ಪ್ರಾಣವೋ, ವಿಶ್ವವು ಹೃದಯವೋ, ಯಾವನ ಪಾದಗಳಿಂದ ಪೃಥ್ವಿಯು ಹುಟ್ಟಿರುವುದೋ, ಆ ಇವನೇ ಎಲ್ಲ ಪ್ರಾಣಿಗಳ ಅಂತರಾತ್ಮನು.**

ಹಿಂದಿನ ಮಂತ್ರದಲ್ಲಿ ಹೇಳಿರುವ ಉಪಮೆಯನ್ನು ಸ್ವಲ್ಪ ಮುಂದುವರಿಸಿ ಹೇಳಬಹುದಾದರೆ ಬಟ್ಟೆಯ ಮೇಲೆ ನೇಯ್ದಿರುವ ಒಟ್ಟಾರೆ ಚಿತ್ತಾರಗಳೆಲ್ಲ ಕೇವಲ ಹತ್ತಿಯೆಂದೇ ವರ್ಣಿಸಬಹುದು. ಆ ರೀತಿ ಈ ಮಂತ್ರದಲ್ಲಿ ಕಾರ್ಯರೂಪದ

ವಿವರಗಳನ್ನು ಅವು ಯಾವುದರಿಂದ ಪ್ರಕಟವಾಗಿರುವುವೋ ಆ ಕಾರಣಕ್ಕೇ ಅನ್ವಯಿಸಿ ಹೇಳಿದೆ.

ನಾವು ಎಚ್ಚರದಲ್ಲಿರುವಾಗ ಜ್ಞಾನೇಂದ್ರಿಯಗಳು ಕೆಲಸ ಮಾಡಿ ನಮಗೆ ಬಾಹ್ಯವಸ್ತುಗಳ ಅನುಭವವನ್ನು ತಂದುಕೊಡುವುವು. ಆಗ ಆತ್ಮವು ನಮ್ಮ ಸ್ಥೂಲದೇಹದೊಡನೆ ತಾದಾತ್ಮ್ಯ ಹೊಂದಿರುವ ಸ್ಥಿತಿ. ಹೀಗೆ ಪರಬ್ರಹ್ಮ ಅಥವಾ ಆತ್ಮವು ವ್ಯಕ್ತಿಶಃ ಸ್ಥೂಲದೇಹದೊಡನೆ ತಾದಾತ್ಮ್ಯ ಪಡೆದಿರುವಾಗ ಅದನ್ನು "ವಿಶ್ವ" ಎಂದು ಕರೆಯುತ್ತಾರೆ. ಇದು ವ್ಯಷ್ಟಿಭಾವ. ಆತ್ಮವು ಸಮಸ್ತ ಜೀವಿಗಳನ್ನೊಳಗೊಂಡ ಪ್ರಪಂಚದೊಡನೆಯೇ ತಾದಾತ್ಮ್ಯ ಹೊಂದುವುದಾದರೆ ಆ ಸ್ಥಿತಿಯನ್ನು ವೇದಾಂತಿಗಳು 'ವಿರಾಟ್' ಎನ್ನುತ್ತಾರೆ. ಇದು ಸಮಷ್ಟಿಭಾವ. ಈ ಮಂತ್ರದಲ್ಲಿ ಪರಬ್ರಹ್ಮನ ವಿರಾಡ್ರೂಪದ ವರ್ಣನೆ ಮಾಡಿದೆ.

ಪ್ರಪಂಚದ ಎಲ್ಲಾ ಮತಧರ್ಮಗಳ ಸಂತರೂ, ಮಹಾಬೋಧಕರೂ ಹೇಳಿರುವುದು ಇದೇ: ಅಹಂಕಾರದಿಂದ ಹೆಮ್ಮೆಪಡುತ್ತಾ 'ನಾನು ನಾನು' ಎಂದು ಹೇಳಿಕೊಳ್ಳುವ ಪ್ರತ್ಯೇಕವಾದ, ವ್ಯಕ್ತಿಗತವಾದ 'ಅಹಂ' ವಸ್ತುವು ಕೇವಲ ಹುಸಿತೋರಿಕೆ. ಪೊಳ್ಳು ಡಂಭಾಚಾರದ ಅಸದ್ವಸ್ತು. ಅದು ನಿಜವಾಗಿ ಇರುವುದಲ್ಲ. ವ್ಯಷ್ಟಿಯಾಗಿ ತೋರುವ ವ್ಯಕ್ತಿ ಮತ್ತು ಪಿಂಡಾಂಡಗಳು ನಿಜವಾಗಿಯೂ ಸಮಷ್ಟಿಚೇತನದ ಬ್ರಹ್ಮಾಂಡದ ರೂಪಗಳೇ ಹೊರತು ಬೇರೆ ವಸ್ತುಗಳಲ್ಲ. ಅವುಗಳಿಗೆ ಸಮಷ್ಟಿಚೇತನವನ್ನು ಬಿಟ್ಟು ಬೇರೆ ಪ್ರತ್ಯೇಕ ಅಸ್ತಿತ್ವವೇ ಇಲ್ಲ. ಆ ತತ್ತ್ವವನ್ನೇ ವೇದಾಂತಶಾಸ್ತ್ರವು ಮೊದಲಿಂದ ಕೊನೆಯವರೆಗೂ ಸಾಧಕರಿಗೆ ಸಾರುತ್ತಿರುವುದು. ಈ ತತ್ತ್ವಸಾರವನ್ನು ಇಲ್ಲಿ ಸ್ವಲ್ಪ ಆಲಂಕಾರಿಕವಾಗಿ, "ದ್ಯುಲೋಕವೇ ಅವನ ಶಿರ, ಚಂದ್ರಸೂರ್ಯರೇ ಅವನ ಕಣ್ಣುಗಳು, ಆಕಾಶವೇ ಅವನ ಕಿವಿ." ಇತ್ಯಾದಿಯಾಗಿ ಹೇಳಿದೆ.

ವೇದಾಂತದ ಪರಿಭಾಷೆಯಲ್ಲಿ ಕಣ್ಣಿಗೆ ಅಭಿಮಾನಿ ದೇವತೆ ಸೂರ್ಯ. ಕಿವಿಗೆ (ಶಬ್ದಕ್ಕೆ) ಅಭಿಮಾನಿ ದೇವತೆ ದಿಕ್ಕುಗಳು (ಆಕಾಶ). ಈ ಮಾರ್ಮಿಕ ಅರ್ಥವನ್ನು ಅರಿಯದ ಪಾಶ್ಚಾತ್ಯರಿಗಾಗಲಿ, ಹಿಂದೂಶಾಸ್ತ್ರವನ್ನರಿಯದ ನಮ್ಮವರಿಗಾಗಲಿ ಈ ಮಾತುಗಳು ಅತಿ ವಿಚಿತ್ರವಾಗಿ ತೋರಬಹುದು. ಕಣ್ಣುಗಳು ಸೂರ್ಯನಿಂದ ಅನುಗ್ರಹೀತವಾದವು ಎಂದು ವೇದಾಂತ ಶಾಸ್ತ್ರವು ಹೇಳಿದರೆ, ಬೆಳಕಿನ ಮಾಧ್ಯಮದಲ್ಲಿ ಮಾತ್ರ ಕಣ್ಣುಗಳು ತಮ್ಮ ಕೆಲಸವನ್ನು ನಿರ್ವಹಿಸಬಲ್ಲವು ಎಂಬುದು ಇಂಗಿತ. ಹಾಗೆಯೇ ಶಬ್ದವು ಅಂತರಿಕ್ಷದಲ್ಲಿ ಮಾತ್ರ ಅಲೆಅಲೆಯಾಗಿ ಸಾಗಿ ನಮಗೆ ಕೇಳಿಬರಲು ಸಾಧ್ಯ. ಆಕಾಶವಿದ್ದರೆ ಮಾತ್ರ ಶಬ್ದ. ಶಬ್ದವಿದ್ದಾಗ ಮಾತ್ರ ಕಿವಿಗಳ ಕೆಲಸ. ಆದ್ದರಿಂದ ಈ ಮಂತ್ರವು ಅಮೂರ್ತವಾದದ್ದನ್ನು ಮೂರ್ತವಸ್ತುವಿಗೆ ಅನ್ವಯಿಸುವ ಮಾತುಗಳಲ್ಲಿ ವಿವರಿಸಲು ಯತ್ನಿಸಿದೆ.

## ಅಕ್ಷರದಿಂದ ಚರಾಚರವಸ್ತುಗಳ ಉತ್ಪತ್ತಿಕ್ರಮ

**ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ**
**ಸೋಮಾತ್ ಪರ್ಜನ್ಯ ಓಷಧಯಃ ಪೃಥಿವ್ಯಾಮ್ ।**
**ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ**
**ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ॥** ೫

**ಯಸ್ಯ** – ಯಾರಿಗೆ, **ಸೂರ್ಯಃ** – ಸೂರ್ಯನು, **ಸಮಿಧಃ** – ಸಮಿತ್ತೋ, **ತಸ್ಮಾತ್** – ಆ ಪುರುಷನಿಂದಲೇ, **ಅಗ್ನಿಃ** – ಅಗ್ನಿಯು (ದ್ಯುಲೋಕವು) ಹುಟ್ಟುತ್ತದೆ. **ಸೋಮಾತ್** – ಸೋಮನಿಂದ, **ಪರ್ಜನ್ಯಃ** – ಮೋಡಗಳು, **ಪೃಥಿವ್ಯಾಃ** – ಪೃಥ್ವಿಯಿಂದ, **ಓಷಧಯಃ** – ಸಸ್ಯಗಳು (ಹುಟ್ಟುತ್ತವೆ), **ಪುಮಾನ್** – ಪುರುಷನು, **ಯೋಷಿತಾಯಾಂ** – ಸ್ತ್ರೀಯಲ್ಲಿ, **ರೇತಃ** – ರೇತಸ್ಸನ್ನು, **ಸಿಂಚತಿ** – ಚಿಮುಕಿಸುತ್ತಾನೆ, ಹೀಗೆ, **ಬಹ್ವೀಃ ಪ್ರಜಾಃ** – ಅನೇಕ ಪ್ರಜೆಗಳು, **ಪುರುಷಾತ್** – ಪರಮಪುರುಷನಿಂದ, **ಸಂಪ್ರಸೂತಾಃ** – ಹುಟ್ಟುತ್ತಾರೆ.

(೫) ಯಾರಿಗೆ ಸೂರ್ಯನು ಸಮಿತ್ತೋ ಆ ಪುರುಷನಿಂದಲೇ ಅಗ್ನಿಯು (ದ್ಯುಲೋಕವು) ಹುಟ್ಟುತ್ತದೆ. ಸೋಮನಿಂದ ಪರ್ಜನ್ಯನು, ಪೃಥ್ವಿಯಲ್ಲಿ ಸಸ್ಯಗಳು (ಹುಟ್ಟುತ್ತವೆ). ಗಂಡಸು ಸ್ತ್ರೀಯಲ್ಲಿ ರೇತಸ್ಸನ್ನು ಚಿಮುಕಿಸುತ್ತಾನೆ. ಹೀಗೆ ಅನೇಕ ಪ್ರಜೆಗಳು ಪರಮಪುರುಷನಿಂದ ಹುಟ್ಟಿರುತ್ತಾರೆ[೧]

ಶಾಸ್ತ್ರಜ್ಞಾನವಿಲ್ಲದ ಪಾಮರರಲ್ಲಿ ಈ ರೀತಿಯ ವಾಕ್ಯಗಳು ಮನಸ್ಸಿನ ಗೊಂದಲ, ಕಸಿವಿಸಿಗಳನ್ನು ಹುಟ್ಟಿಸುತ್ತವೆ. ಅಂತಹ ಸಂದಿಗ್ಧ ಸಂದರ್ಭಗಳಲ್ಲೇ ನಮಗೆ ಶ್ರೋತ್ರಿಯನೂ, ಶಾಸ್ತ್ರಪರಿಣತನೂ ಆದ ಗುರುವಿನ ಮಾರ್ಗದರ್ಶನ ಅಗತ್ಯವಾಗುವುದು.

ಈ ಮಂತ್ರದ ಅರ್ಥವನ್ನು ಸ್ಪಷ್ಟವಾಗಿ ತಿಳಿಯಬೇಕಾದರೆ ಛಾಂದೋಗ್ಯ ಉಪನಿಷತ್ತಿನಲ್ಲಿ ಉಕ್ತವಾಗಿರುವ 'ಪಂಚಾಗ್ನಿವಿದ್ಯೆ'ಯನ್ನು[೨] ಅಧ್ಯಯನ ಮಾಡಬೇಕು. ಅಲ್ಲಿ ಹೇಳಿರುವ ಅಗ್ನಿ ಉಪಾಸನೆಯನ್ನು ಅನುಷ್ಠಾನ ಮಾಡಬೇಕು. ಇಲ್ಲಿ ಶ್ರುತಿಮಾತೆಯು ನಮಗೆ ಉಪಾಸನಾ ವಿದ್ಯೆಯ ಪರಿಚಯ ಮಾಡಿಕೊಡುತ್ತಿದ್ದಾಳೆ.

**ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ** –

''ಯಾವಾತನಿಗೆ ಸೂರ್ಯನೇ ಸಮಿತ್ತೋ ಆತನಿಂದಲೇ ಅಗ್ನಿಯು

---

[೧] ದ್ಯುಲೋಕ ಮೊದಲನೆಯ ಅಗ್ನಿ, ಪರ್ಜನ್ಯ ಎರಡನೆಯ ಅಗ್ನಿ, ಪೃಥ್ವಿ ಮೂರನೆಯ ಅಗ್ನಿ, ಪುರುಷ ನಾಲ್ಕನೆಯ ಅಗ್ನಿ, ಸ್ತ್ರೀ ಐದನೆಯ ಅಗ್ನಿ. ಈ ಪಂಚಾಗ್ನಿಗಳ ಮೂಲಕ ಪರಮ ಪುರುಷನಿಂದ ಲೋಕದ ಸಕಲ ಪ್ರಾಣಿಗಳೂ ಉತ್ಪತ್ತಿಯಾಗಿವೆ ಎಂದು ಈ ಮಂತ್ರದಲ್ಲಿ ಹೇಳಿದೆ.

[೨] ಛಾಂದೋಗ್ಯೋಪನಿಷತ್ತಿನ ೫ನೆಯ ಅಧ್ಯಾಯ, ೩ನೆಯ ಖಂಡದಿಂದ ೧೦ನೆಯ ಖಂಡದವರೆಗಿನ ವಿಭಾಗಗಳನ್ನು ನೋಡಿ ಮತ್ತು ಬೃಹದಾರಣ್ಯಕದ ೬-೨-೯ ರಿಂದ ೧೪ ರವರೆಗೂ ಇರುವ ಭಾಗಗಳನ್ನು ನೋಡಿ.

ಹುಟ್ಟುತ್ತದೆ.'' – ಎಂಬುದು ವಾಕ್ಯದ ಸರಳವಾದ ಅರ್ಥ. ಸಾಧಕನು ಉಪಾಸನೆಯ ಮೂಲಕ ಪರಿಶುದ್ಧಾತ್ಮನಾಗಲೆಂಬ ಉದ್ದೇಶದಿಂದ ಈ ವಾಕ್ಯವನ್ನು ಇಲ್ಲಿ ಹೇಳಿದೆ. ಇಲ್ಲಿ 'ಅಗ್ನಿ' ಎಂದರೆ ದ್ಯುಲೋಕ. ದ್ಯುಲೋಕವನ್ನು ವಿಸ್ತಾರವಾದ ಆಕಾಶಕ್ಕೆ ಪ್ರತೀಕವಾಗಿ ಹೇಳಿದೆ. ನಮ್ಮ ಮನಸ್ಸು ಬುದ್ಧಿಗಳು ದೇಶ, ಕಾಲ, ನಿಮಿತ್ತಗಳ ಮಾಧ್ಯಮದಲ್ಲಿ ಮಾತ್ರ ಕೆಲಸ ಮಾಡುವುದೆಂಬುದು ನಮಗೆ ತಿಳಿದ ವಿಷಯವೇ. ದೇಶದ ಅಂದರೆ ನಿರ್ದಿಷ್ಟವಾದ ಪ್ರದೇಶದ ಭಾವನೆ ನಮಗೆ ಬಂದಿರುವುದು ನಮ್ಮ ಪೂರ್ವಕರ್ಮಗಳ ಫಲವಾಗಿ. ನಮ್ಮ ಪೂರ್ವಾರ್ಜಿತ ಕರ್ಮಫಲಗಳನ್ನು ಅನುಭವಿಸಿ ನಮ್ಮ ವಾಸನೆಗಳನ್ನು ತೀರಿಸಿಕೊಳ್ಳುವುದಕ್ಕಾಗಿ ನಾವು ಈ ಲೋಕದಲ್ಲಿ ಜನ್ಮ ತಾಳಿದ್ದೇವೆ. ನಾವು ಯಾವಾಗ ದೇಶ–ಕಾಲಗಳ ಬಂಧನವನ್ನು ಅತಿಕ್ರಮಿಸಿ ಹೋಗುತ್ತೇವೆಯೋ ಆಗ ನಮಗೆ ಲೋಕವಾಗಲಿ, ಇದರ ಅನುಭವಗಳಾಗಲಿ ನಮ್ಮ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಬೀರಲಾರದು.

'ಸೂರ್ಯ' ಎನ್ನುವ ಶಬ್ದಕ್ಕೆ ತಾತ್ತ್ವಿಕವಾಗಿ ವಿಶೇಷಾರ್ಥವಿದೆ ಎಂಬುದನ್ನು ನಾವು ಹಿಂದೆಯೇ ತಿಳಿದಿದ್ದೇವೆ. ಉಸಿರಾಡುವ ಕ್ರಿಮಿಕೀಟಗಳಿಂದ ಮನುಷ್ಯನವರೆಗೆ ಇರುವ ಸಮಸ್ತ ಜೀವಿಗಳ ಸಮಷ್ಟಿ ಕರ್ಮಫಲವನ್ನು ಸೂರ್ಯನು ಪ್ರತಿನಿಧಿಸುತ್ತಾನೆ, ಎಂಬುದು ಇಲ್ಲಿನ ತಾತ್ತ್ವಿಕ ಭಾವಾರ್ಥ. *ಇಲ್ಲಿ ಚಂದ್ರನನ್ನು ಒಂದು ಪ್ರತ್ಯೇಕ ಲೋಕವಾಗಿ ಭಾವಿಸಿ ಅದಕ್ಕೆ ಸೋಮವೆಂಬ ಹೆಸರನ್ನು ಕೊಡಲಾಗಿದೆ. ದೇವತೆಗಳು ಶ್ರದ್ಧೆಯನ್ನೇ ಹೋಮ ಮಾಡಿದಾಗ ಸೋಮರಾಜನು ಆ ಆಹುತಿಯಿಂದ ಹುಟ್ಟುತ್ತಾನೆ, ಎಂದು ತಿಳಿಸುತ್ತದೆ. ಸೋಮದಿಂದುಂಟಾಗುವ ಅಗ್ನಿಯನ್ನು ಪರ್ಜನ್ಯಾಗ್ನಿ ಎಂದು ಭಾವಿಸಲಾಗಿದೆ. ಈ ಅಗ್ನಿಗೆ ವೃಷ್ಟಿಯೇ ಸಮಿತ್ತು.

**ಸೋಮಾತ್ ಪರ್ಜನ್ಯಃ ಓಷಧಯಃ ಪೃಥಿವ್ಯಾಮ್ –**

ಸೋಮನಿಂದ (ಚಂದ್ರನಿಂದ) ಪರ್ಜನ್ಯ, ಕಾರ್ಮೋಡ. ಇದನ್ನು ಎರಡನೆಯ ಮಹಾಗ್ನಿ ಎಂದು ಭಾವಿಸಬೇಕು. ಇಲ್ಲಿ ದ್ಯುಲೋಕವೇ ಒಂದು ಅಗ್ನಿ ಎಂದು ಭಾವಿಸಲಾಗಿದೆ. ಅಗ್ನಿಗೆ ಆದಿತ್ಯನೇ ಸಮಿತ್ತು, ಏಕೆಂದರೆ ಸೂರ್ಯನಿಂದಲೇ ಅಲ್ಲವೆ ದ್ಯುಲೋಕವು ಪ್ರಕಾಶಿಸುತ್ತಿರುವುದು! ಸೂರ್ಯನು ಉರಿದು ಪ್ರಕಾಶಿಸುತ್ತಿರುವುದರಿಂದಲೇ ಅವನನ್ನು ಸಮಿತ್ತು ಎಂದು ಹೇಳಿದೆ. ಹೇಗೆ ಸಮಿತ್ತು ಉರಿದು ಹೋಮಕುಂಡವನ್ನು ಪ್ರಕಾಶಿಸುವುದೋ ಹಾಗೆಯೇ ಸೂರ್ಯನೆಂಬ ಸಮಿತ್ತು ಜ್ವಲಿಸಿ ದ್ಯುಲೋಕವೆಂಬ ಅಗ್ನಿಯನ್ನು ಬೆಳಗುವುದು. ಸೋಮನಿಂದ ಉಂಟಾಗುವ ಪರ್ಜನ್ಯಾಗ್ನಿಯಿಂದ ಮಳೆ ಸುರಿಯುವುದು. ಮಳೆಯಿಂದ ಬೀಜಗಳು ಮೊಳೆಯುವುವು. ಈ ಸಸ್ಯಗಳನ್ನು ತಿಂದು ಮನುಷ್ಯನು ವೀರ್ಯವಂತನಾಗುತ್ತಾನೆ. ಈ ವೀರ್ಯಾಣುಗಳು ಸ್ತ್ರೀಯ ಗರ್ಭವನ್ನು ಸೇರಿ ಸಂತತಿ ಬೆಳೆಯುವುದು. ಈ ರೀತಿಯಲ್ಲಿ ನಾನಾ ಜೀವಿಗಳಿಂದ ಕೂಡಿರುವ ಜಗತ್ತು ಉಂಟಾಗುವುದು. ಇದನ್ನೇ ಶ್ರುತಿಯೂ ಹೇಳುತ್ತಿದೆ.

---

*ಛಾಂದೋಗ್ಯೋಪನಿಷತ್ತು ಐದನೆಯ ಅಧ್ಯಾಯ, ಖಂಡ ನಾಲ್ಕು, ೧-ಎರಡನ್ನು ನೋಡಿ.

ಅಲ್ಲದೆ ಲತಾ, ಮೂಲಿಕೆ ಮುಂತಾದ ಓಷಧಿಗಳಲ್ಲಿ ಮತ್ತು ಬೀಜಗಳಲ್ಲಿ ಸಾರವನ್ನು ಉತ್ಪತ್ತಿಮಾಡುವುದು ಸೋಮನು ಎಂದು ಹಿಂದಿನಿಂದಲೂ ಬಂದ ನಂಬಿಕೆ. ಪಾಶ್ಚಾತ್ಯರು ಇದಕ್ಕೆ ಸಂಬಂಧಪಟ್ಟಂತೆ ಸದ್ಯಕ್ಕೆ ಯಾವ ಮಾಹಿತಿಯನ್ನೂ ಕೊಟ್ಟಿಲ್ಲ. ಆದರೂ ಹಗಲಿನಲ್ಲಿ ಸೂರ್ಯನ ಬಿಸಿಲಿನಲ್ಲಿ ಒಣಗಿ, ರಾತ್ರಿಯಲ್ಲಿ ಬೆಳದಿಂಗಳ ಶೀತಲ ರಶ್ಮಿಗಳಿಗೆ ಒಡ್ಡಿರುವ ಬೀಜಗಳು ಬಿತ್ತನೆಗೆ ಉತ್ತಮವಾದವು ಎಂಬುದು ಪ್ರಪಂಚದ ಎಲ್ಲಾ ರೈತಾಪಿ ಜನಗಳಲ್ಲಿಯೂ ಇರುವ. ನಂಬಿಕೆ

## ಕರ್ಮ ಮತ್ತು ಕರ್ಮಫಲಗಳು

**ತಸ್ಮಾದೃಚಃ ಸಾಮ ಯಜೂಂಷಿ ದೀಕ್ಷಾ**
**ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।**
**ಸಂವತ್ಸರಶ್ಚ ಯಜಮಾನಶ್ಚ ಲೋಕಾಃ**
**ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥** ೬

**ತಸ್ಮಾತ್** – ಆ ಪುರುಷನಿಂದಲೇ, **ಋಚಃ** – ಋಕ್ಕುಗಳು, **ಸಾಮ** – ಸಾಮವು, **ಯಜೂಂಷಿ** – ಯಜುಸ್ಸುಗಳು, **ದೀಕ್ಷಾ** – ದೀಕ್ಷೆಗಳು, **ಯಜ್ಞಾಃ** – ಯಜ್ಞಗಳು, **ಸರ್ವೇ ಕ್ರತವಃ** – ಎಲ್ಲ ಯಾಗಗಳು, **ದಕ್ಷಿಣಾಃ** – ದಕ್ಷಿಣೆಗಳು, **ಚ** – ಮತ್ತು, **ಸಂವತ್ಸರಃ ಚ** – ಸಂವತ್ಸರವು, **ಯಜಮಾನಃ ಚ** – ಯಜಮಾನನು, **ಸೋಮಃ** – ಸೋಮನು, **ಯತ್ರ** – ಎಲ್ಲಿ, **ಪವತೇ** – ಪವಿತ್ರಗೊಳಿಸುವನೋ, **ಯತ್ರ** – ಎಲ್ಲಿ, **ಸೂರ್ಯಃ** – ಸೂರ್ಯನು (ತಾಪವನ್ನುಂಟು ಮಾಡುತ್ತಾನೋ) **ಲೋಕಾಃ** – ಆ ಲೋಕಗಳು (ಉಂಟಾಗುತ್ತವೆ).

(೬) ಆ ಪುರುಷನಿಂದಲೇ ಋಕ್ಕುಗಳು (ಗಾಯತ್ರಿಯೇ ಮುಂತಾದ ಛಂದಸ್ಸಿನಿಂದ ಕೂಡಿರುವ ಮಂತ್ರಗಳು), ಸಾಮವು (ಸ್ತೋಭವೇ ಮುಂತಾದ ಗೀತೆಗಳಿಂದ ಕೂಡಿರುವುದು), ಯಜುಸ್ಸುಗಳು (ವಾಕ್ಯರೂಪದಲ್ಲಿರುವ ಮಂತ್ರಗಳು), ದೀಕ್ಷೆಗಳು (ಕರ್ತೃವು ಅನುಸರಿಸಬೇಕಾದ ನಿಯಮಗಳು), ಯಜ್ಞಗಳು (ಅಗ್ನಿಹೋತ್ರವೇ ಮುಂತಾದವು), ಮತ್ತು ಎಲ್ಲಾ ಕ್ರತುಗಳು (ಪಶುವನ್ನು ಕಟ್ಟುವ ಕಂಬವನ್ನು ಉಪಯೋಗಿಸಿ ಮಾಡುವ ಯಾಗಗಳು), ದಕ್ಷಿಣೆಗಳು (ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವುದು), ಸಂವತ್ಸರವು (ಕರ್ಮಕ್ಕೆ ಬೇಕಾಗುವ ಕಾಲವು) ಯಜಮಾನನು (ಕರ್ಮವನ್ನು ಮಾಡುವವನು), ಎಲ್ಲಿ ಸೋಮನು ಪವಿತ್ರಗೊಳಿಸುವನೋ ಎಲ್ಲಿ ಸೂರ್ಯನು ತಪಿಸುತ್ತಿರುವನೋ ಆ ಲೋಕಗಳೂ, ಕರ್ಮದ ಫಲವಾಗಿರುವ ಭೋಗಸ್ಥಾನಗಳೂ ಉಂಟಾಗುತ್ತವೆ.

**ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ**
**ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।**
**ಪ್ರಾಣಾಪಾನೌ ವ್ರೀಹಿಯವೌ ತಪಶ್ಚ**
**ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥** ೭

**ತಸ್ಮಾಚ್ಚ** – ಆ ಪುರುಷನಿಂದಲೇ, **ದೇವಾಃ** – ದೇವತೆಗಳೂ, **ಬಹುಧಾ** – ವಿಧವಿಧವಾಗಿ, **ಸಂಪ್ರಸೂತಾಃ** – ಹುಟ್ಟಿರುತ್ತಾರೆ, **ಸಾಧ್ಯಾಃ** – ಸಾಧ್ಯರೂ, **ಮನುಷ್ಯಾಃ**

— ಮನುಷ್ಯರೂ, **ಪಶವಃ** — ಪಶುಗಳೂ, **ವಯಾಂಸಿ** — ಪಕ್ಷಿಗಳೂ, **ಪ್ರಾಣಾಪಾನೌ** — ಪ್ರಾಣ ಅಪಾನಗಳೂ, **ವ್ರೀಹಿಯವೌ** — ಹವಿಸ್ಸಿಗೆ ಬೇಕಾಗುವ ಸಾಮಗ್ರಿಗಳೂ (ಭತ್ತ, ಜವೆ — ಇವು), **ತಪಃ ಚ** — ತಪಸ್ಸೂ, **ಶ್ರದ್ಧಾ** — ಶ್ರದ್ಧೆಯೂ, **ಸತ್ಯಂ** — ಸತ್ಯವೂ, **ಬ್ರಹ್ಮಚರ್ಯಂ** — ಬ್ರಹ್ಮಚರ್ಯವೂ **ವಿಧಿಃ ಚ** — ವಿಧಿಯೂ (ಹುಟ್ಟಿವೆ).

(೭) ಆ ಪುರುಷನಿಂದಲೇ ದೇವತೆಗಳು ಬಹುಪ್ರಕಾರವಾಗಿ ಹುಟ್ಟಿರುತ್ತಾರೆ ಸಾಧ್ಯರು (ಒಂದು ವಿಧವಾದ ದೇವತೆಗಳು) ಮನುಷ್ಯರು, ಪ್ರಾಣಿಗಳು, ಪ್ರಾಣ ಅಪಾನಗಳು, ವ್ರೀಹಿ ಯವಗಳು (ಹವಿಸ್ಸಿಗೆ ಬೇಕಾಗುವ ಬತ್ತ, ಜವೆ), ತವಸ್ಸು (ಕರ್ಮಕ್ಕೆ ಸಂಸ್ಕಾರ ರೂಪವಾಗಿ ಫಲವನ್ನು ಕೊಡತಕ್ಕದ್ದು), ಶ್ರದ್ಧೆ (ಚಿತ್ತಪ್ರಸನ್ನತೆ ಮತ್ತು ಆಸ್ತಿಕ್ಯಬುದ್ಧಿ), ಸತ್ಯ (ಯಾವಾಗಲೂ ನಿಜವನ್ನೇ ಹೇಳುವುದು), ಬ್ರಹ್ಮಚರ್ಯ (ಮೈಥುನವನ್ನು ನಡೆಸದಿರುವುದು) ಮತ್ತು ವಿಧಿ (ವೇದೋಕ್ತ ಕರ್ತವ್ಯಗಳು) ಇವುಗಳು ಹುಟ್ಟಿವೆ

ಈ ಎರಡು ಮಂತ್ರಗಳಲ್ಲಿ ಹೇಗೆ ಸೂಕ್ಷ್ಮವಸ್ತುಗಳಿಂದ ಸ್ಥೂಲವಸ್ತುಗಳು ಉತ್ಪನ್ನವಾಗಿವೆ ಮತ್ತು ಅದರ ಫಲಿತಾಂಶವಾಗಿ ನಾವಿರುವ ಭೋಗಪ್ರಪಂಚ, ರಾಗದ್ವೇಷ ಭಾವಗಳ ಮಾನಸಿಕ ಹೊಯ್ದಾಟ — ಇವು ಉತ್ಪನ್ನವಾಗಿವೆ ಎಂಬುದನ್ನು ವಿವರಿಸಿದೆ. ಮೊದಲನೆಯ ಮಂತ್ರವು ಯಜ್ಞಯಾಗಾದಿಗಳ ಫಲವಾಗಿ ಉಂಟಾಗುವ ಲೋಕಗಳ ವಿವರಣೆ ಕೊಡುತ್ತದೆ. ಇಲ್ಲಿ ಋಜ್ಞಯಾಗಾದಿಗಳೆಂದರೆ ನಾವು ಮಾಡುವ ಸಕಲ ಕರ್ಮಗಳು ಎಂದು ಅರ್ಥ ಮಾಡಬೇಕು. ನಮ್ಮ ಕರ್ಮಗಳಿಂದ ನಾವು ನಮ್ಮ ಬದುಕಿಗೆ ಮತ್ತು ಅನುಭವಕ್ಕೆ ಯೋಗ್ಯವಾದ ಕಾರ್ಯಕ್ಷೇತ್ರಗಳನ್ನು ನಿರ್ಮಿಸಿಕೊಳ್ಳುತ್ತೇವೆ. ನಾವಿರುವ, ನಮ್ಮ ಅನುಭವದ ಇಹಲೋಕವನ್ನೇ ನಿರ್ದೇಶಿಸುತ್ತಿರುವುದು ಎಂದು ತಿಳಿಸಲು "ಯಾವ ಲೋಕದಲ್ಲಿ ಸೂರ್ಯಚಂದ್ರರು ಬೆಳಗಿ ಪವಿತ್ರಗೊಳಿಸುತ್ತಿರುವರೋ" ಎಂಬ ಮಾತುಗಳು ಸೂಚ್ಯವಾಗಿವೆ. ಈ ಭೂಮಿಯ ಮೇಲಿರುವ ನಮಗೆ ನಮ್ಮ ಮೇಲೆ ಹಾಗೂ ನಮ್ಮ ಸುತ್ತಮುತ್ತಲಿರುವ ಪ್ರಕೃತಿಯ ಮೇಲೆ ಸೂರ್ಯಚಂದ್ರರ ಪ್ರಭಾವ ಎಷ್ಟರಮಟ್ಟಿಗೆ ಇದೆ ಎಂಬುದು ಎಲ್ಲರಿಗೂ ವಿದಿತವಾದ ವಿಷಯವೇ. ನಮ್ಮ ನಡವಳಿಕೆ ಆಚರಣೆಗಳೂ, ಅಲ್ಲದೆ, ನಮ್ಮ ಮನಸ್ಸಿನ ಮೇಲೆ ಆಗುವ ಅವುಗಳ ಪರಿಣಾಮವೂ ಅಷ್ಟಿಷ್ಟಲ್ಲ.

ಎರಡನೆಯ ಮಂತ್ರದಲ್ಲಿ, ಲೋಕಗಳಲ್ಲಿರುವ ಕ್ರಿಮಿಕೀಟಗಳಿಂದ ಹಿಡಿದು ದೇವತೆಗಳವರೆಗೆ ಸಮಸ್ತ ಜೀವಿಗಳೂ ಅಕ್ಷರನೆನಿಸಿದ ಆ ಪರಮಪುರುಷನಿಂದಲೇ ಕ್ರಮವಾಗಿ ಬೇರೆ ಬೇರೆ ಹಂತಗಳಲ್ಲಿ ಉತ್ಪನ್ನವಾಗಿವೆ ಎಂಬುದನ್ನು ತಿಳಿಸುತ್ತದೆ. ಆಹಾರಕ್ಕೂ, ಹವಿಸ್ಸಿಗೂ ಬೇಕಾದ ಬತ್ತ, ಜವೆ ಮುಂತಾದ ಧಾನ್ಯಗಳೂ ಅವನಿಂದಲೇ ಉಂಟಾಗಿವೆ. ಬತ್ತ, ಜವೆ ಮುಂತಾದವನ್ನು ಹೇಳಿದನಂತರ ಉಪನಿಷತ್ ಋಷಿಗಳು ತಪಸ್ಸು, ಶ್ರದ್ಧೆ, ಸತ್ಯ — ಇವುಗಳನ್ನು ಉಲ್ಲೇಖಿಸಿರುವುದು ಕೆಲವು ವಿಮರ್ಶಕರಿಗೆ ಅವುಗಳ ಸಂಬಂಧ ತಿಳಿಯದಿರುವುದರಿಂದ ಗೊಂದಲಕ್ಕೆ ಎಡೆಮಾಡಿಕೊಟ್ಟಿದೆ. ಆಹಾರವು ಮನಸ್ಸಿನ ಚಿಂತನೆಯನ್ನು ವೃದ್ಧಿಗೊಳಿಸುತ್ತದೆ. ಯಾರಾದರೂ ಸುಮಾರು ದಿನಗಳಷ್ಟು ದೀರ್ಘಕಾಲ ಉಪವಾಸಮಾಡಿದರೆ ಅವರ ಮನಸ್ಸು ಯಾವ ಚಿಂತನೆ ಮಾಡಲೂ ಸಮರ್ಥವಾಗಿರದು. ಆಹಾರ ಸೇವನೆಯು ಸರಿಯಾದ ಪ್ರಮಾಣದಲ್ಲಿದ್ದರೇ ಚಿಂತನೆಗಳೂ, ಅವುಗಳ ಪ್ರವಾಹದ ವೇಗವೂ, ಅವುಗಳ ಔಚಿತ್ಯವೂ ಉತ್ತಮವಾಗಿರಬಲ್ಲವು.

ಒಂದು ಶ್ರೇಷ್ಠ ಧ್ಯೇಯದ ಕಡೆಗೆ ತತ್ಪರತೆಯಿಂದ, ಪ್ರೇಮಪೂರ್ವಕವಾಗಿ ಚಿಂತನೆಗಳನ್ನು ಹರಿಸಿದರೆ ಅವಕ್ಕೆ ಒಂದು ರೀತಿಯ ಶಕ್ತಿ ಮೈಗೂಡಿಕೊಳ್ಳುತ್ತದೆ. ಆಗ ಅದು ಶ್ರದ್ಧಾ, ಭಕ್ತಿ ಎಂದೆನಿಸಿಕೊಳ್ಳುತ್ತದೆ. ಶ್ರದ್ಧಾಭಕ್ತಿಗಳಿಂದ ಪರಮಾತ್ಮನನ್ನು ಕುರಿತು ನಿರಂತರವಾಗಿ ಚಿಂತಿಸಿದರೆ ಅದು ಧ್ಯಾನವೆನಿಸುತ್ತದೆ. ಆಧ್ಯಾತ್ಮಿಕ ಒಲವು ಇರುವವರು ಸತ್ಯಕ್ಕೆ ಒಲಿದವರೂ, ಸಂಯಮಶೀಲರೂ ಆಗುತ್ತಾರೆ. ಅಂತಹವರಿಗೆ ಶ್ರೇಷ್ಠ ಮೌಲ್ಯದ ಧ್ಯೇಯಗಳನ್ನು ಸಾಧಿಸುವುದೇ ಜೀವನದ ಗುರಿಯಾಗಿರುತ್ತದೆ. ಅವರ ನಡೆ, ನುಡಿ, ಕೃತಿಗಳೆಲ್ಲ ಅತ್ಯುತ್ತಮವಾಗಿರುವುದರಲ್ಲಿ ಸಂದೇಹವೇ ಇಲ್ಲ.

## ಪರಮಾತ್ಮನಿಂದ ಪ್ರಾಣಗಳ ಸೃಷ್ಟಿ

**ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್**
**ಸಪ್ತಾರ್ಚಿಷಃ ಸಮಿಧಃ ಸಪ್ತಹೋಮಾಃ ।**
**ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾ**
**ಗುಹಾಶಯಾ ನಿಹಿತಾಃ ಸಪ್ತ ಸಪ್ತ॥** ೮

**ಸಪ್ತ ಪ್ರಾಣಾಃ** – ಏಳು ಪ್ರಾಣಗಳು (ಕರಣಗಳು), **ಸಪ್ತ ಅರ್ಚಿಷಃ** – ಏಳು ಅರ್ಚಿಗಳು (ತಮ್ಮ ತಮ್ಮ ವಿಷಯಗಳನ್ನು ಬೆಳಗುವ ಶಕ್ತಿ ವಿಶೇಷಗಳು), **ಸಪ್ತ ಸಮಿಧಃ** – ಏಳು ಸಮಿತ್ತುಗಳು (ಏಳು ವಿಷಯಗಳು), **ಸಪ್ತ ಹೋಮಾಃ** – ಏಳು ಹೋಮಗಳು (ಏಳು ವಿಷಯಗಳ ಜ್ಞಾನಗಳು), **ಯೇಷು** – ಸಕಲ ಪ್ರಾಣಿಗಳಲ್ಲಿಯೂ, **ಸಪ್ತ ಸಪ್ತ** – ಏಳೇಳಾಗಿ, **ನಿಹಿತಾಃ** – ಇಟ್ಟಿರುವ, **ಗುಹಾಶಯಾಃ** – ಹೃದಯದಲ್ಲಿರುವ, **ಪ್ರಾಣಾಃ** – ಪ್ರಾಣಗಳು, **ಚರಂತಿ** – ಸಂಚರಿಸುವುವೋ, **ಇಮೇ** – ಈ, **ಸಪ್ತಲೋಕಾಃ** – ಏಳು ಲೋಕಗಳು (ಇಂದ್ರಿಯ ಸ್ಥಾನಗಳು), **ತಸ್ಮಾತ್** – ಆ ಪುರುಷನಿಂದಲೇ, **ಪ್ರಭವಂತಿ** – ಉಂಟಾಗುತ್ತವೆ.

**(೮) ಏಳು ಪ್ರಾಣಗಳು[೧], ಏಳು ಅರ್ಚಿಗಳು[೨], ಏಳು ಸಮಿತ್ತುಗಳು[೩], ಏಳು ಹೋಮಗಳು[೪], ಸಕಲ ಪ್ರಾಣಿಗಳಲ್ಲಿಯೂ ಏಳೇಳಾಗಿ ಹೃದಯದಲ್ಲಿರುವ ಪ್ರಾಣಗಳು ಸಂಚರಿಸುವುವೋ ಈ ಏಳು ಲೋಕಗಳು[೫] ಆ ಪುರುಷನಿಂದಲೇ ಉಂಟಾಗಿವೆ.**

ಅಕ್ಷರಶಃ ಅರ್ಥಮಾಡಿದರೆ ಈ ಮಂತ್ರವು ಹುರುಳಿಲ್ಲದಂತೆಯೂ ಗೊಂದಲಕ್ಕೀಡುಮಾಡುವಂತೆಯೂ ತೋರುತ್ತದೆ. ಉಪನಿಷತ್ ಮಂತ್ರಗಳ ಶೈಲಿಯೇ ಹಾಗೆ. ಅವುಗಳ ಪರಿಭಾಷೆಯೇ ಬೇರೆ. ಯಾವುದಾದರೂ ತಾಂತ್ರಿಕ ಭಾಷಣವನ್ನು ಕೇಳುವಾಗ ವಿದ್ಯಾರ್ಥಿಯು ಅಲ್ಲಲ್ಲಿ ಹೆಗ್ಗುರುತುಗಳನ್ನು

---

೧ ಏಳು ಪ್ರಾಣಗಳು - ಕಿವಿಗಳು (೨) ಕಣ್ಣುಗಳು (೨) ಮೂಗಿನ ಹೊಳ್ಳೆಗಳು (೨) ನಾಲಗೆ (೧)
೨ ಏಳು ಅರ್ಚಿಗಳು - ವಿಷಯಗಳನ್ನು ಬೆಳಗುವ ಶಕ್ತಿಗಳು. ಉದಾ: ನೋಟದ ಶಕ್ತಿ ಮುಂತಾದವು.
೩. ಏಳು ಸಮಿತ್ತುಗಳು - ಏಳು ಕರಣಗಳಿಗೆ ಸಂಬಂಧಪಟ್ಟ ವಿಷಯಗಳು.
೪ ಏಳು ಹೋಮಗಳು - ಏಳು ವಿಷಯಗಳ ಅರಿವುಗಳು.
೫ ಏಳು ಲೋಕಗಳು ಇಂದ್ರಿಯ ಗೋಲಕಗಳಾದ ಕಣ್ಣು ಕಿವಿ ಮುಂತಾದವು.

ಮಾಡಿಕೊಂಡಂತೆ ಭಾಸವಾಗುತ್ತದೆ. ಭಾಷಣವನ್ನು ಪೂರ್ಣವಾಗಿ ಕೇಳದಿರುವ ಮತ್ತೊಬ್ಬರು ಅದನ್ನು ಓದಿದರೆ ಅವರಿಗೆ ಅದು ಅರ್ಥವಿಲ್ಲದ ಬಾಲಭಾಷೆಯಂತೆ ತೋರುವುದು ಸಹಜ.

ಪರಮಾರ್ಥವಾದ ಅಕ್ಷರದಿಂದ ತಲೆಯಲ್ಲಿ ಏಳು ಪ್ರಾಣಗಳು ಅವತರಿಸಿವೆ. ಎರಡು ಕಣ್ಣುಗಳು, ಮೂಗಿನ ಎರಡು ಹೊಳ್ಳೆಗಳು, ಎರಡು ಕಿವಿಗಳು ಮತ್ತು ಒಂದು ಬಾಯಿ.[೧] ಸಪ್ತ ಜ್ವಾಲೆಗಳು ಎಂದು ಹೇಳಿರುವುದು ತಮಗೆ ಸಂಬಂಧಿಸಿರುವ ಹಾಗೂ ತಮ್ಮ ಗೋಚರಕ್ಕೆ ತರುವ ಏಳು ಜ್ಞಾನಗ್ರಹಣ ಕರಣಗಳು. ಕಣ್ಣುಗಳ ಮೂಲಕ ಗ್ರಹಣಶಕ್ತಿಯು ಹೊರಹೊಮ್ಮಿ ಬಣ್ಣ, ರೂಪಗಳನ್ನು ಗ್ರಹಿಸುತ್ತದೆ. ಕಿವಿಗಳ ಮೂಲಕ ಪ್ರವಹಿಸುವ ಶಕ್ತಿಯು ಶಬ್ದವನ್ನು ನಮ್ಮ ತಿಳಿವಿಗೆ ತರುತ್ತದೆ. ಹಾಗೆಯೇ ಪ್ರತಿಯೊಂದು ಇಂದ್ರಿಯವೂ ತನತನಗೆ ಸಂಬಂಧಪಟ್ಟ ವಿಷಯಗಳ ವಿವರಗಳನ್ನು ಶೇಖರಿಸುತ್ತದೆ. ಆದರೆ ಆಯಾ ಇಂದ್ರಿಯ ಗೋಳಕವು ತನಗೆ ಅನ್ವಯಿಸುವ ವಿಷಯವನ್ನು ಮಾತ್ರ ಕುರಿತು ಗ್ರಹಿಸಬಲ್ಲದೇ ಹೊರತು ಬೇರೆ ಇಂದ್ರಿಯದ ವಿಷಯವನ್ನು ಗ್ರಹಿಸದು. ಕಿವಿಗಳಿಂದ ನಾವು ನೋಡಲಾರೆವು. ಕಣ್ಣುಗಳಿಂದ ಶಬ್ದ ಕೇಳಲಾರೆವು. ಹಾಗೆಯೇ ಉಳಿದ ಇಂದ್ರಿಯಗಳೂ ತಮ್ಮ ತಮ್ಮ ವಿಷಯಗಳಿಗೆ ಸೀಮಿತವಾಗಿವೆ. ಬೆಂಕಿಯು ಉರಿಯಬೇಕಾದರೆ ಅದಕ್ಕೆ ಸರಿಯಾದ ಇಂಧನವಿರಬೇಕು. ಈ ವಿಷಯಗ್ರಹಣಕಿರಣಗಳಿಗೆ ಆಯಾ ವಸ್ತುಗಳೇ ಇಂಧನ. ಶಬ್ದವೇ ಇಲ್ಲವಾಗಿದ್ದರೆ ಶಬ್ದವನ್ನು ಗ್ರಹಿಸುವ ಕಿವಿಗಳ ಅವಶ್ಯಕತೆಯೇ ಇರುತ್ತಿರಲಿಲ್ಲ. ಅವುಗಳು ಅಸ್ತಿತ್ವಕ್ಕೂ ಬರುತ್ತಿರಲಿಲ್ಲ. ಒಂದು ವೇಳೆ ಕಿವಿಗಳು ಇದ್ದರೂ ಅವುಗಳ ಇರುವಿಕೆಯೂ ನಮ್ಮ ಗೋಚರಕ್ಕೆ ಬರುತ್ತಿರಲಿಲ್ಲ. ಕಿವಿಗಳ ಮೂಲಕ ಶಬ್ದಗ್ರಹಣ ಶಕ್ತಿಯನ್ನು ಜ್ವಲಿಸುವ ಇಂಧನವು ಶಬ್ದವೇ ಎಂದು ಹೇಳುವುದು ಈ ಅರ್ಥದಲ್ಲೇ.

ಗ್ರಹಣಶಕ್ತಿಯು ಇಂದ್ರಿಯ ಗೋಳಕಗಳ ಮೂಲಕ ಹೊರಹೊಮ್ಮಿ ವಿಷಯಗಳನ್ನು ಆವರಿಸಿ, ಬೆಳಗಿ ಅವುಗಳ ಅರಿವನ್ನು ನಮಗೆ ಒದಗಿಸುವ ಕ್ರಿಯೆಯನ್ನು ಇಲ್ಲಿ ಆಹುತಿಯ ಸಮರ್ಪಣೆಯೆಂದು ಸೂಚಿಸಿದ್ದಾರೆ. ಜ್ವಲಿಸುತ್ತಿರುವ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಯಜಮಾನನು ಹಾಕುವ ಆಜ್ಯ, ಚರುವು – ಇವೇ ಆಹುತಿ ಅಥವಾ ಹವಿಸ್ಸು. ಇವು ಅಗ್ನಿಯ ಗರ್ಭದಲ್ಲಿ ಸುಟ್ಟು, ಅಗ್ನಿಯನ್ನು ವೃದ್ಧಿಸಿ ತಾವು ಪೂರ್ಣವಾಗಿ ಬೂದಿಯಾಗುವುವು. ವಿಷಯಗಳ ಅರಿವೇ ಹೋಮ.

**ಸಪ್ತಲೋಕಗಳು: –**

ಕಾವ್ಯಶೈಲಿಯನ್ನೇ ಅನುಸರಿಸುತ್ತಾ ಹೇಳಿರುವ 'ಲೋಕ' ಎಂಬ ಮಾತಿನ

---

[೧] ಈ ಏಳು ಪ್ರಾಣಗಳು ಶಿರದಲ್ಲಿರುವ ಏಳು ಇಂದ್ರಿಯ ಗೋಳಕಗಳೆಂದು ಶ್ರೀ ಶಂಕರರು ವಿವರಿಸುತ್ತಾರೆ. ಈ ಸಪ್ತಜ್ವಾಲೆಗಳನ್ನೇ ಪ್ರಶ್ನೋಪನಿಷತ್ತಿನ ಪ್ರವಚನದಲ್ಲೂ ಪ್ರಸ್ತಾಪಮಾಡಿದೆ. - ಪ್ರಶ್ನೋಪನಿಷತ್ ಪ್ರಶ್ನೆ - ೩-೫ ನೋಡಿ.

ಅರ್ಥ, ಬುದ್ಧಿಗೆ ಸಂಬಂಧಿಸಿದ ಇಂದ್ರಿಯ ಸ್ಥಾನಗಳು ಎಂದು ತಿಳಿಯಬೇಕು. ಇಂದ್ರಿಯ ಗೋಳಕಗಳಾದ ಕಣ್ಣು, ಕಿವಿ ಮುಂತಾದವುಗಳೇ ಈ 'ಲೋಕ'. ಇಂದ್ರಿಯ ಗೋಳಕಗಳು ನಿರ್ದಿಷ್ಟ ನರಗ್ರಂಥಿಗಳ ಕೇಂದ್ರಗಳಿಂದ ನಿಯಂತ್ರಿಸಲ್ಪಡುತ್ತವೆ ಎಂಬುದು ವಿಜ್ಞಾನ ಪ್ರಪಂಚದಲ್ಲಿ ವಿದಿತವಾದ ವಿಷಯವೇ.

ಇಂದ್ರಿಯ ಸ್ಥಾನಗಳಲ್ಲಿ ಪ್ರಾಣಗಳು ಸಂಚರಿಸುತ್ತಿರುವುವು ಎಂದು ಹೇಳಿರುವುದರಿಂದ 'ಪ್ರಾಣ'ವೆಂದರೆ ಇಲ್ಲಿ ಪ್ರಾಣವಾಯುಗಳೆಂದು ಅರ್ಥಮಾಡುವಂತಿಲ್ಲ. ಪ್ರಾಣವೆಂದರೆ ಇಲ್ಲಿ ಅರಿವನ್ನು ಒದಗಿಸುವ ಇಂದ್ರಿಯ ಶಕ್ತಿ. ಈ ಪ್ರಾಣವು ಗಾಢನಿದ್ರೆಯ ಕಾಲದಲ್ಲಿ ಬುದ್ಧಿಯ ಸ್ಥಾನವಾದ ಹೃದಯಗುಹೆಯಲ್ಲಿ ವಿಶ್ರಾಂತಿ ಪಡೆಯುತ್ತಿರುತ್ತದೆ. ಹೃದಯಗುಹೆಯಲ್ಲಿ ಅಡಗಿರುವುದರಿಂದ ಅದು 'ಗುಹಾಶಯ'.

## ಪ್ರಕೃತಿಗೂ ಅಕ್ಷರವೇ ಮೂಲ

**ಅತಃ ಸಮುದ್ರಾ ಗಿರಯಶ್ಚ ಸರ್ವೇ**
**ಅಸ್ಮಾತ್ ಸ್ಯಂದಂತೇ ಸಿಂಧವಃ ಸರ್ವರೂಪಾಃ ।**
**ಅತಶ್ಚ ಸರ್ವಾ ಓಷಧಯೋ ರಸಶ್ಚ**
**ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ ॥** ೯

**ಅತಃ** – ಈ ಪುರುಷನಿಂದಲೇ, **ಸರ್ವೇ** – ಎಲ್ಲಾ, **ಸಮುದ್ರಾಃ** – ಸಮುದ್ರಗಳು, **ಗಿರಯಃ ಚ** – ಪರ್ವತಗಳು, (ಉಂಟಾಗಿವೆ), **ಅಸ್ಮಾತ್** – ಇವನಿಂದ, **ಸರ್ವರೂಪಾಃ** – ಅನೇಕ ರೂಪಗಳ, **ಸಿಂಧವಃ** – ನದಿಗಳು, **ಸ್ಯಂದಂತೇ** – ಹರಿಯುತ್ತವೆ, **ಚ** – ಮತ್ತು, **ಅತಃ** – ಇವನಿಂದಲೇ, **ಸರ್ವಾಃ** – ಎಲ್ಲಾ, **ಓಷಧಯಃ** – ಗಿಡಮೂಲಿಕೆಗಳು (ವ್ರೀಹಿ ಯವಾದಿಗಳು), **ರಸಃ ಚ** – ರಸವೂ (ಉಂಟಾಗಿವೆ), **ಯೇನ** – ಯಾವ ಈ ರಸದಿಂದಲೇ, **ಏಷಃ** – ಈ, **ಅಂತರಾತ್ಮಾ** – ಅಂತರಾತ್ಮನು, **ಭೂತೈಃ** – ಪಂಚ ಸ್ಥೂಲಭೂತಗಳೊಡನೆ, **ತಿಷ್ಠತೇ ಹಿ** – ನಿಂತಿರುವನು.

**(೯) ಈ ಪುರುಷನಿಂದಲೇ ಸಮುದ್ರಗಳೂ, ಎಲ್ಲ ಪರ್ವತಗಳೂ ಉಂಟಾಗಿವೆ. ಇವನಿಂದಲೇ ಅನೇಕ ರೂಪಗಳ ನದಿಗಳೂ ಹರಿಯುವುವು; ಮತ್ತು ಇವನಿಂದಲೇ ಎಲ್ಲಾ ಸಸ್ಯಗಳೂ (ಬತ್ತ, ಜವೆ ಮುಂತಾದವು), ಷಡ್ರಸಗಳೂ* ಆಗಿರುವುವು. ಈ ರಸದಿಂದಲೇ ಈ ಅಂತರಾತ್ಮನು ಪಂಚಸ್ಥೂಲಭೂತಗಳೊಡನೆ ನಿಂತಿರುವನು.**

ಹಿಂದಿನ ಮಂತ್ರಗಳಲ್ಲಿ ಪರಮಾರ್ಥಸತ್ಯವಾದ ಅಕ್ಷರದಿಂದಲೇ ಪ್ರಕೃತಿಯ ಚೇತನಾತ್ಮಕ ರೂಪದ ಸಕಲ ಸೃಷ್ಟಿಯೂ, ಸಜೀವ ಸಾಮ್ರಾಜ್ಯದ ಸಕಲ ಜೀವಿಗಳೂ ಉತ್ಪನ್ನವಾದವು ಎಂದು ಹೇಳಿದೆ. ಹೀಗೆ ಹೇಳಿರುವುದರಿಂದ ಚೇತನ ಜೀವಿಗಳ ಸೃಷ್ಟಿಯನ್ನು ಬಿಟ್ಟು ಉಳಿದ ಜಡಪ್ರಪಂಚದ ಸೃಷ್ಟಿಗೆ ಬೇರೆ ಯಾವುದಾದರೂ

---

***ಷಡ್ರಸಗಳು: ಸಿಹಿ, ಕಹಿ, ಖಾರ, ಉಪ್ಪು, ಹುಳಿ ಮತ್ತು ಒಗರು.**

ಮೂಲವಿರಬಹುದೆಂಬ ಶಂಕೆ ಸತ್ಯಶೋಧಕರ ಮನಸ್ಸಿನಲ್ಲಿ ಉತ್ಪನ್ನವಾಗಬಹುದು. ಹಾಗೆ ಆಗದಿರಲೆಂದು ಈ ಮಂತ್ರದಲ್ಲಿ ಜಡಪ್ರಪಂಚದ ಸೃಷ್ಟಿಯು ಕಾರಣವೂ ಆ ಅಕ್ಷರವೇ ಎಂದು ಸ್ಪಷ್ಟಪಡಿಸಿದೆ. ಸಮುದ್ರಗಳೂ, ಪರ್ವತಗಳೂ, ನದಿಗಳೂ ಎಲ್ಲವೂ ಸೃಜಿಸಲ್ಪಟ್ಟಿರುವುದು ಅಕ್ಷರ ಪುರುಷನಿಂದಲೇ ಎಂದು ಶ್ರುತಿಯು ವಿಶದಪಡಿಸುತ್ತಿದೆ. ಪೃಥ್ವಿಯ ಮೇಲೆ ನೀರು ಹರಿದು ಅದನ್ನು ಫಲವತ್ತಾಗಿ ಮಾಡುತ್ತದೆ. ಆ ಪರಿಸರವು ಸಸ್ಯಗಳ ಹುಟ್ಟಿಗೂ, ಬೆಳವಣಿಗೆಗೂ ಅವಕಾಶಮಾಡುತ್ತದೆ. ಆ ಸಸ್ಯಗಳಿಂದ ರಸೋತ್ಪತ್ತಿಯಾಗುತ್ತದೆ ಮತ್ತು ಆ ರಸವನ್ನುಂಡು, ಜೀರ್ಣಿಸಿಕೊಂಡು ಪ್ರಾಣಿಗಳು ಮೈಗೂಡಿಕೊಳ್ಳುತ್ತವೆ. ತಮ್ಮ ದೇಹಗಳನ್ನು ವೃದ್ಧಿಸಿಕೊಳ್ಳುತ್ತವೆ. ಆಹಾರದ ಸ್ಥೂಲಭಾಗದಿಂದ ಸ್ಥೂಲಶರೀರವೂ, ಸೂಕ್ಷ್ಮಅಂಶದಿಂದ ಮನಸ್ಸು ಬುದ್ಧಿಗಳಿಂದ ಕೂಡಿದ ಲಿಂಗಶರೀರವೂ ಪೋಷಣೆಯಾಗುತ್ತದೆ. ಸ್ಥೂಲಶರೀರಕ್ಕೂ ಆತ್ಮನಿಗೂ ನಡುವೆ ಆತ್ಮನಂತೆ ಇರುವ ಸೂಕ್ಷ್ಮಶರೀರವೇ 'ಅಂತರಾತ್ಮ' ಎನಿಸಿಕೊಳ್ಳುತ್ತದೆ. ಇಲ್ಲಿಯೂ 'ಅಂತರಾತ್ಮ' ಎಂದು ಹೇಳಿರುವುದು ಲಿಂಗಶರೀರ ಅಥವಾ ಸೂಕ್ಷ್ಮಶರೀರವನ್ನು ಕುರಿತು ಹೇಳಿರುವುದೇ ಹೊರತು ಪರವಸ್ತುವಾದ ಆತ್ಮವನ್ನು ಉದ್ದೇಶಿಸಿ ಅಲ್ಲ. ಒಟ್ಟಿನಲ್ಲಿ ನಮ್ಮ ಇಂದ್ರಿಯ ಗೋಚರವಾದ ಹೊರಗಿನ ನಾಮರೂಪಾತ್ಮಕವಾದ ಜಗತ್ತು ಮತ್ತು ನಮ್ಮ ಮನಸ್ಸು, ಬುದ್ಧಿ ಹಾಗೂ ಸಂವೇದನಾತ್ಮಕವಾದ ಅಂತಃಕರಣದ ಪ್ರಪಂಚ–ಎಲ್ಲವೂ ಅಕ್ಷರದಿಂದಲೇ ಉತ್ಪನ್ನವಾಗಿವೆ ಎಂದು ಶ್ರುತಿಯು ಸ್ಪಷ್ಟಪಡಿಸುತ್ತಿದೆ.

## ಸರ್ವವೂ ಅಕ್ಷರಪುರುಷನೇ

**ಪುರುಷ ಏವೇದಂ ವಿಶ್ವಂ ಕರ್ಮ**
**ತಪೋ ಬ್ರಹ್ಮ ಪರಾಮೃತಮ್ ।**
**ಏತದ್ಯೋ ವೇದ ನಿಹಿತಂ ಗುಹಾಯಾಂ**
**ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ॥** ೧೦

**ಕರ್ಮ** – ಕರ್ಮವು, **ಇದಂ ವಿಶ್ವಂ** – ಈ ವಿಶ್ವವು, **ತಪಃ** – ತಪಸ್ಸು (ಇವೆಲ್ಲವೂ), **ಪುರುಷಃ ಏವ** – ಪುರುಷನೇ, **ಪರಾಮೃತಂ** – ಶ್ರೇಷ್ಠವೂ ಅಮೃತವೂ ಆದ, **ಬ್ರಹ್ಮ** – ಬ್ರಹ್ಮವೇ, **ಸೋಮ್ಯ** – ಎಲೈ ಸೋಮ್ಯನೆ, **ಗುಹಾಯಾಂ** – ಹೃದಯದಲ್ಲಿ, **ನಿಹಿತಂ** – ಅಡಗಿರುವ, **ಏತತ್** – ಇದನ್ನು, **ಯಃ** – ಯಾರು, **ವೇದ** – ಅರಿಯುವನೋ, **ಸಃ** – ಅವನು, **ಇಹ** – ಇಲ್ಲಿಯೇ, **ಅವಿದ್ಯಾಗ್ರಂಥಿಂ** – ಅವಿದ್ಯೆಯೆಂಬ ಬಂಧವನ್ನು, **ವಿಕಿರತಿ** – ಕಳಚಿಕೊಳ್ಳುತ್ತಾನೆ.

(೧೦) ಕರ್ಮ (ಅಗ್ನಿಹೋತ್ರವೇ ಮೊದಲಾದ ಕರ್ಮಗಳು), ತಪಸ್ಸು, ಈ ವಿಶ್ವ ಇವೆಲ್ಲವೂ ಪುರುಷನೇ ಮತ್ತು ಶ್ರೇಷ್ಠವೂ ಅಮೃತವೂ ಆದ ಬ್ರಹ್ಮವೇ. ಎಲೈ ಸೋಮ್ಯನೆ, ಹೃದಯದಲ್ಲಿ ಅಡಗಿರುವ ಇದನ್ನು ಯಾರು ಅರಿತುಕೊಳ್ಳುವನೋ ಅವನು ಅವಿದ್ಯಾವಾಸನೆಯ ಬಲವಾದ ಬಂಧನದಿಂದ (ಬದುಕಿರುವಾಗಲೇ) ಬಿಡಿಸಿಕೊಳ್ಳುತ್ತಾನೆ.

ಹಿಂದಿನ ಮಂತ್ರಗಳನ್ನೆಲ್ಲಾ ಕ್ರೋಡೀಕರಿಸಿ ಅವುಗಳ ಸಾರಾರ್ಥವನ್ನು ಶ್ರುತಿಯು ಈ ಮಂತ್ರದಲ್ಲಿ ತಿಳಿಸಿದೆ. ಸಮಸ್ತ ನಾಮ ರೂಪ ಹಾಗೂ ಚಿಂತನೆ, ಭಾವುಕತೆ, ಸಂವೇದನೆಗಳ ಪ್ರಪಂಚಗಳೆಲ್ಲವೂ ಈ ಅಕ್ಷರ ಪುರುಷನ ಕ್ರಿಯಾತ್ಮಕ ಮತ್ತು ಕಲಾತ್ಮಕ ಅಭಿವ್ಯಕ್ತಸ್ವರೂಪ. ಚಿಂತನೆ ಮತ್ತು ಕ್ರಿಯೆಗಳು ಮಿಲನವಾದಾಗ ಕಾರ್ಯಕ್ಷೇತ್ರವು ಸಿದ್ಧವಾಗುತ್ತದೆ. ಅದೇ ಪ್ರಪಂಚ, ವಿಶ್ವ.

ಎಲ್ಲಕ್ಕೂ ಕಾರಣನಾದ, ವಿಶ್ವದ ಸಾರಭೂತನಾದ ಪುರುಷನನ್ನು ತಿಳಿಯುವುದೆಂದರೆ ನಮ್ಮ ಆತ್ಮವನ್ನೇ ಅರಿತಂತೆ. ಅದೇ ಆತ್ಮಜ್ಞಾನ. ಸದ್ಯದಲ್ಲಿ ನಾವು ನಮ್ಮ ಸ್ವರೂಪವನ್ನೇ ಮರೆಮಾಡಿರುವ ದೇಹ, ಪ್ರಾಣ, ಮನೋಬುದ್ಧಿ ಅಹಂಕಾರಗಳೇ ನಾವೆಂದು ತಿಳಿದಿದ್ದೇವೆ. ಅದೇ ನಮ್ಮ ಕಷ್ಟಸಂಕಟಗಳಿಗೆ, ನೋವು ಕಾವುಗಳಿಗೆ ಮುಖ್ಯಕಾರಣ. ನಾವು ದೇಹ, ಮನಸ್ಸು, ಬುದ್ಧಿಗಳಲ್ಲವೆಂದೂ, ಮೂಲತಃ ನಾವು ಆತ್ಮಸ್ವರೂಪರೆಂದೂ ನಮ್ಮನ್ನು ನಾವು ಅರಿತುಕೊಳ್ಳುವುದೇ ಅವಿದ್ಯೆಯಿಂದ ಬಿಡುಗಡೆ, ಸ್ವಯಂಕೃತ ಬಂಧನದಿಂದ ವಿಮೋಚನೆ.

ನಮ್ಮ ಅವಿದ್ಯೆಯು ಗಂಟೇ ಬಂಧನದ ಭ್ರಾಂತಿಯನ್ನು ನಮ್ಮಲ್ಲಿ ಬಲವಾಗಿ ಬೇರೂರಿಸಿದೆ. ಆ ಭ್ರಾಂತಿಯಿಂದ ನಮಗೆ ಅಲ್ಪತೆಯ ಕಲ್ಪನೆ ಮತ್ತು ಸಾವಿನ ಭಯ. ಆದ್ದರಿಂದಲೇ ಯಾರು ತನ್ನ ನಿಜಸ್ವರೂಪವನ್ನು ಅರಿತು ತಾನು ಪರಮಪುರುಷನ ಅಭಿವ್ಯಕ್ತರೂಪ ಎಂದು ಸ್ವಾನುಭವದಿಂದ ತಿಳಿಯುತ್ತಾನೆಯೋ ಅವನು ಅವಿದ್ಯೆಯ ಬಂಧನದಿಂದ ನಿರ್ಮುಕ್ತನಾಗಿ ದೈವತ್ವವನ್ನು ಇಲ್ಲಿಯೇ ಸಿದ್ಧಿಸಿಕೊಳ್ಳುತ್ತಾನೆ ಎಂದು ಶ್ರುತಿಯು ಸ್ಪಷ್ಟಪಡಿಸುತ್ತದೆ.

ಈ ರೀತಿ ಬಂಧನದ ಬಿಡುಗಡೆಯ ಆಶಾಕಿರಣವನ್ನು ನಮ್ಮಲ್ಲಿ ಮೂಡಿಸಿ ಸಂತಸದ ಸುಗ್ಗಿಯ ಸಂದೇಶವನ್ನು ಕೊಡುತ್ತಾ ಶ್ರುತಿಯು ಈ ಖಂಡವನ್ನು ಸಮಾಪ್ತಿಗೊಳಿಸುತ್ತದೆ.

**ಇಲ್ಲಿಗೆ ಮುಂಡಕೋಪನಿಷತ್ತಿನ ಮುಂಡಕ ೨ ಖಂಡ ೧ ಸಮಾಪ್ತಿ**

---

# ಎರಡನೆಯ ಮುಂಡಕ – ಎರಡನೆಯ ಖಂಡ

## ಆತ್ಮನನ್ನು ಅರಿಯುವ ಬಗೆ

**ಆವಿಃ ಸನ್ನಿಹಿತಂ ಗುಹಾಚರಂ ನಾಮ –**
**ಮಹತ್ಪದಮತ್ರೈತತ್ ಸಮರ್ಪಿತಮ್ ।**
**ಏಜತ್ ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ ಸದಸದ್ವರೇಣ್ಯಂ**
**ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಮ್॥** ೧

(ಬ್ರಹ್ಮವು), **ಆವಿಃ** – ಪ್ರಕಾಶಮಾನವಾಗಿ, **ಸನ್ನಿಹಿತಂ** – ಸಮೀಪವರ್ತಿಯಾಗಿ, **ಗುಹಾಚರಂ ನಾಮ** – ಗುಹಾಚರ (ಹೃದಯದಲ್ಲಿರುವುದು) ಎಂದೆನಿಸಿಕೊಳ್ಳುವುದು; (ಇದು) **ಮಹತ್ಪದಂ** – ಮಹದಾಶ್ರಯವಾಗಿರುವ, **ಅತ್ರ** – ಈ ಬ್ರಹ್ಮದಲ್ಲಿ, **ಏಜತ್** – ಚಲಿಸುವ (ಪಕ್ಷಿಯೇ ಮೊದಲಾದವು) **ಪ್ರಾಣತ್** – ಉಸಿರಾಡುವ (ಮನುಷ್ಯ ಪಶ್ವಾದಿಗಳು) **ನಿಮಿಷತ್ ಚ** – ಮತ್ತು ಕಣ್ಣು ಮಿಟುಕಿಸುವ ಇತರ ಪ್ರಾಣಿಗಳು, **ಯತ್ ಏತತ್** – ಇವೆಲ್ಲವೂ, **ಸಮರ್ಪಿತಂ** – ಸೇರಿಕೊಂಡಿವೆ, **ಯತ್** – ಯಾವ, **ಏತತ್** – ಇದನ್ನು, **ಸದಸತ್** – ಸತ್ ಅಸತ್ (ಮೂರ್ತಾಮೂರ್ತ) ಎಂದೂ, **ವರೇಣ್ಯಂ** – ಶ್ರೇಷ್ಠನೆಂದೂ (ಎಲ್ಲರೂ ಬಯಸತಕ್ಕದ್ದೆಂದು) **ಪ್ರಜಾನಾಂ** – ಜನಗಳ, **ವಿಜ್ಞಾನಾತ್** – ಜ್ಞಾನಕ್ಕಿಂತ, **ಪರಂ** – ಬೇರೆಯೆಂದೂ, **ಯತ್** – ಇದು, **ವರಿಷ್ಠಂ** – ಪರಮಶ್ರೇಷ್ಠವೆಂದೂ, **ಜಾನಥ** – ತಿಳಿದುಕೊಳ್ಳಿ.

(೧) ಬ್ರಹ್ಮವು ಪ್ರಕಾಶಮಾನವಾಗಿ ಸಮೀಪದಲ್ಲಿದ್ದುಕೊಂಡು ಹೃದಯದಲ್ಲಿ ಅಡಗಿರುವುದು. ಇದು ಹೃದಯಗುಹೆಯಲ್ಲಿರುವುದರಿಂದ ಗುಹಾಚರ ಎನ್ನಿಸಿಕೊಂಡಿದೆ. ಎಲ್ಲಕ್ಕೂ ಮಹದಾಶ್ರಯವಾದ ಇದರಲ್ಲಿ ಚಲಿಸುವ, ಉಸಿರಾಡುವ, ಕಣ್ಣು ಮಿಟುಕಿಸುವ ಸಮಸ್ತ ಪ್ರಾಣಿವರ್ಗಗಳೂ ಸೇರಿವೆ. ಇದನ್ನು ಸದಸತ್ ಎಂದೂ, ವರೇಣ್ಯಂ ಎಂದರೆ ಎಲ್ಲರೂ ಬಯಸತಕ್ಕದ್ದೆಂದೂ, ಸಾಮಾನ್ಯ ಜನರ ಜ್ಞಾನಕ್ಕಿಂತ ಬೇರೆಯಾದದ್ದೆಂದೂ, ಪರಮ ಶ್ರೇಷ್ಠವಾದದ್ದೆಂದೂ ತಿಳಿಯಿರಿ.

ಈ ಖಂಡದಲ್ಲಿ ಸತ್ಯದ ಪೂರ್ಣ ಚಿತ್ರಣವನ್ನೂ ಮತ್ತು ಅದನ್ನು ಅರಿಯುವ ನೇರ ಮಾರ್ಗವನ್ನು ತಿಳಿಯಲು ಶ್ರುತಿಯು ಪ್ರಯತ್ನಿಸಿದೆ. ಅದಕ್ಕೆ ತಕ್ಕಂತೆ ಅರ್ಥಗರ್ಭಿತ ಮತ್ತು ಮನೋಹರವಾದ ಶ್ರಾವ್ಯ ವಾಕ್‌ಸಂಪತ್ತಿನಿಂದ ಕೂಡಿದ ಮಂತ್ರದಿಂದಲೇ ಈ ಖಂಡವು ಪ್ರಾರಂಭವಾಗಿದೆ. ಇದರಲ್ಲಿ ಬಂದಿರುವ ಕೆಲವು ಮುಖ್ಯ ಶಬ್ದಗಳ ವಿವರಣೆಯನ್ನು ತಿಳಿಯೋಣ.

**ಆವಿಃ –**

ನಮ್ಮೊಳಗಿರುವ ಪ್ರಜ್ಞೆಯು ಬಹಳ ಪ್ರಕಾಶಮಾನವಾದದ್ದು. ಆ ಪ್ರಜ್ಞೆಯಿಂದಲೇ ನಮ್ಮ ಯೋಚನೆಗಳೂ, ಭಾವನೆಗಳೂ ಬೆಳಗಿ ನಮ್ಮ ಗೋಚರಕ್ಕೆ ಬರುತ್ತವೆ. ತತ್ತ್ವಜ್ಞಾನವಿಲ್ಲದ ಸಾಮಾನ್ಯ ಮನುಷ್ಯನೂ ಕೂಡ ತನ್ನೊಳಗೆ ಉದಿಸುವ ಭಾವನೆಗಳನ್ನೂ, ಸಂವೇದನೆಗಳನ್ನೂ ಅರಿಯಬಲ್ಲ. ಹಾಗೆ ಅವು ನಮ್ಮ ಅರಿವಿಗೆ ಬರಬೇಕಾದರೆ ಅವುಗಳನ್ನು ಬೆಳಗಿ ಗೋಚರಕ್ಕೆ ತರುವ ಒಂದು ಪ್ರಕಾಶ ತತ್ತ್ವವು ನಮ್ಮೊಳಗಿರಬೇಕು. ಅದೇ ನಮ್ಮ ಬುದ್ಧಿಯಲ್ಲಿರುವ ಪ್ರಕಾಶತತ್ತ್ವ. ಈ ಪ್ರಕಾಶವು ನಮಗೆ ಹೊರಗೆ ಗೋಚರಿಸುವ, ವಿಜ್ಞಾನಿಗಳು ಹೇಳುವ ಬೆಳಕಲ್ಲ. ಅದು ಅಂತಃಕರಣದ ಬೆಳಕು. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಇರುವ ಜೀವತತ್ತ್ವ. ಇದನ್ನೇ ನಾವು ಪ್ರಜ್ಞೆ, ಆತ್ಮಜ್ಯೋತಿ ಎನ್ನುವುದು.

**ಸನ್ನಿಹಿತಂ –**

ದೈವಶಕ್ತಿಯಾದ ಆತ್ಮವು ನಮಗೆ ಅತ್ಯಂತ ಸಮೀಪದಲ್ಲೇ ಇರುವಂತಹದು. ಅದು ನಮ್ಮ ವ್ಯಕ್ತಿತ್ವದ ಕೇಂದ್ರ. ನಮ್ಮ ಸ್ಥೂಲದೇಹಕ್ಕಿಂತ ಅದೇ ನಮಗೆ ಹೆಚ್ಚು ನಿಕಟವಾಗಿರುವುದು. ದೂರದಲ್ಲಿರುವ ವಸ್ತುವನ್ನು ನಾವು 'ಅದು' ಎಂತಲೂ ಹತ್ತಿರದಲ್ಲಿರುವ ವಸ್ತುವನ್ನು 'ಇದು' ಎಂತಲೂ ಸಂಬೋಧಿಸುತ್ತೇವೆ. ಆತ್ಮದ ನಿಲುವಿನಿಂದ ಹೇಳುವಾಗ ನಮ್ಮ ಬುದ್ಧಿಯನ್ನೂ 'ಅದು' ಎನ್ನುತ್ತೇವೆ. ಆತ್ಮವೇ ನಮ್ಮ ಕೇಂದ್ರವಾಗಿರುವುದರಿಂದ ಅದು ಅನ್ಯವಸ್ತುಗಳ ಸಂಬಂಧವಾಗಿ 'ವಿಷಯಿ'. ಉಳಿದೆಲ್ಲ ವಿಷಯಗಳೂ ಅದಕ್ಕೆ 'ವಿಷಯ'. ಅವುಗಳೆಲ್ಲ ವಿಷಯಿಯಿಂದ ದೂರದೂರ ಇರುವಂತಹವು. ಆದ್ದರಿಂದ ಆತ್ಮವನ್ನು ಶ್ರುತಿಯು 'ಸನ್ನಿಹಿತಂ' ಎಂದು ಹೇಳಿರುವುದು ಸಮ್ಮತವಾಗಿಯೇ ಇದೆ.

**ಗುಹಾಚರಂ –**

ವೇದಾಂತದ ಪರಿಭಾಷೆಯಲ್ಲಿ ಬುದ್ಧಿ ಎಂದರೆ ಹೃದಯ. ಬುದ್ಧಿಯು ಬೆಳಗುವುದು ಆತ್ಮಜ್ಯೋತಿಯಿಂದ. ನೋಡುವುದು, ಕೇಳುವುದು ಮುಂತಾದ ಕ್ರಿಯೆಗಳ ಮೂಲಕ ಬುದ್ಧಿಯನ್ನು ಬೆಳಗಿ ಅರಿವನ್ನುಂಟುಮಾಡಿ ಈ ಪ್ರಕಾರಗಳಲ್ಲಿ ಆತ್ಮನು ಸಂಚರಿಸುವುದರಿಂದ ಇದು 'ಗುಹಾಚರ' ಎಂಬ ಹೆಸರು ಪಡೆದಿದೆ.

**ಮಹತ್‌ಪದಮತ್ರೈತತ್ ಸಮರ್ಪಿತಮ್ –**

ಶಾಶ್ವತವಸ್ತುವು ನಿರಾಕಾರವಾದದ್ದೆಂದು ನಾವು ಹಿಂದೆಯೇ ತಿಳಿದಿದ್ದೇವೆ. ನಿರಾಕಾರವಾದದ್ದೇ ಸರ್ವವ್ಯಾಪಿಯಾಗಿರಬಲ್ಲದು. ಪರಮಾರ್ಥಸತ್ಯವು ಸರ್ವವ್ಯಾಪಿಯಾದದ್ದು. ಅದರೊಳಗೆ ವ್ಯಾಪಕವಾಗಿರುವುದು ಬೇರೊಂದಿಲ್ಲ, ಎಂದು ಶ್ರುತಿಯೇ ಬೇರೆ ಕಡೆ ಹೇಳಿದೆ. ಅದರ ವಿಸ್ತೀರ್ಣವನ್ನು ಹೇಳುವುದಾದರೆ ಅದು

ಅತ್ಯಂತ ಹಿರಿದಾಗಿರಬೇಕು, ಮಹತೋ ಮಹೀಯಮಾಗಿರಬೇಕು. ಏಕೆಂದರೆ ಅದು ಅನಂತವಾದದ್ದು, ಅಪರಿಮಿತವಾದದ್ದು. ಅದು ಎಲ್ಲ ವಸ್ತುಗಳಿಗೂ ಆಧಾರಭೂತವಾದದ್ದು. ಆತ್ಮಜ್ಯೋತಿಯಿಂದಲೇ ನಮಗೆ ವಸ್ತುಗಳ ಪ್ರಜ್ಞೆ. ವಸ್ತುವಿನ ಪ್ರಜ್ಞೆ ಇಲ್ಲವಾದರೆ ನಮಗೆ ಆ ವಸ್ತುವೇ ಇರದು. ಆದ್ದರಿಂದ ಆತ್ಮಜ್ಯೋತಿಯೇ ವಸ್ತುವಿನ ಅಸ್ತಿತ್ವಕ್ಕೆ ಆಧಾರ. ಆತ್ಮವೇ ಎಲ್ಲಕ್ಕೂ ಮೂಲವಾದ್ದರಿಂದ ನಾವು ಅರಿಯುವ, ಸ್ಪಂದಿಸುವ ಸಕಲ ವಸ್ತುಗಳಿಗೂ ಕಾರಣಭೂತವಾಗಿರುವುದು. ಕಾರಣವೇ ಕಾರ್ಯರೂಪದಲ್ಲಿ ಕಾಣುವ ವಸ್ತುವಿಗೆ ಆಧಾರ. ಮಣ್ಣಿನ ಮಡಕೆಗೆ ಮಣ್ಣೇ ಆಧಾರ. ಚಿನ್ನದ ಆಭರಣಗಳಿಗೆ ಚಿನ್ನವೇ ಆಧಾರ. ಸಾಗರವೇ ಅದರ ಅಲೆ, ತೆರೆ, ನೊರೆ, ಬುದ್ಬುದಗಳಿಗೆ ಆಧಾರ, ಆಶ್ರಯ. ಈ ಅರ್ಥದಲ್ಲೇ ಆತ್ಮವು ಸಕಲ ವಸ್ತುಗಳಿಗೂ ಆಧಾರ ಎಂದು ಹೇಳಿರುವುದು.

**ಏಜತ್ ಪ್ರಾಣನ್ನಿಮಿಷಚ್ಚ –**

ಅಲುಗಾಡುವುದು, ಉಸಿರಾಡುವುದು ಮತ್ತು ಕಣ್ಣು ಮಿಟುಕಿಸುವುದು, ಮತ್ತು 'ಚ' ಎಂಬ ಶಬ್ದವಿರುವುದರಿಂದ ಕಣ್ಣಾಡಿಸದೆ ಇರುವುದು ಕೂಡ ಸೇರಿ ಈ ವರ್ಗಗಳಲ್ಲಿ ವಿಶ್ವದಲ್ಲಿರುವ ಸಮಸ್ತ ಸ್ಥಾವರ ಜಂಗಮ ಸೃಷ್ಟಿಯನ್ನೆಲ್ಲಾ ಒಟ್ಟುಗೂಡಿಸಿ ಹೇಳಿದೆ. ಅಲುಗಾಡುವುದು ಎಂಬುದರಲ್ಲಿ ಜಂಗಮ ವಸ್ತುಗಳೆಲ್ಲಾ ಸೇರಿದಂತಾಗುವುದು. ಕಾಲವನ್ನು ಕೂಡ ಅದರಲ್ಲಿಯೇ ಸೇರಿಸಬಹುದು. ಉಸಿರಾಡುವುದು ಎಂಬುದರಲ್ಲಿ ಜೀವಂತವಾಗಿರುವ ಮನುಷ್ಯನೇ ಮೊದಲಾದ ಪ್ರಾಣಿವರ್ಗವೆಲ್ಲಾ ಸೇರುವುದು. ಕಣ್ಣು ಮಿಟುಕಿಸುವುದು – ಇದೂ ಪ್ರಾಣಿವರ್ಗವನ್ನೇ ಕುರಿತಾದದ್ದು. 'ಚ' ಎಂಬುದರಿಂದ ಕಣ್ಣು ಮಿಟುಕಿಸದೇ ಇರುವ ಅಂದರೆ ಸ್ಥಾವರ ವಸ್ತುಗಳನ್ನೂ ಸೇರಿಸಿದಂತೆ ಆಯಿತು. ಒಟ್ಟಿನಲ್ಲಿ ಸಕಲ ಚರಾಚರ ವಸ್ತುಗಳೂ ಬ್ರಹ್ಮದಲ್ಲಿ ಸೇರಿಕೊಂಡಿವೆ ಎಂದು ಶ್ರುತಿ ಹೇಳುತ್ತಿದೆ.

**ಏತತ್ ಜಾನಥ –**

ಅದೆಲ್ಲವನ್ನೂ ಅರಿಯಿರಿ ಎಂದು ಶ್ರುತಿಯು ಬೋಧಿಸುತ್ತಿದೆ. ಆದರೆ ಅದನ್ನು ಅರಿಯುವುದು ಹೇಗೆ? ಲೋಕದಲ್ಲಿ ನಾವು ಇಂದ್ರಿಯಗಳ ಮೂಲಕ ಬಾಹ್ಯವಸ್ತುಗಳನ್ನು ತಿಳಿಯುವಂತೆ ಬ್ರಹ್ಮವನ್ನು ತಿಳಿಯುವುದು ಸಾಧ್ಯವಿಲ್ಲ. ಸಾಮಾನ್ಯವಾದ ಇಂದ್ರಿಯಜ್ಞಾನದಲ್ಲಿ ತಿಳಿದುಕೊಳ್ಳಬೇಕಾದ ವಿಷಯವು ತಿಳಿದುಕೊಳ್ಳುವ ವಿಷಯಕ್ಕಿಂತ ಬೇರೆಯಾದದ್ದು. ಆದರೆ ಇಲ್ಲಿ ತಿಳಿದುಕೊಳ್ಳಬೇಕಾದ ವಸ್ತುವೂ 'ವಿಷಯಿ'ಯೇ. ಅಂದರೆ ಅರಿವು ತನ್ನನ್ನೇ ಅನುಭವಕ್ಕೆ ತಂದುಕೊಳ್ಳುವುದು. ಅರಿವನ್ನು ಅರಿಯುವುದು ಎಂದರೆ ನಮ್ಮ ಚೈತನ್ಯದ ಮೂಲವನ್ನು ಅನುಭವಪೂರ್ವಕವಾಗಿ ನಾವೇ ಅರಿತುಕೊಳ್ಳುವುದು. ಈ ಅನುಭವದಿಂದ ನಾವೇ ಬ್ರಹ್ಮಸ್ವರೂಪರು ಎಂಬುದು ನಮಗೆ ವೇದ್ಯವಾಗುತ್ತದೆ. ಇದೇ ಆತ್ಮಸಾಕ್ಷಾತ್ಕಾರ.

ಆತ್ಮವು ಸರ್ವವ್ಯಾಪಕವಾದದ್ದು. ಆತ್ಮವೇ ಬ್ರಹ್ಮಾಂಡದಲ್ಲಿರುವ ಮೂರ್ತ, ಅಮೂರ್ತ ರೂಪಗಳ ಸಮಸ್ತ ವಸ್ತುಗಳ ಸಾರಭೂತವೂ, ಆಧಾರಭೂತವೂ ಆಗಿದೆ. ನಮ್ಮ ಗೋಚರಕ್ಕೆ ಬರುವ ಸರ್ವ ಬಾಹ್ಯವಸ್ತುಗಳ ಪ್ರಪಂಚವೂ, ನಮ್ಮ ಮನಸ್ಸಿನಲ್ಲಿ ಅಡಗಿರುವ ಚಿಂತನೆ, ಭಾವನೆ, ಸಂವೇದನೆಗಳ ಅಂತಃಪ್ರಪಂಚವೂ ಆತ್ಮದ ವ್ಯಾಪ್ತಿಯಲ್ಲಿರುವಂತಹವೇ. ಇದರಲ್ಲಿ ಮತ್ತೊಂದು ಸೂಕ್ಷ್ಮ ಸೂಚನೆ ಇದೆ. ಬಾಹ್ಯ ಪ್ರಪಂಚದಿಂದ ದೂರಸರಿದು, ಪ್ರಾಪಂಚಿಕ ವ್ಯವಹಾರದಲ್ಲಿ ವಿರಾಗಹೊಂದಿ ನಿವೃತ್ತಿಮಾರ್ಗವನ್ನನುಸರಿಸಿ ತನ್ನೊಳಗೇ ಅಂತಃಕರಣದ ಆನಂದದಲ್ಲಿ ಮುಳುಗಿ, ಭಾವನೆಗಳ ಒಳ ಪ್ರಪಂಚದಲ್ಲಿ ತಲ್ಲೀನರಾಗಿರುವುದೂ ಆತ್ಮಪ್ರಾಪ್ತಿಯ ಮಾರ್ಗವಲ್ಲ. ಸದಾ ಪರಮಾತ್ಮನ ನಾಮಸಂಕೀರ್ತನೆ ಮಾಡುತ್ತ ಧ್ಯಾನೋಪಾಸನೆಗಳಲ್ಲಿ ನಿರತವಾಗಿ ಪ್ರಪಂಚವನ್ನು ಸಂಪೂರ್ಣವಾಗಿ ಮರೆಯುವುದರಿಂದಲೂ ಗುರಿಸಾಧನೆಯಾಗಲಾರದು. ಸದ್ವಿವೇಕಿಗಳಾಗಿ ನಮ್ಮ ಬಾಹ್ಯ ಮತ್ತು ಅಂತಃಪ್ರಪಂಚಗಳೆರಡನ್ನೂ ಮೀರಿ ನಾವು ಪರಮೋತ್ಕೃಷ್ಟವಾದ ಆತ್ಮನ ಸನ್ನಿಧಿಗೆ ಸೇರಬೇಕು. ನಾಮರೂಪಗಳನ್ನೂ, ಉಪಾಧಿಗಳನ್ನೂ ಅತಿಕ್ರಮಿಸಿ ಹೋದಮೇಲೆ ನಿರಾಕಾರನೂ ನಿರ್ಗುಣನೂ ಆದ ಪರಮಾತ್ಮನ ಸಾಕ್ಷಾತ್ಕಾರ.

**ಪ್ರಜಾನಾಂ ವಿಜ್ಞಾನಾತ್ ಪರಂ—**

ಆತ್ಮವು ಶಾಸ್ತ್ರಜ್ಞಾನವಿಲ್ಲದ ಸಾಮಾನ್ಯ ಜನರಿಗೆ ತಿಳಿಯುವಂತಹುದಲ್ಲ. ಅಂದರೆ ಇದು ಇಂದ್ರಿಯ ವಿಷಯ ಜ್ಞಾನವಲ್ಲ. ಆತ್ಮವು ಬುದ್ಧಿಗೆ ಮೀರಿದ ವಸ್ತು. ಬುದ್ಧಿಯ ಅರಿವಿಗೆ ಆತ್ಮವೇ ಕಾರಣವಾದ್ದರಿಂದ ತನ್ನ ಕ್ರಿಯೆಗೆ ಕಾರಣವಾದ ಆತ್ಮವನ್ನೇ ಬುದ್ಧಿಯು ಅರಿಯಲಾರದು. ಬುದ್ಧಿಯು ತನ್ನ ವಿಚಾರಶಕ್ತಿಗೆ ಕಾರಣವಾದ ಆತ್ಮಶಕ್ತಿಯನ್ನೇ ತಿಳಿಯಬಲ್ಲದೆಂಬುದು ಅಸಂಬದ್ಧವಾದ ತರ್ಕ. ಯಾರೂ ತಮ್ಮ ಹೆಗಲನ್ನೇ ಏರಿ ಕುಳಿತುಕೊಳ್ಳಲಾರರು. ಆದ್ದರಿಂದಲೇ ಬುದ್ಧಿಯು ತನಗೆ ಮೀರಿದ ಮತ್ತು ತನ್ನ ಕ್ರಿಯಾಶಕ್ತಿಗೆ ಕಾರಣವಾದ ಆತ್ಮಶಕ್ತಿಯನ್ನು ಅರಿತುಕೊಳ್ಳುವುದು ಅಸಾಧ್ಯವಾದ ಭಾವನೆ. ಅದಕ್ಕಾಗಿಯೇ ಸಾಮಾನ್ಯ ಜನರಿಗೆ ಆತ್ಮವು ತಿಳಿಯಬಲ್ಲ ವಿಷಯವಲ್ಲವೆಂದು ಶ್ರುತಿಯು ಹೇಳಿದೆ. ಇದನ್ನೇ ಪ್ರಜೆಗಳು ಎಂದರೆ ಸಾಮಾನ್ಯ ಜನರು ಅರಿಯುವ ವಸ್ತುಗಳಿಗಿಂತ ಬೇರೆ ಎಂದು ಇನ್ನೊಂದು ರೀತಿಯಲ್ಲಿ ಹೇಳಿದೆ. ಅಷ್ಟಲ್ಲದೆ ಇದು ಉತ್ತಮೋತ್ತಮವಾದದ್ದು, ಅತ್ಯುತ್ಕೃಷ್ಟವಾದದ್ದು ಎಂದೂ ಹೇಳಿದೆ.

**ಯದರ್ಚಿಮದ್ ಯದಣುಭ್ಯೋಽಣು ಚ**
**ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ ।**
**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ**
**ತದೇತತ್ ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ। ೨**

**ಯತ್** – ಯಾವುದು, **ಅರ್ಚಿಮತ್** – ಪ್ರಕಾಶವುಳ್ಳದ್ದೋ, **ಯತ್** – ಯಾವುದು, **ಅಣುಭ್ಯಃ** – ಅಣುಗಳಿಗಿಂತ, **ಅಣು ಚ** – ಸೂಕ್ಷ್ಮವಾಗಿದೆಯೋ, **ಯಸ್ಮಿನ್**

– ಯಾವುದರಲ್ಲಿ, **ಲೋಕಾಃ** – ಲೋಕಗಳು, **ಲೋಕಿನಃ ಚ** – ಮತ್ತು ಲೋಕಗಳಲ್ಲಿ ವಾಸ ಮಾಡುವವರು, **ನಿಹಿತಾಃ** – ಇರುತ್ತಾರೆಯೋ, **ತತ್ ಏತತ್** – ಆ ಇದು, **ಅಕ್ಷರಂ ಬ್ರಹ್ಮ** – ಅಕ್ಷರವೆಂಬ ಬ್ರಹ್ಮವು, **ಸಃ ಪ್ರಾಣಃ** – ಅದೇ ಪ್ರಾಣವು, **ತತ್ ಉ ವಾಙ್ಮನಃ** – ಅದೇ ವಾಕ್ಕು ಮತ್ತು ಮನಸ್ಸುಗಳು, **ತತ್ ಏತತ್** – ಆ ಇದು, **ಸತ್ಯಂ** – ಸತ್ಯವಾದದ್ದು, **ತತ್** – ಅದು, **ಅಮೃತಂ** – ನಾಶರಹಿತವಾದದ್ದು, **ತತ್** – ಅದು, **ವೇದ್ಧವ್ಯಂ** – ಹೊಡೆಯಲ್ಪಡತಕ್ಕದ್ದು, **ಸೋಮ್ಯ** – ಎಲೈ ಸೋಮ್ಯನೆ, **ವಿದ್ಧಿ** – ಗುರಿಯಿಟ್ಟು ಹೊಡೆ (ಅಕ್ಷರದಲ್ಲಿಯೇ ಚಿತ್ತವನ್ನು ನಿಲ್ಲಿಸಿಕೊ).

**(೨) ಯಾವುದು ಪ್ರಕಾಶವುಳ್ಳದ್ದೋ, ಯಾವುದು ಅಣುಗಳಿಗಿಂತ ಸೂಕ್ಷ್ಮವಾಗಿರುವುದೋ, ಯಾವುದರಲ್ಲಿ ಲೋಕಗಳು ಇವೆಯೊ ಮತ್ತು ಲೋಕಗಳಲ್ಲಿ ವಾಸಿಸುವರೂ ಇರುತ್ತಾರೆಯೋ ಇದು ಅಕ್ಷರವೆಂಬ ಬ್ರಹ್ಮ ಅದೇ ಪ್ರಾಣ, ಅದೇ ವಾಕ್ ಮತ್ತು ಮನಸ್ಸುಗಳು. ಇದು ಸತ್ಯವಾದದ್ದು, ಅಮೃತವಾದದ್ದು ಅದೇ ಹೊಡೆಯಲ್ಪಡತಕ್ಕದ್ದು. ಎಲೈ ಸೋಮ್ಯ, ಅದನ್ನು ಭೇದಿಸು (ಈ ಅಕ್ಷರದಲ್ಲಿಯೇ ಚಿತ್ತವನ್ನು ಸರಿಯಾಗಿ ನಿಲ್ಲಿಸಿಕೊ)**

ಹಿಂದಿನ ಮಂತ್ರದಲ್ಲಿ ವಿವರಿಸಿರುವುದನ್ನು ಅರಿತಮೇಲೆ ಈ ಮಂತ್ರದ ಅರ್ಥವು ಸರಳವಾಗಿ ಕಾಣುವುದು. ಇದರಲ್ಲಿ ಬ್ರಹ್ಮವು ಅತ್ಯಂತ ಸೂಕ್ಷ್ಮವೆಂಬುದನ್ನು ಸ್ಪಷ್ಟಪಡಿಸಿದೆ. ಒಂದು ವಸ್ತುವಿನ ಸೂಕ್ಷ್ಮತೆಯು ಅದರ ವ್ಯಾಪಕ ಶಕ್ತಿಯನ್ನು ಆಧರಿಸಿರುತ್ತದೆ. ವ್ಯಾಪಕತ್ವವು ಕಡಿಮೆಯಾಗಿದ್ದರೆ ಅದರ ಸೂಕ್ಷ್ಮತೆಯೂ ಕಡಮೆ. ಘನಪದಾರ್ಥಗಳಿಗೆ ವ್ಯಾಪಕತ್ವ ಬಹಳ ಕಡಮೆ. ಅವು ಅತ್ಯಂತ ಸ್ಥೂಲ. ದ್ರವಪದಾರ್ಥಗಳು ಘನಪದಾರ್ಥಗಳಿಗಿಂತ ಸೂಕ್ಷ್ಮ. ಅನಿಲವು ದ್ರವಕ್ಕಿಂತ ಸೂಕ್ಷ್ಮ. ಅಂದರೆ ಅದರ ವ್ಯಾಪಕತ್ವವು ಹೆಚ್ಚು. ಅಕ್ಷರವೆನಿಸಿದ ಬ್ರಹ್ಮವು ಸರ್ವವ್ಯಾಪಕವಾಗಿರುವುದರಿಂದ ಅದು ಅತ್ಯಂತ ಸೂಕ್ಷ್ಮ, ಸೂಕ್ಷ್ಮಾತಿಸೂಕ್ಷ್ಮ.

**ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ–**

ಬ್ರಹ್ಮನಲ್ಲಿ ಲೋಕಗಳು ಇಡಲ್ಪಟ್ಟಿರುವುವು – ಅಂದರೆ ಸಕಲ ಲೋಕಗಳೂ ಬ್ರಹ್ಮನನ್ನು ಆಧರಿಸಿವೆ. ವಿಶ್ವದಲ್ಲಿರುವ ಸಕಲ ಪ್ರಾಣಿಗಳಿಗೂ ಬ್ರಹ್ಮವೇ ಆಶ್ರಯ. ಬ್ರಹ್ಮದಿಂದಲೇ ಸಕಲ ಜೀವಿಗಳ ಉತ್ಪತ್ತಿ. ಸರ್ವಭೂತಗಳ ಸ್ಥಿತಿಗೂ ಬ್ರಹ್ಮವೇ ಕಾರಣ. ಕೊನೆಗೆ ಬ್ರಹ್ಮದಲ್ಲಿಯೇ ಅವುಗಳ ಲಯ.

ಹೊರಗೆ ಕಾಣುವ ವಸ್ತುಗಳಲ್ಲದೆ ನಮ್ಮೊಳಗಿರುವ ಪ್ರಾಣ, ವಾಙ್ಮನಸ್ಸುಗಳಿಗೂ ಆ ಚೈತನ್ಯವೇ ಕಾರಣ. ಆ ಚೈತನ್ಯ ಕೇಂದ್ರವನ್ನು ನಾವು ಭೇದಿಸಿ ತಿಳಿಯಬೇಕು, ಎಂದು ಶ್ರುತಿಯು ಹೇಳುತ್ತಿದೆ. ಬುದ್ಧಿಯು ವಿಶ್ಲೇಷಿಸಿ, ವಿವೇಚನೆ ಮಾಡಿ ಜಡವಸ್ತುವನ್ನು ನಮ್ಮೊಳಗಿನ ಚೈತನ್ಯ ವಸ್ತುವಿನಿಂದ ಬೇರೆಮಾಡಿ ತಿಳಿಯುವುದೇ ವೇದಾಂತ ಸಾಧನೆ. ಬುದ್ಧಿಯು ಈ ಚೈತನ್ಯ ಶಕ್ತಿಯನ್ನು ಅರಿತು ಅದರೊಡನೆ ತಾದಾತ್ಮ್ಯ ಹೊಂದುವುದೇ ಅದರ ಕೃತಕೃತ್ಯತೆ. ಸರ್ವವ್ಯಾಪಿಯಾದ ಚೈತನ್ಯವನ್ನು ಅನುಭಾವದಿಂದ ಸಾಕ್ಷಾತ್ಕರಿಸಿಕೊ ಎಂದು ಹೇಳಿರುವುದೂ ಅದನ್ನೇ. ಇದೇ ವೇದಾಂತದ ನಿದಿಧ್ಯಾಸನವೂ ಹೌದು. ಹಂತ ಹಂತದ ಸಾಧನೆಯ ರೂಪದಲ್ಲಿ

ಆತ್ಮವನ್ನು ತಿಳಿಯಬೇಕು. ಭಾವುಕತೆಯನ್ನು ತುಂಬಬೇಕು. ಅನುಭವದಾಳಕ್ಕೆ ಇಳಿಯಬೇಕು. ಅದನ್ನು ವಿಸ್ತರಿಸಬೇಕು. ಕೊನೆಗೆ ಆ ವಿಸ್ತಾರವಾದ ಭಾವಪೂರ್ಣ ಆತ್ಮಚಿಂತನೆಯಲ್ಲಿ ಐಕ್ಯವಾಗಬೇಕು. ಅದನ್ನೇ ಉಪನಿಷತ್ ಋಷಿಯು "ಓ ನನ್ನ ಮಿತ್ರನೇ ಅದನ್ನು ಭೇದಿಸಿ ತಿಳಿ" ಎಂದು ಒತ್ತಿ ಹೇಳಿರುವುದು. ಅದನ್ನು ಭೇದಿಸಿ ತಿಳಿಯುವ ರೀತಿಯನ್ನು ಪ್ರಸಿದ್ಧವಾದ ಮುಂದಿನ ಎರಡು ಮಂತ್ರಗಳಲ್ಲಿ ಮತ್ತೂ ವಿವರಿಸಿದೆ.

## ಓಂಕಾರದ ಧ್ಯಾನ

**ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ**
**ಶರಂ ಹ್ಯುಪಾಸಾನಿಶಿತಂ ಸಂಧಯೀತ ।**
**ಆಯಮ್ಯ ತದ್ಭಾವಗತೇನ ಚೇತಸಾ**
**ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥** ೩

**ಸೋಮ್ಯ** – ಎಲೈ ಸೋಮ್ಯನೆ, **ಔಪನಿಷದಂ** – ಉಪನಿಷತ್ತುಗಳಲ್ಲಿರುವ, **ಮಹಾಸ್ತ್ರಂ** – ಮಹಾ ಅಸ್ತ್ರವಾದ, **ಧನುಃ** – ಬಿಲ್ಲನ್ನು, **ಗೃಹೀತ್ವಾ** – ತೆಗೆದುಕೊಂಡು, **ಉಪಾಸಾನಿಶಿತಂ** – ಉಪಾಸನೆಯಿಂದ (ನಿರಂತರವಾದ ಧ್ಯಾನದಿಂದ) ಹರಿತವಾಗಿರುವ, **ಶರಂ** – ಬಾಣವನ್ನು, **ಸಂಧಯೀತ** – ಜೋಡಿಸಿ, **ಆಯಮ್ಯ** – ಎಳೆದು, **ತದ್ಭಾವಗತೇನ** – ಅದರ ಭಾವನೆಯಲ್ಲಿ ಲೀನವಾಗಿರುವ, **ಚೇತಸಾ** – ಚಿತ್ತದಿಂದ, **ಲಕ್ಷ್ಯಂ** – ಗುರಿಯಾದ, **ತತ್ ಏವ ಅಕ್ಷರಂ** – ಆ ಅಕ್ಷರವನ್ನೇ, **ವಿದ್ಧಿ** – ಹೊಡೆ (ಭೇದಿಸು).

(೩) ಎಲೈ ಸೋಮ್ಯ, ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಪ್ರಣವವೆಂಬ ಧನುಸ್ಸನ್ನು ತೆಗೆದುಕೊಂಡು ನಿರಂತರ ಧ್ಯಾನದಿಂದ ಹರಿತವಾಗಿರುವ (ಸಂಸ್ಕಾರವಾಗಿರುವ) ಬಾಣವನ್ನು ಜೋಡಿಸಿ ಅದನ್ನು ಎಳೆದು ಬ್ರಹ್ಮಭಾವನೆಯಲ್ಲಿ ಲೀನವಾಗಿರುವ ಚಿತ್ತದಿಂದ ಲಕ್ಷ್ಯವಾದ ಆ ಅಕ್ಷರವನ್ನೇ ಹೊಡಿ (ಆ ಅಕ್ಷರದಲ್ಲಿಯೇ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸು).

**ಪ್ರಣವೋ ಧನುಃ ಶರೋ ಹ್ಯಾತ್ಮಾ**
**ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ**
**ಶರವತ್ ತನ್ಮಯೋ ಭವೇತ್ ॥** ೪

**ಪ್ರಣವಃ** – ಓಂಕಾರವು, **ಧನುಃ** – ಬಿಲ್ಲು, **ಆತ್ಮಾ ಹಿ** – ಆತ್ಮನೇ, **ಶರಃ** – ಬಾಣ, **ಬ್ರಹ್ಮ** – ಬ್ರಹ್ಮವು, **ತಲ್ಲಕ್ಷ್ಯಂ** – ಅದಕ್ಕೆ ಗುರಿಯೆಂದು, **ಉಚ್ಯತೇ** – ಹೇಳಲ್ಪಡುತ್ತದೆ, **ಅಪ್ರಮತ್ತೇನ** – ಎಚ್ಚರತಪ್ಪದೆ, **ವೇದ್ಧವ್ಯಂ** – (ಬ್ರಹ್ಮವೆಂಬ ಗುರಿಯನ್ನು) ಹೊಡೆಯಬೇಕು, **ಶರವತ್** – ಬಾಣದಂತೆ, **ತನ್ಮಯಃ ಭವೇತ್** – ತಲ್ಲೀನವಾಗಬೇಕು.-

(೪) ಓಂಕಾರವು ಧನುಸ್ಸು, ಆತ್ಮನೇ ಬಾಣ, ಬ್ರಹ್ಮವು ಅದರ ಗುರಿ. ಎಚ್ಚರ ತಪ್ಪದೇ

(ಏಕಾಗ್ರಚಿತ್ತನಾಗಿ) ಬ್ರಹ್ಮವೆಂಬ ಲಕ್ಷ್ಯವನ್ನು (ಗುರಿಯನ್ನು) ಹೊಡೆಯಬೇಕು ಹೊಡೆದ ಮೇಲೆ ಬಾಣದಂತೆ ಅದರಲ್ಲಿ ತನ್ಮಯನಾಗಬೇಕು.

ಈ ಎರಡು ಮಂತ್ರಗಳಲ್ಲೂ ತತ್ತ್ವವಿವರಣೆ, ಕವಿತಾಪ್ರತಿಭೆ ಎರಡೂ ಸ್ಫುಟವಾಗಿ ಪ್ರಕಟವಾಗಿವೆ. ಈ ಮಂತ್ರಗಳಲ್ಲಿ ಪದಲಾಲಿತ್ಯ, ಅರ್ಥಬಾಹುಳ್ಯ, ವಾಗ್‌ಸ್ಫುರಿ, ನಾದಮಾಧುರ್ಯ ಇವೆಲ್ಲವೂ ಸಮರಸವಾಗಿ ಕೂಡಿವೆ. ಇದು ನಮ್ಮ ವೇದಾಂತ ಮಂತ್ರಗಳ ವೈಶಿಷ್ಟ್ಯ. ಇವೆರಡು ಮಂತ್ರಗಳಲ್ಲೂ ವೇದಾಂತ ಸಾಧನೆಯ ಸಾರವೇ ಅಡಗಿದೆ. ಆದ್ದರಿಂದಲೇ ಈ ಮಂತ್ರಗಳು ಅನೇಕ ಆಚಾರ್ಯರ ನಾಲಗೆಯ ತುದಿಯಲ್ಲಿ, ಬರಹಗಾರರ ಲೇಖಣಿಯ ಮೊನೆಯಲ್ಲಿ, ಭಾಷಣಕಾರರ ಬಾಯಲ್ಲಿ ನಲಿದಾಡುತ್ತಿರುತ್ತವೆ.

ಅಕ್ಷರವೆನಿಸಿದ ಪರಬ್ರಹ್ಮವಸ್ತುವನ್ನು ನಮ್ಮ ಮನಸ್ಸಿನಿಂದ ಭೇದಿಸುವುದು ಹೇಗೆಂಬುದನ್ನು ಈ ಎರಡು ಮಂತ್ರಗಳಲ್ಲಿ ವಿವರಿಸಿದೆ. ಈ ತಿಳಿವನ್ನು ಅತ್ಯಂತ ಉಚಿತವಾದ ಉಪಮೆಯ ಮೂಲಕ ನಮಗೆ ಉಪದೇಶಿಸಿದೆ. ಪ್ರಣವ ಮಂತ್ರವಾದ ಓಂಕಾರವೇ ಧನುಸ್ಸು. ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಅದು ಮಹಾಸ್ತ್ರವು. ಅದರ ಅರ್ಥವನ್ನು ಸ್ಮರಿಸುತ್ತ ಅದಕ್ಕೆ ಬಾಣ ಹೂಡಬೇಕು. ಜೀವ ಚೈತನ್ಯವಾದ ಆತ್ಮವೇ ಬಾಣ. ಉಪಾಸನೆಯಿಂದ ಹರಿತವಾದ, ಧ್ಯಾನದಿಂದ ಸೂಕ್ಷ್ಮವಾದ ಬಾಣವು ನೇರವಾಗಿ ತನ್ನ ಗುರಿಯನ್ನು ಮುಟ್ಟಿ ಸರ್ವವ್ಯಾಪಿಯಾದ ಬ್ರಹ್ಮತತ್ತ್ವವನ್ನು ಸೇರಿ ಅದರಲ್ಲಿಯೇ ಸ್ಥಿರವಾಗಿ ನಿಲ್ಲುವಂತೆ ಮಾಡಬೇಕು. ಅಂದರೆ ನಮ್ಮ ಗುರಿಯಾದ ಬ್ರಹ್ಮವನ್ನು ತದೇಕ ಚಿತ್ತದಿಂದ ಲಕ್ಷ್ಯಮಾಡಿ ಅದರಲ್ಲೇ ಮನಸ್ಸನ್ನು ನಿಲ್ಲಿಸಬೇಕು ಎಂದರ್ಥ.

ಚಿಂತಿಸಿದಷ್ಟೂ ಈ ಚಿತ್ರಣವು ಅರ್ಥಪೂರ್ಣವಾಗಿ ತೋರುತ್ತದೆ. ಬಾಣವನ್ನು ಬಿಲ್ಲಿಗೆ ಹೂಡಿ ಅದರ ಹಿಂಭಾಗವನ್ನು ಬಲವಾಗಿ ಎಳೆದಾಗ ಅದರ ಹೆದೆಯು ತನ್ನ ಎದೆಯ ಕಡೆಗೇ ಮೊನಚಾಗಿ ಚಾಚಿಕೊಳ್ಳುತ್ತದೆ. ಅಂದರೆ ಓಂಕಾರವನ್ನು ಎದೆಯೊಳಗೆ ಉಚ್ಚರಿಸುತ್ತ, ಅದರ ಧ್ಯಾನವನ್ನೇ ಹೃದಯದಲ್ಲಿ ತುಂಬಿಕೊಂಡು ಓಂಕಾರದ ಅರ್ಥವನ್ನು ತನ್ನ ಅಂತಃಕರಣದಲ್ಲಿ ಅನುಭವಕ್ಕೆ ತಂದುಕೊಳ್ಳಬೇಕು. ಬಿಗಿಯಾಗಿ ಎಳೆದಿರುವ ಹಿಡಿತವನ್ನು ಒಂದು ಸಲ ಸಡಿಲಮಾಡಿದರೆ ಸಾಕು, ಬಾಣವು ಬಿಲ್ಲಿನ ಹೆದೆಯಿಂದ ಚಿಮ್ಮಿ ಅಂತರಿಕ್ಷದಲ್ಲಿ ಹಾರಿ ತನ್ನ ಗುರಿಯನ್ನು ಮುಟ್ಟುತ್ತದೆ. ಗುರಿಮುಟ್ಟುವುದೆಂದರೆ ಜೀವವು ಪರಮಾತ್ಮನಲ್ಲಿ ಒಂದಾಗುವುದು ಎಂದರ್ಥ. ಅದನ್ನು ಸಾಧಿಸಬೇಕೆಂಬುದೇ ಉಪನಿಷತ್ತಿನ ಉಪದೇಶದ ಉದ್ದೇಶ.

ಬಾಣದ ಮೊನೆಯು ಚೂಪಾಗಿದ್ದು ಧನುರ್ಧಾರಿಯ ಲಕ್ಷ್ಯವು ಸರಿಯಾಗಿದ್ದ ಪಕ್ಷದಲ್ಲಿ, ಬಾಣವು ತನ್ನ ಗುರಿಯನ್ನು ಭೇದಿಸಿ ಅದರೊಳಗೇ ಹುದುಗಿಕೊಳ್ಳುವುದು. ತನ್ನ ಜಡ ಉಪಾಧಿಗಳೇ ತಾನೆಂದು ತಿಳಿದಿದ್ದ ಜೀವವು ತನ್ನನ್ನು ಸುತ್ತಿದ್ದ ಜಡವಸ್ತುಗಳ ಸಂಪರ್ಕ ಕಳೆದುಕೊಂಡು ಓಂಕಾರದ ಉಪಾಸನೆಯಿಂದ ಬಿಲ್ಲಿನ ಹೆದೆಯನ್ನು ಬಿಟ್ಟು ಚಿಮ್ಮಿದ ಬಾಣದಂತೆ ತನ್ನ ಅಹಂಕಾರದ ವ್ಯಕ್ತಿತ್ವಭಾವವನ್ನು ಸಂಪೂರ್ಣವಾಗಿ ಕಿತ್ತೊಗೆದು ಮುಂದಕ್ಕೆ ಸಾಗುವುದು. ಯಾವಾಗ ತನ್ನ ಉಪಾಧಿಗಳ

ತಾದಾತ್ಮ್ಯವನ್ನೂ ಅಹಂಭಾವವನ್ನೂ ಕಳೆದುಕೊಳ್ಳುತ್ತದೆಯೋ ಆಗ ಜೀವಕ್ಕೆ ಅದರ ನಿಜಸ್ವರೂಪದ ಅರಿವಾಗುವುದು. ತಾನು ಸರ್ವವ್ಯಾಪಿಯಾದ ಬ್ರಹ್ಮದಿಂದ ಬೇರಲ್ಲವೆಂಬುದು ತನಗೇ ಸ್ಫುರಿಸುವುದು. ಆ ಜೀವಾತ್ಮೈಕ್ಯತೆಯ ಅರಿವೇ ಆತ್ಮಸಾಕ್ಷಾತ್ಕಾರದ ಪರಮಾನುಭವ. ಈ ಅನುಭವದ ವಿವರಣೆಯನ್ನು ಈ ಎರಡು ಮಂತ್ರಗಳಲ್ಲಿ ಹೇಳಿರುವಂತೆ ಬೇರಾವ ಉಪನಿಷತ್ತಿನಲ್ಲಿಯೂ ಹೇಳಿಲ್ಲ.

**ಅಪ್ರಮತ್ತೇನ ವೇದ್ಧವ್ಯಮ್ –**

ಹಿಂದೂ ತಾತ್ತ್ವಿಕರಲ್ಲಿ ಕೇವಲ ಊಹೆಯಾಗಲಿ, ಶುಷ್ಕವಾದ ಸಿದ್ಧಾಂತವಾಗಲಿ ಮನ್ನಣೆಪಡೆದಿಲ್ಲ. ಯಾವ ಸಿದ್ಧಾಂತವಾಗಲಿ ಅನುಭವದಲ್ಲಿ ಪರ್ಯವಸಾನವಾಗಬೇಕು. ಆದ್ದರಿಂದ ಪನೇ ತಾತ್ತ್ವಿಕ ಸಿದ್ಧಾಂತವನ್ನು ಮಂಡಿಸಿದರೂ, ಅದನ್ನು ಅನುಭವದ ಪರೀಕ್ಷೆಗೆ ಗುರಿಮಾಡಲು ತಕ್ಕ ಸಾಧನಗಳನ್ನು ಹೇಳಿಯೇ ತೀರಬೇಕು. ಇಲ್ಲವಾದರೆ ಆ ಸಿದ್ಧಾಂತವು ಮಾನ್ಯವಾಗದು. ಈ ಮಂತ್ರದಲ್ಲಿ ಕೂಡ ಆ ರೀತಿಯ ಗುರಿಮುಟ್ಟುವ ಸಾಧನಾ ಮಾರ್ಗವನ್ನು ತಿಳಿಯಪಡಿಸಿದೆ. 'ಅಪ್ರಮತ್ತೇನ ವೇದ್ಧವ್ಯಂ' ಎಂಬ ಮಾತುಗಳಲ್ಲಿ ಲಕ್ಷ್ಯವನ್ನು ಬಾಣದಿಂದ ಭೇದಿಸುವ ಉಪಮೆಯ ಮೂಲಕವೇ ಸಾಧನಾಮಾರ್ಗವನ್ನು ಸೂಚಿಸಿದೆ. ಬಾಣವನ್ನು ಹೆದೆಯಿಂದ ಬಿಡುಗಡೆಮಾಡುವಾಗ ನಮ್ಮ ಕೈ ನಡುಗಿದರಾಗಲಿ, ಗುರಿಯಕಡೆ ನಮ್ಮ ದೃಷ್ಟಿ ತಪ್ಪಿದರಾಗಲಿ ಬಾಣವು ಗುರಿಯನ್ನು ತಾಕುವ ಸಂಭವವಿರದು. ನಮ್ಮ ಹಿಡಿತವು ದೃಢವಾಗಿದ್ದು ನಮ್ಮ ಎಚ್ಚರವು ಅಚಲವಾಗಿದ್ದರೆ, ಬಾಣವು ಗುರಿಯನ್ನು ಭೇದಿಸುವುದು ಸಾಧ್ಯ. ಹಾಗೆಯೇ ಧ್ಯಾನದಲ್ಲಿ ನಮ್ಮ ಮನಸ್ಸು ಸ್ಥಿರವಾಗಿ, ಸ್ವಲ್ಪವೂ ವಿಚಲಿತವಾಗದೆ ಇದ್ದಾಗ ಮಾತ್ರ ಬ್ರಹ್ಮನಲ್ಲಿ ಅದು ಐಕ್ಯವಾಗಲು ಸಾಧ್ಯ. ಮನಸ್ಸಿನ ಚಾಂಚಲ್ಯ ಉಂಟಾಗುವುದು ನಮಗಿರುವ ಬಾಹ್ಯ ವಸ್ತುಗಳ ವಿಷಯಾಸಕ್ತಿಯಿಂದ. ಇಂದ್ರಿಯ ಚಪಲತೆಗಳನ್ನು ವಿರಕ್ತಿಯ ಮೂಲಕ ನಿವಾರಿಸಿಕೊಂಡು, ದೇಹಾಸಕ್ತಿ ಹಾಗೂ ಅಹಂಕಾರಗಳನ್ನು ಜಯಿಸಿ ಮನಸ್ಸಿನ ಏಕಾಗ್ರತೆಯನ್ನು ಪಡೆದಿದ್ದರೆ ಮಾತ್ರ ನಾವು ನಮ್ಮ ಗುರಿಯನ್ನು ಮುಟ್ಟಲು ಸಾಧ್ಯ. ವಿವೇಕ ವೈರಾಗ್ಯಗಳೇ ಮನಸ್ಸಿನ ಸ್ಥಿರತೆಗೆ ಸಾಧನೆಯ ಸೋಪಾನ. ಅವುಗಳನ್ನು ಸಾಧಿಸುವುದರಿಂದ ಧ್ಯಾನೋಪಾಸನೆಗಳ ಸ್ವಾಧೀನ. ಧ್ಯಾನೋಪಾಸನೆಗಳ ಮೂಲಕ ಆತ್ಮಾನುಭವ, ಬ್ರಹ್ಮಪ್ರಾಪ್ತಿ!

## ಯಾರನ್ನು ಕುರಿತು ಧ್ಯಾನಿಸಬೇಕು ?

**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷ–**
**ಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।**
**ತಮೇವೈಕಂ ಜಾನಥ ಆತ್ಮಾನ–**
**ಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ॥ ೫**

**ಯಸ್ಮಿನ್** – ಯಾವನಲ್ಲಿ (ಅಕ್ಷರ ಪುರುಷನಲ್ಲಿ), **ದ್ಯೌಃ** – ದ್ಯುಲೋಕವೂ, **ಪೃಥಿವೀ** – ಪೃಥ್ವಿಯೂ, **ಅಂತರಿಕ್ಷಂ ಚ** – ಅಂತರಿಕ್ಷವೂ, **ಸರ್ವೈಃ** – ಎಲ್ಲ, **ಪ್ರಾಣೈಃ ಚ ಸಹ** – ಪ್ರಾಣಗಳ (ಎಲ್ಲಾ ಕರಣಗಳ) ಒಡಗೂಡಿ, **ಮನಃ** – ಮನಸ್ಸೂ, **ಓತಂ** – ನೇರಿಕೊಂಡಿರುವುದೋ, **ತಂ** – ಆ, **ಏಕಂ ಆತ್ಮಾನಮೇವ** – ಈ ಆತ್ಮನೊಬ್ಬನನ್ನೇ, **ಜಾನಥ** – ತಿಳಿದುಕೊಳ್ಳಿರಿ, **ಅನ್ಯಾಃ ವಾಚಃ** – ಬೇರೆ ಮಾತುಗಳನ್ನು, **ವಿಮುಂಚಥ** – ಬಿಟ್ಟುಬಿಡಿ, **ಏಷಃ** – ಇದು, **ಅಮೃತಸ್ಯ** – ಅಮೃತತ್ವಕ್ಕೆ (ಮೋಕ್ಷಪ್ರಾಪ್ತಿಗೆ), **ಸೇತುಃ** – ಸೇತುವೆ.

**(೫) ದ್ಯುಲೋಕ, ಪೃಥಿವೀ, ಅಂತರಿಕ್ಷ, ಎಲ್ಲ ಪ್ರಾಣಗಳಿಂದೊಡಗೂಡಿದ, ಎಂದರೆ ಎಲ್ಲ ಕರಣಗಳಿಂದೊಡಗೂಡಿದ ಮನಸ್ಸೂ, ಯಾವ ಅಕ್ಷರ ಪುರುಷನಲ್ಲಿ ಸೇರಿಕೊಂಡಿರುವುವೋ (ಹೆಣೆದುಕೊಂಡಿರುವುವೋ) ಆ ಆತ್ಮನೊಬ್ಬನನ್ನೇ (ಎಲ್ಲಕ್ಕೂ ಆಶ್ರಯನಾಗಿರುವ ಒಬ್ಬನೇ ಆಗಿ ತನಗೆ ಎರಡನೆಯದಿಲ್ಲದ ಆ ಆತ್ಮನನ್ನೇ) ಅರಿತುಕೊಳ್ಳಿ. ಅಪರವಿದ್ಯೆಯ ರೂಪವಾಗಿರುವ ಬೇರೆ ಮಾತುಗಳನ್ನು ಬಿಟ್ಟುಬಿಡಿ ಈ ಆತ್ಮಜ್ಞಾನವೇ ಮೋಕ್ಷಪ್ರಾಪ್ತಿಗೆ ಸೇತುವೆ (ಸುಲಭವಾದ ಮಾರ್ಗ).**

### ಓತಂ –

ಕಾರಣವೇ ಕಾರ್ಯದ ಜೀವಾಳ. ಮಣ್ಣೇ ಮಡಕೆಗಳಿಗೆ ಆಧಾರ. ಸಕಲ ಲೋಕಗಳೂ, ಸಕಲ ಲೋಕಗಳ ಸಮಸ್ತ ವಸ್ತುಗಳೂ, ಮನಸ್ಸು ಪ್ರಾಣಗಳನ್ನೊಳಗೊಂಡು ಎಲ್ಲಕ್ಕೂ ಹಾಗೂ ಅವುಗಳ ಕ್ರಿಯಾವಿಶೇಷಕ್ಕೂ ಆತ್ಮವೇ ಆಶ್ರಯ. ಸರ್ವಲೋಕಗಳೂ, ಜೀವಿಗಳೂ, ಪ್ರಾಣಮನಸ್ಸುಗಳೂ ಯಾವುದರಲ್ಲಿ ಸೇರಿಕೊಂಡಿವೆಯೋ ಆ ಆತ್ಮವನ್ನು ತಿಳಿಯಿರಿ ಎಂದು ಶ್ರುತಿಯು ಹೇಳುತ್ತಿದೆ.

ಈ ತತ್ತ್ವವನ್ನು ತಿಳಿಯದೆ ನಾವು ದೇಹ, ಮನಸ್ಸು ಬುದ್ಧಿಗಳೊಡನೆ ಹಾಗೂ ನಾವಿರುವ ಅಶಾಶ್ವತ ಪ್ರಾಪಂಚಿಕ ವಸ್ತುಗಳೊಡನೆ ತಾದಾತ್ಮ್ಯ ಹೊಂದಿ ದುಃಖಕ್ಕೆ ಒಳಗಾಗುತ್ತಿದ್ದೇವೆ. ನಮ್ಮ ಕಷ್ಟಸಂಕಟ, ದುಗುಡ ದುಮ್ಮಾನ, ಅಲ್ಪತೆ ಅಶಕ್ತತೆಗಳೆಲ್ಲಾ ಈ ವಿಕೃತ ಮನೋಭಾವದಿಂದ ಉಂಟಾಗುತ್ತಿವೆ. ಆತ್ಮವನ್ನರಿತುಕೊಳ್ಳುವುದೇ ಈ ಗೋಜು ಗೊಂದಲಗಳಿಗೆ ನಿಜವಾದ ಪರಿಹಾರವೆಂದು ಶ್ರುತಿಯು ತಿಳಿಸುತ್ತಿದೆ.

### ತಮೇವೈಕಂ ಜಾನಥ –

'ಅವನೊಬ್ಬನನ್ನೇ ತಿಳಿಯಿರಿ'. ಇಲ್ಲಿ 'ತಿಳಿ' ಎಂದರೆ ನಾವು ಬಾಹ್ಯ ವಸ್ತುಗಳನ್ನು ಇಂದ್ರಿಯಗಳ ಮೂಲಕ ತಿಳಿಯುವಂತಲ್ಲ. ಇಲ್ಲಿ ತಿಳಿಯಬೇಕಾದ ವಸ್ತು ಮತ್ತು ತಿಳಿದುಕೊಳ್ಳುವ ವಸ್ತು – ಎರಡೂ ಒಂದೇ. ಅಂದರೆ ನಮ್ಮಲ್ಲಿ ಎಲ್ಲವನ್ನೂ ತಿಳಿಯುವ 'ಮೂಲ ಅರಿವು' ಎಂಬುದಿದೆಯಲ್ಲ, ಅದನ್ನೇ ನಾವು ವಿಚಾರದಿಂದ ತಿಳಿಯಬೇಕು. ನಾವು ಹೊಸದಾಗಿ ಹೊರಗಿನದೇನನ್ನೂ ತಿಳಿಯಬೇಕಾದ್ದಿಲ್ಲ. ಇದು ನಮ್ಮೊಳಗಿನ ಸ್ವರೂಪವನ್ನು ನಾವೇ ಪುನಃ ಗುರುತಿಸುವುದು. ನಮ್ಮ ಅಂತರಾಳದ ಆತ್ಮನನ್ನು ಗುರುತಿಸಬೇಕಾದರೆ ನಾವು ಹೊರಗಿನ ವಿಷಯಗಳ ಹವ್ಯಾಸವನ್ನು ತೊರೆಯಬೇಕು. ಅದನ್ನೇ ಶ್ರುತಿಯು 'ಬೇರೆ

ಮಾತುಗಳನ್ನು ಬಿಟ್ಟುಬಿಡಿ' (ಅನ್ಯಾ ವಾಚೋ ವಿಮುಂಚಥ) ಎಂದು ಹೇಳಿರುವುದರ ಇಂಗಿತ. ವ್ಯಕ್ತಿಯು ಪ್ರಾಪಂಚಿಕ ವ್ಯವಹಾರದ ಅಥವಾ ಅದಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು – ಸಾಮಾಜಿಕ, ರಾಜಕೀಯ, ಮತೀಯ ಯಾವುದಾದರಾಗಲಿ – ಕುರಿತು ಚಿಂತಿಸುತ್ತಿದ್ದರೆ, ಅವನ ಗಮನವೆಲ್ಲ ಬಾಹ್ಯಾಸಕ್ತವಾಗಿರುವುದೇ ಹೊರತು ತನ್ನೊಳಗಿನ ಸ್ವರೂಪದ ಕಡೆಗೆ ಹರಿಯುವುದಿಲ್ಲ. ಇದು ಪ್ರಕೃತಿ ನಿಯಮ. ನಮಗೆ ಸ್ವಪ್ನದ ಅನುಭವವಾಗುತ್ತಿರುವಾಗ ಜಾಗ್ರತ ಪ್ರಪಂಚದ ಅರಿವಿರುವುದಿಲ್ಲ. ಜಾಗ್ರತವಾಗಿರುವಾಗ ಸ್ವಪ್ನದ ಅನುಭವವಿಲ್ಲ. ಹಾಗೆಯೇ ನಾವು ಜಾಗ್ರತ್ ಸ್ವಪ್ನಗಳ ಸ್ಥಿತಿಗಳನ್ನು ಮೀರಿ ಏರಿ ಹೋಗುವವರೆಗೆ ಸುಷುಪ್ತಿ ಸ್ಥಿತಿಯ ಅನುಭವವಿಲ್ಲ. ಈ ಮೂರನ್ನೂ ದಾಟಿ ಹೋದ ಮೇಲೆ ನಮಗೆ ತುರೀಯ ಸ್ಥಿತಿ, ಆತ್ಮಾನುಭವ. ಈ ಸ್ಥಿತಿಯ ಅನುಭವವಾಗಬೇಕಾದರೆ ಮೊದಲು ನಮಗೆ ಬಾಹ್ಯವಿಷಯಗಳಲ್ಲಿ ವೈರಾಗ್ಯ ಬರಬೇಕು.

**ಅಮೃತಸ್ಯೈಷ ಸೇತುಃ—**

'ಅಮೃತತತ್ತ್ವಕ್ಕೆ ಇದೇ ಸೇತುವೆ'. ಸಂಸಾರ ಸಾಗರದಲ್ಲಿ ಗಳಿಗೆ ಗಳಿಗೆಗೂ ಪರ್ವತೋಪಾದಿಯಲ್ಲಿ ಮೇಲೇರಿ ಬರುತ್ತಿರುವ ದುಃಖ ದುರಂತಗಳೆಂಬ ಅಲೆಗಳ ಧಾಳಿಯನ್ನು ದಾಟಿ ಶಾಶ್ವತವಾದ ಶಾಂತಿಧಾಮವನ್ನು ಸೇರಲು ಆತ್ಮಜ್ಞಾನವೇ ಸುಗಮವಾದ ಸೇತುವೆ. ಅಮೃತತತ್ತ್ವದ ದಡವನ್ನು ಸೇರಲು ಇರುವುದು ಅದೊಂದೇ ಮಾರ್ಗ. ಆತ್ಮಜ್ಞಾನ ಬರುವವರೆಗೂ ಕಷ್ಟಸಂಕಟಗಳ ಸುಳಿಯಲ್ಲಿ ಸಿಕ್ಕಿ ಒದ್ದಾಡುತ್ತಲೇ ಇರುತ್ತೇವೆ. ಆ ದುಃಸ್ಥಿತಿಯಿಂದ ಪಾರಾಗಲು ನಮ್ಮ ಬಹಿರಂಗದ ಮತ್ತು ಅಂತರಂಗದ ವಿಷಯಾಸಕ್ತಿಗಳನ್ನು ದೂರಮಾಡಿ ಅವುಗಳ ಹಿಡಿತದಿಂದ ತಪ್ಪಿಸಿಕೊಳ್ಳಬೇಕು. ಅಂದರೆ ನಮ್ಮ ಮನಸ್ಸು ಬುದ್ಧಿಗಳನ್ನು ಅತಿಕ್ರಮಿಸಿ ಹೋಗಬೇಕು. ನಮ್ಮ ಅಹಂಕಾರವನ್ನು ನಾಶಪಡಿಸಬೇಕು. ಮನಸ್ಸನ್ನು ಮೀರಿ ಹೋಗುವುದೆಂದರೆ ಅಹಂಕಾರವನ್ನು ನಾಶಪಡಿಸಿದಂತೆಯೇ. ಏಕೆಂದರೆ ಅಹಂಕಾರವು ನಮ್ಮ ಮನಸ್ಸನ್ನೇ ಆಶ್ರಯಿಸಿರುತ್ತದೆ.

## ಧ್ಯಾನಿಸುವ ಪರಿ

**ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ**
**ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ।**
**ಓಮಿತ್ಯೇವಂ ಧ್ಯಾಯಥ ಆತ್ಮಾನಂ**
**ಸ್ವಸ್ತಿ ವಃ ಪಾರಾಯ* ತಮಸಃ ಪರಸ್ತಾತ್॥** ೬

**ರಥನಾಭೌ** – ರಥದ ಚಕ್ರದ ನಡುವೆ ಇರುವ ಗುಂಬದ, **ಅರಾಃ ಇವ** –

*ಇದಕ್ಕೆ 'ಪರಾಯ' ಎಂಬ ಪಾಠಾಂತರವಿದೆ. ಆದರೆ ಅದಕ್ಕಿಂತ 'ಪಾರಾಯ' ಎಂಬುದೇ ಉತ್ತಮ.

ಅರೆಕೋಲುಗಳಂತೆ, **ಯತ್ರ** – ಎಲ್ಲಿ, **ನಾಡ್ಯಃ** – ನಾಡಿಗಳು, **ಸಂಹತಾಃ** – ಸೇರಿಕೊಂಡಿರುವುವೋ, ಅಲ್ಲಿ, **ಸಃ ಏಷಃ** – ಆ ಈ ಆತ್ಮನು, **ಬಹುಧಾ ಜಾಯಮಾನಃ** – ಬಗೆ ಬಗೆಯಾಗಿ ಹುಟ್ಟುತ್ತ, **ಅಂತಃ** – ಒಳಗೆ, **ಚರತೇ** – ಸಂಚರಿಸುತ್ತಿರುವವನು, **ಓಂ ಇತಿ** – ಓಂ ಎಂದು, **ಏವಂ** – ಈ ರೀತಿಯಾಗಿ, **ಆತ್ಮಾನಂ** – ಆತ್ಮನನ್ನು, **ಧ್ಯಾಯಥ** – ಧ್ಯಾನಮಾಡಿ, **ತಮಸಃ** – ಕತ್ತಲೆಯ, **ಪರಸ್ತಾತ್** – ಆಚೆ ಇರುವ, **ಪಾರಾಯ** – ದಡಕ್ಕೆ (ದಡವನ್ನು ಸೇರಲು ಹೋಗುತ್ತಿರುವ) **ವಃ** – ನಿಮಗೆ, **ಸ್ವಸ್ತಿ** – ಮಂಗಳವಾಗಲಿ.

(೬) ರಥಚಕ್ರದ ಗುಂಬದಲ್ಲಿ ಅರೆಕೋಲುಗಳು ಸೇರಿಕೊಂಡಿರುವ ಹಾಗೆ ಎಲ್ಲಿ ನಾಡಿಗಳೆಲ್ಲ ಬಂದು ಸೇರಿಕೊಂಡಿರುವುವೋ ಅಲ್ಲಿ ಈ ಆತ್ಮನು ಬಹುವಿಧವಾಗಿ ಹುಟ್ಟುತ್ತಾ (ಬಹುವಿಧವಾಗಿ ಅರಿವನ್ನುಂಟುಮಾಡುತ್ತಿರುವುದರಿಂದ ಹುಟ್ಟುವಂತೆ ಕಾಣುತ್ತ) ಸಂಚರಿಸುತ್ತಿರುವವನು. ಓಂ ಎಂಬುದಾಗಿ ಆತ್ಮನನ್ನು ಧ್ಯಾನಮಾಡಿ ತಮಸ್ಸಿನ ಆಚೆ ಇರುವ ದಡವನ್ನು ಸೇರಲು ಹೊರಟಿರುವ ನಿಮಗೆ ಮಂಗಳವಾಗಲಿ. (ಯಾವ ಅಡಚವಣೆಯೂ ಉಂಟಾಗದಿರಲಿ ಎಂದರ್ಥ)

**ಅರಾ ಇವ ರಥನಾಭೌ –**

ಬಂಡಿಯ ಚಕ್ರದಲ್ಲಿ ಅರೆಕೋಲುಗಳು (ಹಾರೆ ಕೋಲುಗಳು) ಪರಿಧಿಯ ಬೇರೆ ಬೇರೆ ಭಾಗಗಳನ್ನು ತನ್ನ ಕೇಂದ್ರವಾದ ಗುಂಬಕ್ಕೆ ಸೇರಿಸಿರುತ್ತವೆ. ಆದರಿಂದ ಚಕ್ರದ ಮೇಲೆ ಬೀಳುವ ಭಾರವು ಸಮವಾಗಿ ಎಲ್ಲ ಭಾಗಗಳಿಗೂ ಹಂಚಲ್ಪಡುತ್ತದೆ. ಅಲ್ಲದೆ ಚಕ್ರವು ಸರಾಗವಾಗಿ ತಿರುವುದಕ್ಕೂ ಅನುಕೂಲವಾಗಿರುತ್ತದೆ. ಹಾರೆಕೋಲುಗಳು ಚಕ್ರಕ್ಕೆ ಆಧಾರಭೂತವಾದವು. ಹಾಗೆಯೇ ದೇಹದ ಎಲ್ಲಾ ಭಾಗಗಳಲ್ಲಿಯೂ ವ್ಯಾಪಿಸಿಕೊಂಡಿರುವ ನಾಡಿಗಳು ಕೇಂದ್ರದಂತಿರುವ ಹೃದಯದಲ್ಲಿ ಬಂದು ಸೇರಿಕೊಂಡಿರುತ್ತವೆ. ಯೋಗಶಾಸ್ತ್ರದ ಪ್ರಕಾರ ಎಂಭತ್ತೆರಡು ಸಾವಿರ ಸೂಕ್ಷ್ಮನಾಡಿಗಳು ದೇಹದ ಅಂಗಾಂಗಗಳನ್ನೆಲ್ಲಾ ಹೃದಯಕ್ಕೆ ಸಂಪರ್ಕಿಸಿರುತ್ತವೆ. ಈ ಹೃದಯದಲ್ಲಿ ನಮ್ಮ ಮನಸ್ಸು ಬುದ್ಧಿಗಳಿಗೆ ಸಾಕ್ಷೀಭೂತವಾಗಿ ಆತ್ಮವು ಚಲಿಸುತ್ತಿರುತ್ತದೆ.

ದೇಹರಚನೆಯ ವಿಜ್ಞಾನದ ಪ್ರಕಾರ ದೇಹವನ್ನು ವಿಭಜಿಸಿದಾಗ ಈ ತರಹದ ನಾಡಿಗಳಾಗಲಿ, ಅವುಗಳ ಮಧ್ಯೆ ವಿರಾಜಮಾನವಾಗಿರುವ ಆತ್ಮವಾಗಲಿ ಕಂಡುಬರುವುದಿಲ್ಲ. ನಮ್ಮ ಶಾಸ್ತ್ರಗಳ ಪ್ರಕಾರ ನಾಡಿಗಳು ಪ್ರಬಲವಾದ ವಿಶಿಷ್ಟ ಮಾನಸಿಕ ಶಕ್ತಿಧಾರೆಗಳು. ಅವು ಕೇಂದ್ರದಿಂದ ಹೊರಹೊಮ್ಮಿ ದೇಹದ ಅಂಗಾಂಗಗಳ ತುತ್ತತುದಿಯನ್ನು ಸೇರಿ, ಅವುಗಳ ಕಾರ್ಯನಿರ್ವಹಣೆಯನ್ನು ನಿಯಮನ ಮಾಡುತ್ತವೆ. ಅವು ಯಾವ ಶಸ್ತ್ರಚಿಕಿತ್ಸೆಯ ಪ್ರಯೋಗಾಲಯದಲ್ಲೂ ಕಂಡುಬರುವಂತಹ ವಸ್ತುಗಳಲ್ಲ. ಪ್ರತಿಯೊಬ್ಬ ಮನುಷ್ಯನಿಗೂ 'ಮನಸ್ಸು' ಎಂಬುದೊಂದು ಇದೆ ಎಂದು ನಮಗೆಲ್ಲರಿಗೂ ತಿಳಿದ ವಿಷಯವೇ. ಅದನ್ನು ಯಾವ ಶಸ್ತ್ರಚಿಕಿತ್ಸೆಯಿಂದ ಹೊರತೆಗೆದು 'ಇದೇ ಮನಸ್ಸು' ಎಂದು ಪ್ರದರ್ಶಿಸಲು ಸಾಧ್ಯ ? ಈ ನಾಡಿಗಳ ವಿಷಯವೂ ಹಾಗೆಯೇ.

ಚೈತನ್ಯ ಕೇಂದ್ರವಾದ ನಮ್ಮ ಹೃದಯದಲ್ಲಿ ವ್ಯಾಪಿಸಿಕೊಂಡಿರುವ ಆತ್ಮನನ್ನು

'ಓಂ' ಎಂದು ಧ್ಯಾನಿಸಿ. ಹೇಗೆ ಓಂಕಾರದ ಧ್ಯಾನವು ಆತ್ಮಸ್ವರೂಪ ದರ್ಶನವನ್ನು ಮಾಡಿಸಬಲ್ಲದೆಂಬುದನ್ನು ಈಗಾಗಲೇ ಹಿಂದಿನ ಮಂತ್ರದಲ್ಲಿ, ಪ್ರಣವವೇ ಧನುಸ್ಸು, ಆತ್ಮವೇ ಬಾಣ ಮುಂತಾಗಿ ಹೇಳಿ ಬ್ರಹ್ಮಾತ್ಮೈಕ್ಯ ಗತಿಯನ್ನು ವಿವರಿಸಿದೆ.

ಹೀಗೆ ಸಾಧಕನ ಗುರಿಯನ್ನೂ, ಸಾಧನಮಾರ್ಗವನ್ನೂ ವಿವರಿಸಿದ ಮೇಲೆ ಗುರುವು ಶಿಷ್ಯನಿಗೆ ಸ್ವಸ್ತಿವಚನದಿಂದ ಹರಸುತ್ತಾನೆ. 'ನಿನಗೆ ಸ್ವಸ್ತಿಯಾಗಲಿ', ನಿರ್ವಿಘ್ನವಾಗಲಿ ಎಂದು ಗುರುವು ಶಿಷ್ಯನನ್ನು ಆಶೀರ್ವದಿಸುತ್ತಾನೆ. ಲಕ್ಷ್ಯವನ್ನೂ, ಅದನ್ನು ಪಡೆಯುವ ಮಾರ್ಗವನ್ನೂ ಹೇಳಿದ ಮೇಲೆ ಗುರುವಿನ ಕಾರ್ಯ ಸಮಾಪ್ತವಾದಂತೆಯೇ. ಅಲ್ಲಿಂದ ಮುಂದೆ ಶಿಷ್ಯನು ತನ್ನ ಸಾಧನೆಯನ್ನು ಮುಂದುವರಿಸಬೇಕು. ಅವನ ದಾರಿ ಸುಗಮವಾಗಲೆಂದೂ, ಅವನಿಗೆ ಶೀಘ್ರ ವಿಜಯ ಲಭಿಸಲೆಂದೂ ಗುರುವು ಹಾರೈಸಬಹುದೇ ವಿನಹ ತನ್ನ ಜೀವನದ ಪ್ರಗತಿ ಯಾತ್ರೆಯ ಪ್ರತಿಹಂತವನ್ನೂ ಶಿಷ್ಯನೇ ಏರಿ, ದಾಟಿ ಗುರಿಯನ್ನು ಮುಟ್ಟಬೇಕು.

## ಬ್ರಹ್ಮದ ವರ್ಣನೆ

**ಯಃ ಸರ್ವಜ್ಞಃ ಸರ್ವವಿದ್ಯಸ್ಯೈಷ ಮಹಿಮಾ ಭುವಿ ।**
**ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಪ್ರತಿಷ್ಠಿತಃ॥**
**ಮನೋಮಯಃ ಪ್ರಾಣಶರೀರನೇತಾ**
**ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।**
**ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ**
**ಆನಂದರೂಪಮಮೃತಂ ಯದ್ವಿಭಾತಿ ॥*** ೭

**ಯಃ** – ಯಾರು, **ಸರ್ವಜ್ಞಃ** – ಸರ್ವಜ್ಞನೊ (ಎಲ್ಲವನ್ನೂ ತಿಳಿದಿರುವವನೊ), **ಸರ್ವವಿತ್** – ಎಲ್ಲವನ್ನೂ ವಿಶೇಷವಾಗಿ ತಿಳಿದಿರುವವನೋ, **ಯಸ್ಯ** – ಯಾರಿಗೆ, **ಭುವಿ** – ಭೂಮಿಯಲ್ಲಿ, **ಏಷಃ** – ಇದು, **ಮಹಿಮಾ** – ವಿಭೂತಿಯೋ, **ಏಷಃ ಆತ್ಮಾ ಹಿ** – ಈ ಆತ್ಮನೇ, **ದಿವ್ಯೇ** – ದಿವ್ಯವಾದ (ಪ್ರಕಾಶವುಳ್ಳ), **ಬ್ರಹ್ಮಪುರೇ** – ಬ್ರಹ್ಮಪಟ್ಟಣದಲ್ಲಿ, **ವ್ಯೋಮ್ನಿ** – ಆಕಾಶದಲ್ಲಿ (ಹೃತ್ಕಮಲದಲ್ಲಿ), **ಪ್ರತಿಷ್ಠಿತಃ** – ನೆಲೆಸಿರುತ್ತಾನೆ. (ಆ ಆತ್ಮನು) **ಮನೋಮಯಃ** – ಮನಸ್ಸನ್ನು ಉಪಾಧಿಯಾಗಿ ಉಳ್ಳವನು, **ಪ್ರಾಣಶರೀರನೇತಾ** – ಪ್ರಾಣವೆಂಬ ಶರೀರವನ್ನು (ಒಂದು ಸ್ಥೂಲಶರೀರದಿಂದ ಇನ್ನೊಂದು ಸ್ಥೂಲ ಶರೀರಕ್ಕೆ) ನಡೆಸುವವನು, **ಹೃದಯಂ** – ಹೃದಯವನ್ನು (ಬುದ್ಧಿಯನ್ನು) **ಸನ್ನಿಧಾಯ** – ಸರಿಯಾಗಿಟ್ಟು, **ಅನ್ನೇ** – ಅನ್ನದಲ್ಲಿ, **ಪ್ರತಿಷ್ಠಿತಃ** – ಪ್ರತಿಷ್ಠಿತನಾಗಿರುತ್ತಾನೆ, **ಯತ್** – ಯಾವ, **ಆನಂದ ರೂಪಂ** – ಆನಂದ ಸ್ವರೂಪವಾದ, **ಅಮೃತಂ** – ಬ್ರಹ್ಮವು, **ವಿಭಾತಿ** – ಪ್ರಕಾಶಿಸುತ್ತಿರುವುದೋ, **ತತ್** – ಅದನ್ನು, **ಧೀರಾಃ** – ಜ್ಞಾನಿಗಳು, **ವಿಜ್ಞಾನೇನ** – ವಿಶಿಷ್ಟವಾದ ಜ್ಞಾನದಿಂದ, **ಪರಿಪಶ್ಯಂತಿ**

---

*ಕೆಲವು ಪಾಠಾಂತರಗಳ ಪ್ರಕಾರ ಈ ಮಂತ್ರವನ್ನು ೭,೮ ಎಂದು ಎರಡು ಮಂತ್ರಗಳಾಗಿ ನಿರೂಪಿಸಿದೆ.

— ಎಲ್ಲೆಲ್ಲಿಯೂ ಪರಿಪೂರ್ಣವಾಗಿ ಕಂಡುಕೊಳ್ಳುವರು.

(೭) ಯಾರು ಸರ್ವಜ್ಞನೋ, ಸರ್ವವಿದನೋ, ಯಾವನಿಗೆ ಲೋಕದಲ್ಲಿ ಇದು ವಿಭೂತಿಯೋ ಈ ಆತ್ಮನು ದಿವ್ಯವಾದ ಬ್ರಹ್ಮಪುರದಲ್ಲಿ (ಹೃತ್ಕಮಲದೊಳಗಿರುವ ಆಕಾಶದಲ್ಲಿ) ಪ್ರತಿಷ್ಠಿತನಾಗಿರುತ್ತಾನೆ. ಈ ಆತ್ಮನು ಮನೋಮಯನು ಎಂದರೆ ಹೃದಯದಲ್ಲಿದ್ದುಕೊಂಡು ಮನಸ್ಸಿನ ಸಕಲ ವೃತ್ತಿಗಳನ್ನೂ ತಿಳಿಯುವವನು, ಪ್ರಾಣವನ್ನು ಒಂದು ಸ್ಥೂಲಶರೀರದಿಂದ ಇನ್ನೊಂದು ಸ್ಥೂಲಶರೀರಕ್ಕೆ ಒಯ್ಯುವುದರಿಂದ ಶರೀರದ ನೇತೃ ಎಂದೆನಿಸಿದ್ದಾನೆ. ಬುದ್ಧಿಯನ್ನು ಸುಸ್ಥಿತಿಯಲ್ಲಿಟ್ಟು ಅನ್ನದಿಂದ ಶರೀರವನ್ನು ಪೋಷಿಸಿ, ಹೃದಯದಲ್ಲಿ ಬುದ್ಧಿಯನ್ನು ಇರಿಸಿ ಆ ಮೂಲಕ ಪ್ರಕಾಶಿಸುತ್ತಾನೆ ಆನಂದ ರೂಪವಾದ, ಪ್ರಕಾಶಮಾನವಾಗಿರುವ ಬ್ರಹ್ಮವನ್ನು ಜ್ಞಾನಿಗಳು ವಿಶಿಷ್ಟವಾದ ಜ್ಞಾನದ ಮೂಲಕ ಎಲ್ಲೆಲ್ಲಿಯೂ ಕಂಡುಕೊಳ್ಳುವರು.

ಹಿಂದಿನ ಮಂತ್ರದಲ್ಲಿ ಆತ್ಮನು ಇರುವ ಸ್ಥಾನವನ್ನು ಶರೀರದಲ್ಲಿ ಜೀವಕೇಂದ್ರವಾದ, ನಾಡಿಗಳಿಗೆ ಗುಂಬದಂತಿರುವ ಹೃದಯವೆಂದು ನಿರ್ದೇಶಿಸಿದೆ. ಈ ಮಂತ್ರದಲ್ಲಿ ಅದನ್ನು ಇನ್ನೂ ವಿಶದಪಡಿಸಿದೆ.

ಸರ್ವಜ್ಞಃ, ಸರ್ವವಿತ್ ಎಂಬ ಶಬ್ದಗಳ ಅರ್ಥವನ್ನು ಈಗಾಗಲೇ ಹಿಂದೆ* ವಿವರಿಸಿದೆ.

**ಯಸ್ಯೈಷ ಮಹಿಮಾ —**

ಯಾರಿಗೆ ಇದು ಮಹಿಮೆಯೋ — ಅಂದರೆ ಆತ್ಮನಿಗೆ ಇದು ವಿಭೂತಿ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ — ಎಂದು. ಇದು ಎಂದರೆ ಯಾವುದು ? ಇದು ಎಂದರೆ ಭೂಮಿ, ಅಂತರಿಕ್ಷ, ಸೂರ್ಯ, ಚಂದ್ರ, ನದೀ ಸಮುದ್ರಗಳು ಹಾಗೂ ಸ್ಥಾವರ ಜಂಗಮಗಳನ್ನೊಳಗೊಂಡ ಸಾರ್ವತ್ರಿಕ ಪ್ರಕೃತಿ ಪ್ರಪಂಚವೂ ಯಾರ ನಿಯಮಗಳಿಂದ ವ್ಯವಸ್ಥಿತವಾಗಿ ನಡೆಯುತ್ತಿದೆಯೋ ಅದು. ಅಂತಹ ಸರ್ವನಿಯಾಮಕತ್ವದ ಮಹಿಮೆಯು ಪರಮಾತ್ಮನದು ಎಂದು ಶ್ರುತಿಯು ಹೇಳುತ್ತಿದೆ. ಈ ರೀತಿ ಪರಮಾತ್ಮನ ಮಹಿಮೆಯನ್ನು ಒತ್ತಿ ಹೇಳುವ ವಾಕ್ಯಗಳು ಸಾಮಾನ್ಯವಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ಕಂಡುಬರುತ್ತವೆ. ಪ್ರಕೃತಿ ನಿಯಮಗಳ ಕಟ್ಟುಪಾಡು ಅವನ ಶಕ್ತಿಯ ಹಾಗೂ ಅವನ ಮಹಿಮೆಯ ಕೈವಾಡ. ಪ್ರಕೃತಿ ನಿಯಮಗಳನ್ನು ಉಲ್ಲಂಘಿಸುವುದು ಅಸಾಧ್ಯ. ಅದನ್ನು ಯಾರೂ ಮೀರಲಾರರು. ಪ್ರಕೃತಿಯು ತನ್ನ ನಿಯಮದಂತೆ ನಡದೇ ನಡೆಯುತ್ತದೆ. ಇದು ಪ್ರಕೃತಿ ನಿಯಾಮಕನ ಮಹಿಮೆ.

**ಬ್ರಹ್ಮಪುರಿ —**

ಬ್ರಹ್ಮನು ವಾಸಮಾಡುವ ಪುರ, ಸ್ಥಳ—ಬ್ರಹ್ಮಪುರಿ. ಇದು ಅಲ್ಪರಾದ ನಾವು ಅನಂತನಾದ ಪರಮಾತ್ಮನನ್ನು ನಿರ್ದೇಶಿಸುವ ರೀತಿ ಎನ್ನಬಹುದು. ಆತ್ಮಸಾಮ್ರಾಜ್ಯವು ಅತ್ಯಂತ ಜ್ಯೋತಿರ್ಮಯವಾಗಿರುವುದು. ಏಕೆಂದರೆ ಆತ್ಮವೇ

*ಇದೇ ಗ್ರಂಥದ ೧-೧-೯ನೆಯ ಮಂತ್ರದ ವ್ಯಾಖ್ಯಾನವನ್ನು ನೋಡಿ.

ಎಲ್ಲವನ್ನೂ ಬೆಳಗುವ ವಸ್ತು. ಅದು ಜ್ಯೋತಿಸ್ಸ್ವರೂಪ. ನಮ್ಮ ಬುದ್ಧಿಮನಸ್ಸುಗಳನ್ನು ಬೆಳಗುವುದೂ ಅದೇ ತತ್ತ್ವ. ಇದು ಚೈತನ್ಯ ಸ್ವರೂಪದಿಂದ ನಮ್ಮ ಹೃದಯಕುಹರದಲ್ಲಿ ಬೆಳಗುತ್ತಿದೆ ಎಂದು ಪರಿಗಣಿಸಲ್ಪಟ್ಟಿದೆ. ನಮ್ಮ ಬುದ್ಧಿಮನಸ್ಸುಗಳು ಸ್ಪಂದನವಾಗುವುದು, ವಿಕಾಸವಾಗುವುದು ಆ ಹೃದಯಪುಂಡರೀಕದಿಂದ ಹೊಮ್ಮಿ ಬರುವ ಜ್ಞಾನಕಿರಣಗಳಿಂದಲೇ. ಹೃದಯದಲ್ಲಿ ಪ್ರತಿಷ್ಠಿತವಾಗಿದ್ದರೂ ನಮ್ಮ ಕ್ರಿಯೆಗಳನ್ನೂ, ಪ್ರಾಣವನ್ನೂ, ಮನಸ್ಸು ಬುದ್ಧಿಗಳನ್ನೂ ಪ್ರಚೋದಿಸುವುದೂ ನಿಯಮನ ಮಾಡುವುದೂ ಆತ್ಮವೇ! ಆದ್ದರಿಂದ ಹೃದಯಕಮಲವನ್ನು ಬ್ರಹ್ಮಪುರವೆಂದು ಹೇಳಿದೆ.

ಮೇಲೆ ಹೇಳಿದ ತತ್ತ್ವವನ್ನು ಅರಿಯುವುದೇ ಜೀವನದ ಪರಮಗುರಿಯಾದ ಬ್ರಹ್ಮಸಾಕ್ಷಾತ್ಕಾರ. ಇಲ್ಲಿ ಒಂದು ಪುಟ್ಟ ಶಂಕೆ ಉದ್ಭವಿಸಬಹುದು. ನಮ್ಮಲ್ಲಿರುವ ಚೈತನ್ಯದ ಕಿಡಿಯೊಂದನ್ನು ನಾವರಿತ ಮಾತ್ರಕ್ಕೆ ಅನಂತವಾದ, ಸರ್ವವ್ಯಾಪಿಯಾದ ಪರಮಾತ್ಮನ ಮಹಾತ್ಮೆಯನ್ನು ತಿಳಿದೆವೆನ್ನಬಹುದೇ, ಎಂದು. ಆದರೆ ಈ ಶಂಕೆಯನ್ನು ಶ್ರುತಿಯು ಪರಿಹರಿಸುತ್ತದೆ. ಆತ್ಮಜ್ಞಾನದ ಅರಿವಿನಿಂದ ಸರ್ವಾಂತರ್ಯಾಮಿಯಾದ ಸಮಷ್ಟಿ ಆತ್ಮವು ತಾನಾಗಿ ಗೋಚರಕ್ಕೆ ಬರುವುದು. ಅದನ್ನೇ ಇಲ್ಲಿ 'ಪರಿಪಶ್ಯಂತಿ' ಎಂಬ ಶಬ್ದದಿಂದ ಶ್ರುತಿಮಂತ್ರವು ಸೂಚಿಸುತ್ತಿರುವುದು. ಮಡಕೆಯು ಒಡೆದರೆ ಅದರಲ್ಲಿದ್ದ ಆಕಾಶವು ಬಾಹ್ಯಾಕಾಶದೊಡನೆ ಒಂದಾಗಿ ಸೇರಿ ತನ್ನ ನಿಜವಾದ ಸ್ವರೂಪವನ್ನು ಅರಿಯುವುದಲ್ಲವೇ? ಆಗ ಅದಕ್ಕೆ ಉಪಾಧಿಸೀಮಿತ ಆಕಾಶ ಮಾತ್ರವಲ್ಲದೆ ಉಪಾಧಿರಹಿತವಾದ ಅನಂತ ಆಕಾಶದ ಬಗೆಗೂ ತಿಳಿವು ಉಂಟಾಗಿರುತ್ತದೆ.

ಆತ್ಮಸಾಕ್ಷಾತ್ಕಾರವಾಗಬೇಕಾದರೆ ಅಗತ್ಯವಾಗಿ ಬೇಕಾದ ಗುಣವೆಂದರೆ ಬುದ್ಧಿಯ ವಿವೇಕ. ಬುದ್ಧಿಯು ಹೃದಯದ ಜ್ಞಾನಕಿರಣಗಳಲ್ಲಿ ಮಿಂದು ಹೊರಬಂದಾಗ ಅದು ದೈವಿಕ ಅಂಶವಾದ ವಿವೇಕವನ್ನು ಪಡೆಯುತ್ತದೆ. ಹಾಲನ್ನು ಚೆನ್ನಾಗಿ ಕುದಿಸಿ ಆರಲು ಬಿಟ್ಟಾಗ ಅದರ ಮೇಲ್ಮೈಯ ಮೇಲೆ ಕೆನೆಯು ಕಟ್ಟಿಕೊಳ್ಳುವಂತೆ, ವೇದಾಂತಸಾಧನೆಯ ಮೂಲಕ, ಅಂದರೆ ಶಾಸ್ತ್ರಾಧ್ಯಯನ, ಆಚಾರ್ಯೋಪದೇಶ, ಸತ್ಸಂಗ ಹಾಗೂ ಧ್ಯಾನೋಪಾಸನೆಗಳಿಂದ ಸಂಸ್ಕಾರವಾದ ಬುದ್ಧಿಯು ಜ್ಞಾನ ಮತ್ತು ವಿವೇಕಗಳನ್ನು ತಳೆಯುತ್ತದೆ. ಅಂತಹ ವಿವೇಕಿಗಳನ್ನೇ ಶಾಸ್ತ್ರಗಳಲ್ಲಿ 'ಧೀರರು' ಎಂದು ಸಂಬೋಧಿಸಿರುವುದು. ಅಂತಹವರು ಆತ್ಮಾನ್ವೇಷಣೆಯ ಯಾತ್ರೆಯಲ್ಲಿ ಜಯಶೀಲರಾಗಿ ಆನಂದರೂಪವೂ, ಅಮೃತವೂ ಆದ ಆತ್ಮಸ್ವರೂಪವನ್ನು ಅರಿಯುವರು.

## ಆತ್ಮಜ್ಞಾನದ ಫಲ

**ಭಿದ್ಯತೇ ಹೃದಯ ಗ್ರಂಥಿಃ**
**ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ**
**ತಸ್ಮಿನ್ ದೃಷ್ಟೇ ಪರಾವರೇ ॥** ೮

**ತಸ್ಮಿನ್** – ಆ, **ಪರ ಅವರೇ** – ಕಾರಣರೂಪದಿಂದ ಹೆಚ್ಚಿನದನ್ನೂ ಕಾರ್ಯರೂಪದಿಂದ ಕಡಮೆಯದನ್ನೂ, **ದೃಷ್ಟೇ** – ಕಂಡುಕೊಂಡರೆ, **ಅಸ್ಯ** – ಇವನ, **ಹೃದಯಗ್ರಂಥಿಃ** – ಅವಿದ್ಯೆಯ ಗಂಟು (ಹೃದಯವನ್ನು ಆಶ್ರಯಿಸಿರುವ ವಾಸನೆಗಳು), **ಭಿದ್ಯತೇ** – ನಾಶವಾಗುತ್ತದೆ, **ಸರ್ವ ಸಂಶಯಾಃ** – ಎಲ್ಲಾ ಸಂಶಯಗಳೂ, **ಛಿದ್ಯಂತೇ** – ನಿವಾರಣೆಯಾಗುವುವು, **ಕರ್ಮಾಣಿ ಚ** – ಕರ್ಮಗಳೆಲ್ಲವೂ, **ಕ್ಷೀಯಂತೇ** – ಕ್ಷಯವಾಗುವುವು.

**(೮) ಕಾರಣರೂಪದಿಂದ ಹೆಚ್ಚಿನವನೂ (ಪರನೂ), ಕಾರ್ಯರೂಪದಿಂದ ಕಡಮೆಯವನೂ (ಅವರನೂ ಆದ ಜೀವ) ಅವನನ್ನು ಕಂಡುಕೊಂಡರೆ ಅವನ ಹೃದಯದಲ್ಲಿ ಅವಿದ್ಯಾರೂಪದ ಗಂಟುಗಳು ಬಿಚ್ಚಿಕೊಳ್ಳುತ್ತವೆ (ನಾಶಹೊಂದುತ್ತವೆ) ಸಂಶಯಗಳೆಲ್ಲವೂ ನಿವಾರಣೆಯಾಗುತ್ತವೆ ಮತ್ತು ಅವನ ಕರ್ಮಗಳೆಲ್ಲವೂ (ಅವಿದ್ಯೆಯ ವಾಸನೆಗಳಿಂದ ಕೂಡಿರುವ ಕಾಮನೆಗಳು) ಕ್ಷಯವಾಗುವುವು**

ಪರಾವರನಾದ ಪರಮಾತ್ಮನನ್ನು ತಿಳಿಯುವುದರಿಂದ ಅವನ ವಿಷಯ ವಾಸನೆಗಳು ನಾಶವಾಗಿ ಸಂಸಾರದ ಕಾರಣವು ಕೊನೆಗೊಳ್ಳುವುದರಿಂದ ಅವನು ಮುಕ್ತಿಯನ್ನು ಪಡೆಯುತ್ತಾನೆ, ಎಂದರ್ಥ.

ಹೃದಯಗ್ರಂಥಿ ಎಂದರೆ ಅವಿದ್ಯೆ ಮತ್ತು ನಮ್ಮ ಬುದ್ಧಿಯನ್ನು ಆಶ್ರಯಿಸಿರುವ ಕಾಮನೆಗಳು ಹಾಗೂ ಅವುಗಳಿಂದುಂಟಾಗುವ ಕರ್ಮಗಳು. ಇದು ಒಂದು ರೀತಿಯ ಕಗ್ಗಂಟು. ಕಾರಣರೂಪದಿಂದ 'ಪರಾ' ಹಾಗೂ ಕಾರ್ಯರೂಪದಿಂದ 'ಅವರ'ನೂ ಆದ ಪರಮಾತ್ಮನ ದರ್ಶನದಿಂದ ಈ ಗ್ರಂಥಿಯು ಭೇದಿಸಲ್ಪಡುವುದು. ಸಕಲ ಸಂಶಯಗಳೂ ನಾಶವಾಗುವುವು ಎಂದು ಶ್ರುತಿಯು ಹೇಳುತ್ತಿದೆ.

ಸತ್ಯವೂ ಅಸತ್ಯವೂ ಒಟ್ಟಿಗೆ ಒಂದೇಕಡೆ ಇರುವುದು ಸಾಧ್ಯವಿಲ್ಲ. ಸೂರ್ಯನಲ್ಲಿ ಕತ್ತಲು ಇರುವುದು ಅಸಂಭವ. ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಹಗ್ಗ–ಹಾವು ಎರಡೂ ನಿಜವಾಗಲಾರದು. ಕಂಬವನ್ನು ಭೂತವೆಂದು ತಿಳಿದು ಹೆದರಿದಾಗಲೂ ಅಷ್ಟೆ. ಒಂದು ಸತ್ಯ, ಇನ್ನೊಂದು ಭ್ರಮೆ. ಸತ್ಯವಸ್ತುವಿನ ಅರಿವುಂಟಾದಾಗ ಭ್ರಮೆಯು ನಿರಸನವಾಗುವುದು.

ಈ ಅರ್ಥದಲ್ಲೇ ಶ್ರುತಿಯು ಹೇಳುತ್ತಿರುವುದು. ಆತ್ಮಜ್ಞಾನವಾದ ಮೇಲೆ ಅವಿದ್ಯೆಯೂ, ಕಾಮನೆಗಳೂ, ಸಂಶಯಗಳೂ ಎಲ್ಲವೂ ಅಳಿದುಹೋಗುವುವು. ಸತ್ಯಾಸತ್ಯಗಳ, ಧರ್ಮಾಧರ್ಮಗಳ ಸಮಸ್ಯೆಗಳೆಲ್ಲಾ ತಾವಾಗಿ ಕರಗಿಹೋಗುವುವು. ಅಂತಹ ಜ್ಞಾನಿಗೆ ಹಿಂದಿನ ಜನ್ಮದಲ್ಲಿ ಮಾಡಿದ, ಆದರೆ ಇನ್ನೂ ಫಲಕೊಡಲು ಪ್ರಾರಂಭಿಸದ ಕರ್ಮಗಳೆಲ್ಲ ಸುಟ್ಟುಹೋಗುವುವು ಮತ್ತು ಈಗ ಮಾಡುವ ಕರ್ಮಗಳ ಫಲವೂ ಅಂಟುವುದಿಲ್ಲ. ಅಹಂಕಾರವೇ ಕಾಮ್ಯಕರ್ಮಗಳಿಗೆ ಮೂಲಕಾರಣ. ಆತ್ಮಜ್ಞಾನದಿಂದ ಅಹಂಕಾರವು ಅಳಿಸಿಹೋಗುವುದರಿಂದ, ಕರ್ಮಫಲದ ಭೋಕ್ತೃವೇ ಇರುವುದಿಲ್ಲ.

ಹಿಂದಿನ ಅನುಭವಗಳೆಲ್ಲ ಕನಸಿನಂತೆ ಕರಗಿಹೋಗುವುವು. ಕನಸಿನಲ್ಲಿ ನಾನು ಮದುವೆಯಾಗಿ ಹೆಂಡತಿ ಮಕ್ಕಳೊಡನೆ ಸಂಸಾರ ನಡೆಸುವವನಂತೆ ಕಂಡಿರಬಹುದು.

ಎಚ್ಚರವಾದ ಮೇಲೆ ನನಗೆ ಆ ಹೆಂಡತಿಯೂ ಇಲ್ಲ, ಮಕ್ಕಳೂ ಇಲ್ಲ, ಸಂಸಾರ ಮೊದಲೇ ಇಲ್ಲ. ಹಾಗೆಯೇ ಆತ್ಮಜ್ಞಾನವಾದ ಬಳಿಕ ಅವನಿಗೆ ಯಾವ ಕರ್ಮಫಲದ ಲೇಪವೂ ಇಲ್ಲ. ಜ್ಞಾನಿಯು ಕರ್ಮಮಾಡಿದರೂ ಅವನು ಪರಮಾತ್ಮನ ನಿಮಿತ್ತಮಾತ್ರವಾಗಿ ಕೆಲಸ ಮಾಡುತ್ತಾನೆ. ಅಂತಹ ಕರ್ಮವನ್ನು ಶಾಸ್ತ್ರಗಳು 'ಕರ್ಮಾಭಾಸ' ಎನ್ನುತ್ತಾರೆ. ಜ್ಞಾನಿಯು ಮಾಡುವುದು ಅಹಂಕಾರ ಪ್ರವೃತ್ತಿಯಿಂದ ಮಾಡುವ ಕರ್ಮವಾಗಿರುವುದಿಲ್ಲ. ಅದು ಕನಸಿನಲ್ಲಿ ಮಾಡಿದ ಕರ್ಮದಂತೆಯೇ. ಅದರ ಹೊಣೆ ಅವನಿಗಿರುವುದಿಲ್ಲ. ಆದ್ದರಿಂದ ಅವನಿಗೆ ಯಾವ ಕರ್ಮಫಲವೂ ತಟ್ಟದು.

## ಆತ್ಮವು ಜ್ಯೋತಿಸ್ಸ್ವರೂಪ

**ಹಿರಣ್ಮಯೇ ಪರೇ ಕೋಶೇ**
**ವಿರಜಂ ಬ್ರಹ್ಮ ನಿಷ್ಕಲಮ್ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿ–**
**ಸ್ತದ್ಯದಾತ್ಮವಿದೋ ವಿದುಃ ॥** ೯

**ಹಿರಣ್ಮಯೇ** – ಜ್ಯೋತಿರ್ಮಯವಾದ (ಬೆಳಕಿನಿಂದ ತುಂಬಿರುವ), **ಪರೇ** – ಶ್ರೇಷ್ಠವಾದ, **ಕೋಶೇ** – ಎಲ್ಲಕ್ಕೂ ಒಳಗಡೆ ಇರುವ ಕೋಶದಲ್ಲಿ, **ವಿರಜಂ** – ರಜಸ್ಸಿಲ್ಲದ (ಅವಿದ್ಯೆಯೇ ಮೊದಲಾದ ಯಾವ ಕಶ್ಮಲವೂ ಇಲ್ಲದ), **ನಿಷ್ಕಲಂ** – ನಿರವಯವಾದ, **ಬ್ರಹ್ಮ** – ಬ್ರಹ್ಮವು (ಇರುವುದು), **ತತ್** – ಅದು, **ಶುಭ್ರಂ** – ಸ್ವಚ್ಛವಾದದ್ದು, **ಜ್ಯೋತಿಷಾಂ** – ಬೆಳಕಿನ ಸ್ವರೂಪವಾದದ್ದಕ್ಕೆಲ್ಲಾ, **ಜ್ಯೋತಿಃ** – ಬೆಳಕಾಗಿರುವುದು, **ಯತ್ ತತ್** – ಯಾವ ಆ ಬ್ರಹ್ಮವನ್ನು, **ಆತ್ಮವಿದಃ** – ಆತ್ಮಜ್ಞಾನಿಗಳು, **ವಿದುಃ** – ತಿಳಿದಿರುವರು.

(೯) ಜ್ಯೋತಿರ್ಮಯವೂ, ಶ್ರೇಷ್ಠವಾದದ್ದೂ ಆದ, ಎಲ್ಲಕ್ಕಿಂತಲೂ ಒಳಗಡೆ ಇರುವ ಕೋಶದಲ್ಲಿ ರಜಸ್ಸಿಲ್ಲದ ಮತ್ತು ಕಳಂಕವಿಲ್ಲದ ಬ್ರಹ್ಮವು (ಇರುವುದು). ಅದು ಶುಭ್ರವಾಗಿರುವುದು, ಜ್ಯೋತಿಗಳಿಗೆಲ್ಲ ಜ್ಯೋತಿಯಾಗಿರುವುದು. ಆ ಬ್ರಹ್ಮವನ್ನು ಆತ್ಮಜ್ಞಾನಿಗಳು ತಿಳಿದಿರುವರು.

ಈ ಮೂರು ಶ್ಲೋಕಗಳಲ್ಲಿ ಶ್ರುತಿಯು ಆತ್ಮವನ್ನು ಕಂಡುಕೊಳ್ಳಬಹುದಾದ ಸ್ಥಾನವನ್ನೂ ಅದರ ಮಹಿಮೆಯನ್ನೂ ವರ್ಣಿಸಿದೆ.

**ಹಿರಣ್ಮಯೇ ಪರೇ ಕೋಶೇ –**

'ಹಿರಣ್ಮಯ' ಎಂದರೆ ಸ್ವರ್ಣ ಪ್ರಕಾಶದಿಂದ ಕೂಡಿದ, ಎಂದರ್ಥ. 'ಪರೇ ಕೋಶೇ' ಎಂದರೆ ಕತ್ತಿಯ ಒರೆಯಂತೆ ಅತ್ಯಂತ ಒಳಗಿರುವುದೂ ಮತ್ತು ಶ್ರೇಷ್ಠವಾಗಿರುವುದೂ ಎಂದು. ವೇದಾಂತ ಶಾಸ್ತ್ರದ ಪ್ರಕಾರ ಆತ್ಮವು ದೇಹದಲ್ಲಿ ಒಂದರೊಳಗೊಂದು ಅಡಗಿರುವ ಐದು ಕೋಶಗಳಿಂದ ಪರಿವೃತವಾಗಿದೆ. ಅತ್ಯಂತ

ಹೊರಗಿರುವುದು ಅನ್ನಮಯ ಕೋಶ, ಅದರೊಳಗೆ ಪ್ರಾಣಮಯ ಮತ್ತು ಮನೋಮಯ ಕೋಶಗಳು. ಅದರ ಒಳಗಡೆ ವಿಜ್ಞಾನಮಯಕೋಶ. ಅತ್ಯಂತ ಒಳಗಡೆ ಇರುವುದು ಆನಂದಮಯ ಕೋಶ. ಅಲ್ಲಿ ನಿಷ್ಕಲವೂ, ನಿರ್ಮಲವೂ ಆದ ಆತ್ಮವು ಸ್ವಪ್ರಕಾಶದಿಂದ ಬೆಳಗುತ್ತಿರುವುದು. ಸಾಧಕನ ಪ್ರಯತ್ನಗಳೆಲ್ಲಾ ಈ ಬಾಹ್ಯಕೋಶಗಳ ಆಕರ್ಷಣೆಯಿಂದ ಬಿಡಿಸಿಕೊಳ್ಳುವುದು. ದೇಹಕ್ಕೆ ಅಂಟಿಕೊಂಡಂತಿರುವ ಅನ್ನಮಯ, ಪ್ರಾಣಮಯ, ಮನೋಮಯ ಮತ್ತು ವಿಜ್ಞಾನಮಯ ಕೋಶಗಳನ್ನು ಆಧ್ಯಾತ್ಮಿಕವಾಗಿ ದಾಟಿ ಸಾಧಕನು ಆನಂದಮಯ ಕೋಶವನ್ನು ಸೇರಿದಾಗ, ಅವನಿಗೆ ಅಲೌಕಿಕವೂ, ಅತ್ಯಂತ ಮಧುರವೂ, ಪರಮ ಸುಖಕರವೂ ಆದ ದಿವ್ಯ ಶಾಂತಿಯ ಅನುಭವವಾಗುತ್ತದೆ. ನಮ್ಮ ಸುಖ, ಶಾಂತಿ, ಆನಂದಗಳನ್ನು ಕೆಡಿಸುವ ಸ್ಥೂಲ ದೇಹ, ಮನಸ್ಸು, ಬುದ್ಧಿಗಳು ಅಲ್ಲಿರುವುದಿಲ್ಲ. ಅವುಗಳಿಂದಲೇ ನಮಗೆ ದುಃಖನೋವುಗಳ ಯಾತನೆ. ಈ ದೃಷ್ಟಿಯಿಂದ ಆನಂದಮಯಕೋಶವು ಕಷ್ಟಸರಿಕಟರಹಿತವಾದ ನಿಷೇಧ ರೂಪದ ಸ್ಥಿತಿ. ನೋವಿಲ್ಲದಿದ್ದರೆ ಆನಂದವಿದೆ ಎಂದು ಹೇಳುವಂತಿಲ್ಲ. ಮನಸ್ಸಿನ ತಳಮಳವಿಲ್ಲದಿದ್ದರೆ ಶಾಂತಿಯ ಸುಖದ ಅನುಭವವಿದೆ, ಎಂದಲ್ಲ. ಅದು ಸ್ಪಷ್ಟ, ಶುದ್ಧ ಆನಂದದ ಸ್ಥಿತಿಯಲ್ಲ. ಆನಂದಮಯ ಕೋಶವನ್ನು 'ಹಿರಣ್ಮಯ' ಎಂದು ಹೇಳಿರುವುದು, ಅದು ಪರಮಜ್ಯೋತಿ ಸ್ವರೂಪವಾದ ಆತ್ಮಕ್ಕೆ ಅತ್ಯಂತ ನಿಕಟವಾಗಿದೆ ಎನ್ನುವ ಅರ್ಥದಲ್ಲಿ. ಅದು ಬಹಳ ಶ್ರೇಷ್ಠ ಅಥವಾ ಉತ್ತಮೋತ್ತಮ (ಪರೇ) ಎಂದು ಹೇಳಿರುವುದು ಅದು ಅತ್ಯಂತ ಒಳಗೆ ಇರುವುದರಿಂದಲೂ ಹಾಗೂ ಮನಸ್ಸು, ಬುದ್ಧಿ (ಮನೋಮಯ, ವಿಜ್ಞಾನಮಯ)ಗಳನ್ನೂ ಅತಿಕ್ರಮಿಸಿದ ಮೇಲೆ ಮುಟ್ಟಬಹುದಾದ ಶ್ರೇಷ್ಠ ಮತ್ತು ಸೂಕ್ಷ್ಮಸ್ಥಿತಿಯ ಸ್ಥಾನವಾಗಿರುವುದರಿಂದ.

ಅತ್ಯಂತ ಅಂತರ್ನಿಹಿತವಾದ ಈ ಕೋಶದಲ್ಲೇ ಸಾಧಕನು ದಿವ್ಯವೂ, ನಿಷ್ಕಳಂಕವೂ, ಜ್ಯೋತಿಸ್ಸ್ವರೂಪವೂ ಆದ ಆತ್ಮನನ್ನು ಕಂಡುಕೊಳ್ಳಬೇಕು. ಆತ್ಮನಲ್ಲಿ ಯಾವ ದೋಷವೂ, ಕಳಂಕವೂ ಪಾಪವೂ ಇರದು. ಆದರೂ ನಾವು ಪಾಪಿಗಳಂತೆ ವರ್ತಿಸುತ್ತೇವೆ. ಅದಕ್ಕೆ ನಮ್ಮ ಮನಸ್ಸು ಬುದ್ಧಿಗಳಲ್ಲಿನ ದೋಷಗಳೇ ಕಾರಣ. ನಮ್ಮ ಕೊಠಡಿಯಲ್ಲಿ ನೀಲಿಬಣ್ಣದ ಬೆಳಕು ಹರಡಿದ್ದರೆ ಅದಕ್ಕೆ ವಿದ್ಯುಚ್ಛಕ್ತಿ ಕಾರಣವಲ್ಲ, ನಾವು ಹಾಕಿರುವ ಬಲ್ಬಿನ ಬಣ್ಣ. ಪ್ರತಿಯೊಂದು ನಾಮರೂಪದ ಜಗದ್ವಸ್ತುವಿನಲ್ಲಿ ತುಂಬಿರುವುದು ಒಂದೇ ಚೈತನ್ಯ ಶಕ್ತಿ. ಆದರೆ ಬೇರೆ ಬೇರೆ ಸ್ವಭಾವಗಳು ಅವುಗಳಲ್ಲಿ ಕಾಣುವುದು ಅವುಗಳ ಉಪಾಧಿಗಳಿಂದ, ವಿವಿಧ ವ್ಯಕ್ತಿಗಳ ಬುದ್ಧಿಮನಸ್ಸುಗಳಿಂದ. ಅಲ್ಲೊಬ್ಬ ಮೋಸಗಾರ, ಇಲ್ಲೊಬ್ಬ ಪ್ರಾಮಾಣಿಕ, ಒಬ್ಬ ಪಾಪಿ, ಇನ್ನೊಬ್ಬ ಸಂತ – ಇವರೆಲ್ಲರೂ ಅವರವರ ಬುದ್ಧಿ ಮನಸ್ಸುಗಳ ವಿಚಿತ್ರ ನಿರೂಪಣೆ. ಸಂಯಮ ಸಾಧನೆಗಳಿಂದ ನಮ್ಮ ಮನಸ್ಸು ಬುದ್ಧಿಗಳನ್ನು ತಿದ್ದಿ ಸಂಸ್ಕರಿಸಿಕೊಂಡರೆ, ಸುಜ್ಞಾನ ಸಂಪಾದಿಸಿಕೊಂಡರೆ, ನಮ್ಮಲ್ಲಿ ಅತ್ಯಂತ ದುಷ್ಕರ್ಮಿಯಾಗಿರುವವನೂ, ಸಾಧು ಸತ್ಪುರಷನಾಗಬಲ್ಲ. ಸೂರ್ಯನಲ್ಲಿ ಯಾವ ದೋಷವೂ, ಕಳಂಕವೂ ಇಲ್ಲ. ಆದರೆ ಕನ್ನಡಿಯಲ್ಲಿ ಕಂಡ ಅವನ ಪ್ರತಿಬಿಂಬವು ಕಲ್ಮಷಪೂರಿತವಾಗಿ ಕಾಣಬಹುದು. ಅದಕ್ಕೆ ಕಾರಣ ನಮ್ಮ ಕನ್ನಡಿಯಲ್ಲಿರುವ ಕಶ್ಮಲ. ಕಲಿಮಹಿಮೆಯಿಂದ ಕೂಡಿದ

ದುಷ್ಕರ್ಮದೌರ್ಜನ್ಯಭರಿತ ಕಾಲದಲ್ಲೂ ಪರಮಾತ್ಮನು ಶುದ್ಧನೂ, ನಿಷ್ಕಳಂಕನೂ ಆಗಿಯೇ ಇರುತ್ತಾನೆ.

ಈ ಮಂತ್ರದಲ್ಲಿ ಬ್ರಹ್ಮನಿಗೆ ಅನ್ವಯಿಸಿರುವ ಇತರ ವಿಶೇಷಣಗಳನ್ನು ಹಿಂದೆಯೇ ವಿವರಿಸಿರುವುದರಿಂದ ಅವುಗಳನ್ನು ನಾವು ಈಗಾಗಲೇ ತಿಳಿದಿದ್ದೇವೆ.

## ಬ್ರಹ್ಮವೇ ಸಕಲ ಜ್ಯೋತಿ

**ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ**
**ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ**
**ತಸ್ಯ ಭಾಸಾ ಸರ್ವಮಿದಂ ವಿಭಾತಿ॥** ೧೦

**ತತ್ರ** – ಅಲ್ಲಿ, **ಸೂರ್ಯಃ** – ಸೂರ್ಯನು, **ನ ಭಾತಿ** – ಪ್ರಕಾಶಿಸುವುದಿಲ್ಲ, **ಚಂದ್ರತಾರಕಂ** – ಚಂದ್ರನಕ್ಷತ್ರಗಳು, **ನ** – ಪ್ರಕಾಶಿಸುವುದಿಲ್ಲ, **ಇಮಾ ವಿದ್ಯುತಃ** – ಈ ಮಿಂಚುಗಳು, **ನ ಭಾಂತಿ** – ಪ್ರಕಾಶಿಸುವುದಿಲ್ಲ, **ಅಯಂ ಅಗ್ನಿಃ ಕುತಃ** – ಇನ್ನು ಈ ಅಗ್ನಿಯು ಪ್ರಕಾಶಿಸುವುದೆಲ್ಲಿ?, **ತಂ ಏವ ಭಾಂತಂ** – ಬೆಳಗುತ್ತಿರುವ ಅವನನ್ನೇ, **ಸರ್ವಂ** – ಎಲ್ಲವೂ, **ಅನುಭಾತಿ** – ಅನುಸರಿಸಿ ಪ್ರಕಾಶಿಸುತ್ತಿರುವುದು, **ತಸ್ಯ ಭಾಸಾ** – ಅವನ ಪ್ರಕಾಶದಿಂದಲೇ, **ಇದಂ ಸರ್ವಂ** – ಇವೆಲ್ಲವೂ, **ವಿಭಾತಿ** – ಪ್ರಕಾಶಿಸುತ್ತಿರುವುದು.

(೧೦) ಹೃದಯ ಸ್ಥಾನದಲ್ಲಿ ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ ಪ್ರಕಾಶಿಸುವುದಿಲ್ಲ. ಮಿಂಚುಗಳೂ ಪ್ರಕಾಶಿಸುವುದಿಲ್ಲ. ಇನ್ನು ನಮ್ಮ ಕಣ್ಣಿಗೆ ಕಾಣುವ ಅಗ್ನಿಯು ಪ್ರಕಾಶಿಸುವ ಮಾತೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಬೇರೆ ಎಲ್ಲವೂ ಪ್ರಕಾಶಿಸುತ್ತಿರುವುದು. ಅವನ ಪ್ರಕಾಶದಿಂದಲೇ ಇವೆಲ್ಲವೂ ಪ್ರಕಾಶಿಸುತ್ತಿರುವುದು

ಯಾವ ವೈದಿಕ ಕರ್ಮಾಚರಣೆಯ ಅಂತ್ಯದಲ್ಲೂ ಶ್ರುತಿಯು ಈ ಮಂತ್ರವನ್ನು ಹೇಳದೆ ಮುಗಿಸುವ ಪದ್ಧತಿ ಇಲ್ಲ. ಸಾಮಾನ್ಯವಾಗಿ ದೇವರಿಗೆ ಕರ್ಪೂರದ ಮಂಗಳಾರತಿ ಎತ್ತುವಾಗ, ಈ ಮಂತ್ರವನ್ನು ಪಠಿಸುವ ವಾಡಿಕೆ. ಭಗವಂತನಿಗೆ ಮಂಗಳಾರತಿಯ ಕಿರುಜ್ಯೋತಿಯನ್ನು ತೋರಿಸುತ್ತಿರುವಾಗ ಭಕ್ತನಿಗೆ ಋಷಿಗಳು ಹೇಳಿರುವ ಸುಂದರವಾದ ಹಾಗೂ ಮಹಿಮಾನ್ವಿತವಾದ ಈ ಮಂತ್ರವು ನೆನಪಿಗೆ ಬರುವುದು ಸಹಜ. ಅದು ಅವನ ಬಾಯಿಂದ ತಾನಾಗಿ ಹೊರಬರುವುದು.

ಹೃದಯ ಕುಹರದಲ್ಲಿ ಪ್ರತಿಷ್ಠಿತವಾಗಿರುವ ಆತ್ಮನೆದುರಿನಲ್ಲಿ ಸೂರ್ಯನ ಬೆಳಕಿಲ್ಲ, ಚಂದ್ರ ತಾರಕೆಗಳ ರಶ್ಮಿಗಳಿಲ್ಲ. ಮಿಂಚುಗಳೂ ಬೆಳಗುವುದಿಲ್ಲ. ಇನ್ನು ಅಗ್ನಿಯು ಎಷ್ಟರವನು ?

ಸೂರ್ಯನು ಆತ್ಮಜ್ಯೋತಿಯ ಮುಂದೆ ಬೆಳಗುವುದಿಲ್ಲ – ಎಂದರೆ ಆತ್ಮಜ್ಯೋತಿಯ ಪ್ರಖರ ಪ್ರಕಾಶದಲ್ಲಿ ಸೂರ್ಯನ ಬೆಳಕು ಗಣನೆಗೇ ಬರುವುದಿಲ್ಲ

ಎಂದು. ಉರಿಯುವ ಸೂರ್ಯನ ಅಪರಾಹ್ನದ ಬಿಸಿಲಿನಲ್ಲಿ ಸಣ್ಣ ಸೊಡರೊಂದನ್ನು ಇಟ್ಟರೆ ಅದರ ಪ್ರಕಾಶವೇನಾದರೂ ಗೋಚರಕ್ಕೆ ಬರುತ್ತದೆಯೇ? ಹಾಗೆಯೇ ಆತ್ಮಪ್ರಕಾಶದ ಮುಂದೆ ಉಳಿದೆಲ್ಲ ಜ್ಯೋತಿಗಳೂ ನಿಸ್ತೇಜವಾಗುವುವು. ಅದು ಮಾತ್ರವಲ್ಲ. ಆತ್ಮದ ಬೆಳಕಿನಲ್ಲೇ ಸೂರ್ಯ ಚಂದ್ರರೂ ಬೆಳಗುವುದು. ಆತ್ಮವನ್ನು ಬಿಟ್ಟು ಅವಕ್ಕೆ ತಾವಾಗಿ ಬೆಳಗುವ ಶಕ್ತಿಯೇ ಇಲ್ಲ.

ಸೂರ್ಯನ ಬೆಳಕೇ ಗಣನೆಗೆ ಬಾರದೆಂದ ಮೇಲೆ, ಅದಕ್ಕಿಂತ ಕಡಮೆ ಪ್ರಕಾಶದ ನಕ್ಷತ್ರಗಳಾಗಲೀ, ಸೂರ್ಯನಿಂದ ಬಂದ ಬೆಳಕನ್ನು ಪ್ರತಿಫಲಿಸುವ ಚಂದ್ರನಾಗಲಿ ಏನು ಬೆಳಕನ್ನು ಕೊಡಲು ಸಾಧ್ಯ? ಬೆಳಕಿಗೆ ಮುಖ್ಯ ಆಕರವಾದ ಸೂರ್ಯ, ಚಂದ್ರ, ಮಿಂಚುಗಳೇ ಪ್ರಕಾಶ ಕೊಡಲಾರದ ಮೇಲೆ ಅಗ್ನಿಯು ಯಾವ ಮಹಾ ಲೆಕ್ಕ ಎಂದು ಶ್ರುತಿಯು ಕೇಳುತ್ತದೆ.

ಭೌತಿಕವಾಗಿ ಪ್ರಕಾಶಕೊಡುವ ಮೂಲಗಳನ್ನು ಉಪಲಕ್ಷಣವಾಗಿ ಶ್ರುತಿಯು ಹೇಳಿದ್ದರೂ ಅದರ ಅರ್ಥವ್ಯಾಪ್ತಿ ಬುದ್ಧಿಯಲ್ಲಿ ಬೆಳಕನ್ನು ಕೊಡುವ ಅರಿವಿಗೂ ಅನ್ವಯಿಸುತ್ತದೆ. ಆತ್ಮದ ಬೆಳಕಿನಲ್ಲಿ ನಮಗೆ ಬಾಹ್ಯಪ್ರಪಂಚದ ವಸ್ತುಗಳೂ, ನಮ್ಮೊಳಗಿನ ಭಾವ, ಭಾವನೆಗಳೂ ಗೋಚರಕ್ಕೆ ಬರುವುವು. ಮನಸ್ಸು ಬುದ್ಧಿಗಳಿಗೆ ಆತ್ಮದ ಪ್ರಚೋದನೆ ನಿಂತಕೂಡಲೇ ನಮಗೆ ಹೊರಗಿನ ವಸ್ತುಗಳ ಜ್ಞಾನವಾಗಲಿ, ನಮ್ಮ ಅಂತರಂಗದ ಭಾವ, ಭಾವನೆಗಳಾಗಲಿ ಅರಿವಿಗೆ ಬರುವುದಿಲ್ಲ.

## ಬ್ರಹ್ಮದ ಸರ್ವವ್ಯಾಪಕತ್ವ

**ಬ್ರಹ್ಮೈವೇದಮಮೃತಂ ಪುರಸ್ತಾತ್**
**ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ ।**
**ಅಧಶ್ಚೋರ್ಧ್ವಂ ಚ ಪ್ರಸೃತಂ**
**ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥** ೧೧

**ಪುರಸ್ತಾತ್** – ಮುಂದಿರುವ, **ಇದಂ** – ಇದು, **ಅಮೃತಂ** – ನಾಶರಹಿತವಾದ, **ಬ್ರಹ್ಮಏವ** – ಬ್ರಹ್ಮವೇ, **ಪಶ್ಚಾತ್** – ಹಿಂದೆಯೂ, **ದಕ್ಷಿಣತಃ** – ಬಲಕ್ಕೂ (ದಕ್ಷಿಣಕ್ಕೂ), **ಉತ್ತರೇಣ ಚ** – ಎಡಕ್ಕೂ (ಉತ್ತರಕ್ಕೂ), **ಬ್ರಹ್ಮ** – ಬ್ರಹ್ಮವೇ, **ಅಧಃ ಚ** – ಕೆಳಗೂ, **ಊರ್ಧ್ವಂ ಚ** – ಮೇಲೆಯೂ, **ಬ್ರಹ್ಮ** – ಬ್ರಹ್ಮವೇ, **ಪ್ರಸೃತಂ** – ಹರಡಿರುವುದು, **ಇದಂ ವಿಶ್ವಂ** – ಈ ಜಗತ್ತೆಲ್ಲವೂ, **ವರಿಷ್ಠಂ** – ಶ್ರೇಷ್ಠವಾದ, **ಬ್ರಹ್ಮಏವ** – ಬ್ರಹ್ಮವೇ.

(೧೧) ಮುಂದಿರುವ ಇದು ನಾಶರಹಿತವಾದ ಬ್ರಹ್ಮ. ಹಿಂದೆಯೂ, ಬಲಕ್ಕೂ, ಎಡಕ್ಕೂ ಇರುವುದು ಬ್ರಹ್ಮವೇ. ಕೆಳಗೂ, ಮೇಲೂ ಹರಡಿರುವುದು ಬ್ರಹ್ಮವೇ. ಈ ಜಗತ್ತೆಲ್ಲವೂ ಶ್ರೇಷ್ಠವಾದ ಬ್ರಹ್ಮವೇ.

ಹಗ್ಗದಲ್ಲಿ ತೋರುವ ಹಾವಿನ ಪ್ರತ್ಯಯದಂತೆ ನಮಗೆ ಕಾಣುವ ವಿಶ್ವವೆಲ್ಲವೂ ಬ್ರಹ್ಮದ ತೋರಿಕೆ. ಬ್ರಹ್ಮವೊಂದೇ ನಿಜವಾದ ಸತ್ಯ ಎಂಬುದು ಶ್ರುತಿಯ ಅಭಿಪ್ರಾಯ.

ಈ ಖಂಡವನ್ನು ಉಪಸಂಹಾರ ಮಾಡುತ್ತಾ ಶ್ರುತಿಯು, ವಿಶ್ವವೆಲ್ಲಾ – ಕಣ್ಣಿಗೆ ಕಾಣುವ ವಸ್ತುಗಳೂ, ಕಾಣದ ಮನಸ್ಸಿನ ಭಾವ ಭಾವನೆಗಳೂ ಎಲ್ಲವೂ ಬ್ರಹ್ಮವೇ, ಎಂದು ಒತ್ತಿ ಹೇಳುತ್ತಿದೆ. ಮಣ್ಣಿನ ಮಡಕೆಯಲ್ಲಿ ಮೇಲ್ಭಾಗದಲ್ಲಿರುವುದು ಮಣ್ಣು. ಬುಡದಲ್ಲಿ ಇರುವುದು ಮಣ್ಣು, ಬಲಗಡೆ ಎಡಗಡೆ – ಎಲ್ಲ ಕಡೆಗಳಲ್ಲಿ ತುಂಬಿರುವುದೂ ಮಣ್ಣೇ. ಸಂಕ್ಷೇಪವಾಗಿ ಹೇಳುವುದಾದರೆ ಮಡಕೆಯೆಲ್ಲಾ ಬರಿಯ ಮಣ್ಣೇ. ಮಣ್ಣಿನಿಂದಲೇ ಅದು ಉದ್ಭವವಾಯಿತು, ಮಣ್ಣನ್ನು ಆಧರಿಸಿಯೇ ಅದು ಇರುತ್ತದೆ, ಕೊನೆಗೆ ಮಣ್ಣಿನಲ್ಲೇ ಅದು ಬೆರೆತು ಹೋಗುವುದು. ಮಣ್ಣೇ ಮಡಕೆಗೆ ಕಾರಣ ಮತ್ತು ಅದರ ಕಾರ್ಯ. ಹಾಗೆಯೇ ಬ್ರಹ್ಮವೇ ವಿಶ್ವಕ್ಕೆ ಕಾರಣ. ಬ್ರಹ್ಮವೇ ಸರ್ವವ್ಯಾಪಕವಾಗಿ, ಎಲ್ಲದರಲ್ಲೂ ಸಮರಸವಾಗಿ ತುಂಬಿಕೊಂಡಿರುವ ಸದ್ವಸ್ತು!

**ಎರಡನೆಯ ಮುಂಡಕದ – ಎರಡನೆಯ ಖಂಡ ಸಮಾಪ್ತಿ**

---

## ಮೂರನೆಯ ಮುಂಡಕ - ಒಂದನೆಯ ಖಂಡ

### ಜೀವ ಪರಮಾತ್ಮರ ವೈಲಕ್ಷಣ್ಯ

**ದ್ವಾ ಸುಪರ್ಣಾ ಸಯುಜಾ ಸಖಾಯಾ**
**ಸಮಾನಂ ವೃಕ್ಷಂ ಪರಿಷಸ್ವಜಾತೇ ।**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ-**
**ನಶ್ನನ್ನನ್ಯೋಽಭಿಚಾಕಶೀತಿ ॥** ೧

**ಸಯುಜಾ** – ಸರ್ವದಾ ಜೊತೆಯಲ್ಲಿರುವ, **ಸಖಾಯಾ** – ಮಿತ್ರರಾಗಿರುವ, **ದ್ವಾ** – ಎರಡು, **ಸುಪರ್ಣಾ** – ಪಕ್ಷಿಗಳು, **ಸಮಾನಂ ವೃಕ್ಷಂ** – ಒಂದೇ ಮರವನ್ನು, **ಪರಿಷಸ್ವಜಾತೇ** – ಆಶ್ರಯಿಸಿಕೊಂಡಿವೆ; **ತಯೋಃ** – ಅವೆರಡರಲ್ಲಿ, **ಅನ್ಯಃ** – ಒಂದು, **ಸ್ವಾದು** – ಸವಿಯಾದ, **ಪಿಪ್ಪಲಂ** – ಅರಳಿ ಮರದ ಹಣ್ಣನ್ನು, **ಅತ್ತಿ** – ತಿನ್ನುತ್ತಿದೆ, **ಅನ್ಯಃ** – ಇನ್ನೊಂದು, **ಅನಶ್ನನ್** – (ಹಣ್ಣನ್ನು) ತಿನ್ನದೆ, **ಅಭಿಚಾಕಶೀತಿ** – ನೋಡುತ್ತಿದೆ.

(೧) ಸರ್ವದಾ ಜೊತೆಯಲ್ಲಿರುವ ಹಾಗೂ ಸ್ನೇಹದಿಂದಿರುವ ಎರಡು ಪಕ್ಷಿಗಳು ಒಂದೇ ಮರವನ್ನು ಆಶ್ರಯಿಸಿಕೊಂಡಿವೆ. ಅವೆರಡರಲ್ಲಿ ಒಂದು ಪಕ್ಷಿ ಸವಿಯಾದ ಅರಳಿಮರದ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಪಕ್ಷಿ ಹಣ್ಣನ್ನು ತಿನ್ನದೆ ಸುಮ್ಮನೆ ನೋಡುತ್ತಿದೆ.

ಇದು ಉಪನಿಷತ್ತಿನ ಬಹಳ ಪ್ರಸಿದ್ಧವಾದ ಮಂತ್ರಗಳಲ್ಲಿ ಒಂದು. ಆದರೆ ಈ ಮಂತ್ರವು ಎಷ್ಟು ಪ್ರಸಿದ್ಧವೋ ಅಷ್ಟೇ ವಾದವಿವಾದಗಳ ಆಕರವೂ ಆಗಿದೆ. ಇದಕ್ಕೆ ಮುಖ್ಯ ಕಾರಣ, ಜೀವಾತ್ಮ ಪರಮಾತ್ಮರ ಸ್ವರೂಪಗಳನ್ನು ತಿಳಿಯದೇ ಇರುವುದು. ಈ ಮಂತ್ರದಲ್ಲಿ ಜೀವಾತ್ಮ ಪರಮಾತ್ಮರನ್ನು ಒಂದೇ ವೃಕ್ಷದಲ್ಲಿ ವಾಸಿಸುತ್ತಿರುವ ಎರಡು ಹಕ್ಕಿಗಳಿಗೆ ಹೋಲಿಸಿದೆ. ಆ ಎರಡು ಹಕ್ಕಿಗಳಲ್ಲಿ ಒಂದು ಆ ಮರದ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಅದನ್ನು ಸುಮ್ಮನೆ ನೋಡುತ್ತಿದೆ. ಇದು ಬಹಳ ಪ್ರಸಿದ್ಧವಾದ ಮತ್ತು ಸುಂದರವೂ ಆದ ಉಪಮಾನ.

ಒಂದೇ ಮರದಲ್ಲಿ ಬಹಳ ಸ್ನೇಹದಿಂದ ಒಟ್ಟಿಗಿರುವ ಎರಡು ಹಕ್ಕಿಗಳು ಎಂದರೆ – ಒಂದೇ ಶರೀರದಲ್ಲಿರುವ, ಅಹಂಕಾರಯುತವಾದ ಜೀವ ಹಾಗೂ ಚೈತನ್ಯ ಸ್ವರೂಪವಾದ ಆತ್ಮ. ಅಹಂಕಾರದಿಂದ ಕೂಡಿದ ಜೀವವು ತಾನೇ ದೇಹ ಬುದ್ಧಿಗಳೆಂದುಕೊಡು ಕರ್ತೃತ್ವಭೋಕ್ತೃತ್ವಗಳ ಹೊಣೆಹೊತ್ತು ಕರ್ಮಫಲವಾದ ಸುಖದುಃಖಗಳನ್ನು ಅನುಭವಿಸುತ್ತದೆ. ಹೀಗಾಗಿ ನೋವು ನಲಿವು, ಜಯ ಅಪಜಯ

ಎಲ್ಲವೂ ಜೀವನಿಗೆ ಅನ್ವಯಿಸುವುದೇ ಹೊರತು ಆತ್ಮನಿಗಲ್ಲ. ಆತ್ಮವು ಕ್ರಿಯೆಯನ್ನು ಮಾಡುವುದೂ ಇಲ್ಲ. ಸುಖದುಃಖಗಳನ್ನು ಅನುಭವಿಸುವುದೂ ಇಲ್ಲ.

ಒಂದು ದೃಷ್ಟಾಂತವನ್ನು ತೆಗೆದುಕೊಳ್ಳೋಣ. ಸೂರ್ಯನು ಸ್ಥಿರವಾಗಿಯೇ ಇರುತ್ತಾನೆ. ಆದರೆ ನಮ್ಮ ಕೈಯಲ್ಲಿ ಹಿಡಿದಿರುವ ಕನ್ನಡಿಯು ಅಲುಗಾಡಿದರೆ ಅವನ ಪ್ರತಿಬಿಂಬವೂ ಅದರಲ್ಲಿ ಅಲುಗಾಡುತ್ತದೆ. ನಮ್ಮ ಅಜ್ಞಾನದಿಂದ ಸೂರ್ಯನೇ ಅಲುಗಾಡುತ್ತಿದ್ದಾನೆಂದು ಭಾವಿಸುತ್ತೇವೆ. ಹಾಗೆಯೇ ನಮ್ಮ ಜೀವದ ತಳಮಳ ಚಿಂತನೆಗಳ ಪ್ರಭಾವದಿಂದ ನಮ್ಮ ಮನಸ್ಸು ಕಳವಳಗೊಳ್ಳುತ್ತದೆ. ಆದರೆ ನಾವು ನಮ್ಮ ಮನಸ್ಸಿನೊಡನೆ ತಾದಾತ್ಮ್ಯ ತಾಳಿ ಆತಂಕ ಪಡುತ್ತೇವೆ. ಆಗ ಜೀವವೇ ಸಂಕಟಪಡುತ್ತಿದೆ ಎಂದು ಭಾವಿಸುತ್ತೇವೆ.

ಎರಡು ಹಕ್ಕಿಗಳಲ್ಲಿ – ಒಂದು ಯಥಾರ್ಥವಾದ ಆತ್ಮ ಮತ್ತೊಂದು ಅದರ ಪ್ರತಿಬಿಂಬದಂತಿರುವ ಜೀವ. ಎರಡೂ ಒಂದೇ ಮರದಲ್ಲಿ ಅಂದರೆ ಒಂದೇ ಶರೀರದಲ್ಲಿ ತೋರಿಕೊಳ್ಳುತ್ತವೆ. ಒಂದು ತನ್ನ ಅವಿವೇಕದಿಂದ ಆ ಮರದ ಹಣ್ಣನ್ನು ತಿನ್ನುತ್ತದೆ. ಆ ಹಣ್ಣಿನ ರುಚಿ ಇದ್ದಂತೆ ಸುಖ ದುಃಖಗಳನ್ನು ಅನುಭವಿಸುತ್ತದೆ. ಅಂದರೆ ತನ್ನ ಕಾಮುಕರ್ಮಗಳ ಫಲವಾಗಿ ಜೀವವು ಸಂಸಾರಿಯಾಗಿ ಕರ್ಮಗಳಲ್ಲಿ ತೊಡಗಿ ಕರ್ತೃತ್ವ ಭೋಕ್ತೃತ್ವಗಳನ್ನು ವಹಿಸಿಕೊಳ್ಳುತ್ತದೆ. ಅದರಿಂದ ಕರ್ಮಫಲವಾಗಿ ಬಂದ ಸುಖದುಃಖಗಳನ್ನು ಅನುಭವಿಸುತ್ತದೆ. ಮತ್ತೊಂದು ಎಲ್ಲವನ್ನೂ ಸುಮ್ಮನೆ ಸಾಕ್ಷಿಯಂತೆ ಸಮಾಧಾನ ಚಿತ್ತದಿಂದ ವೀಕ್ಷಿಸುತ್ತಾ ಕುಳಿತಿರುತ್ತದೆ. ಅದಕ್ಕೆ ಯಾವ ಅಶಾಂತಿ ತಳಮಳಗಳೂ ಇಲ್ಲ.

ಇಲ್ಲಿ ಫಲವೆಂಬುದು ಕರ್ಮಫಲ, ತನ್ನ ಹಿಂದಿನ ಕ್ರಿಯೆಗಳಿಂದ ಉದ್ಭವಿಸಿದ ಪ್ರತಿಕ್ರಿಯೆ. ನಮ್ಮ ದೇಹ ಮನಸ್ಸುಗಳೊಡನೆ ನಾವು ಏಕೀಭಾವವನ್ನು ಹೊಂದಿ, ಆ ಮೂಲಕ ಬಾಹ್ಯಪ್ರಪಂಚದ ಸಂಸರ್ಗ ಪಡೆದರೆ ನಮಗೆ ನಮ್ಮ ಕರ್ಮಫಲದ ನಂಟು ಬಂದೇ ಬರುತ್ತದೆ. ಯಾವುದೋ ಹೊರಗಿನ ಒಂದು ಘಟನೆಯು ಅಥವಾ ನಮ್ಮ ಮನಸ್ಸಿನಲ್ಲಿ ಹಾದುಹೋಗುವ ಭಾವ ಭಾವನೆಗಳ ವಿಚಾರದಲ್ಲಿ ನಮಗೆ ಆಸಕ್ತಿಯಾಗಲಿ, ಅನುರಾಗವಾಗಲಿ, ಆತ್ಮೀಯತೆಯಾಗಲಿ ಇಲ್ಲದಿದ್ದರೆ ಅವು ತಾವಾಗಿ ನಮ್ಮನ್ನು ಚಿತ್ತಕ್ಷೋಭೆಗೆ ಈಡುಮಾಡಲಾರವು. ಅವುಗಳಿಂದ ನಮಗೆ ಸುಖವಾಗಲಿ, ದುಃಖವಾಗಲಿ ಉಂಟಾಗದು. ಅದೇ ಮರದಲ್ಲಿ ಕುಳಿತಿರುವ ಇನ್ನೊಂದು ಹಕ್ಕಿಗೆ ಹಣ್ಣು ತಿನ್ನುವ ಆಸೆಯಾಗಲಿ, ಅದನ್ನು ಸವಿದು ಸುಖಿಸುವ ಇಚ್ಛೆಯಾಗಲಿ ಕಾಡದಿರುವುದರಿಂದ ಅದಕ್ಕೆ ಯಾವ ಸುಖದುಃಖಗಳ ಅನುಭವವೂ ಉಂಟಾಗದು. ಅದು ಕೇವಲ ಸಾಕ್ಷಿಯಾಗಿ ನೋಡುತ್ತ ಕುಳಿತಿರುತ್ತದೆ. ಆತ್ಮದಲ್ಲಿ ಸ್ಥಿರಪ್ರತಿಷ್ಠಿತರಾಗಿ, ಯಾವ ಕಾಮನೆಗಳಿಗೂ ಎಡೆಗೊಡದೆ ಸಮಾಧಾನಚಿತ್ತರಾಗಿದ್ದರೆ ಯಾವ ದುಃಖ ಸಂಕಟವೂ ನಮ್ಮನ್ನು ಕಾಡದು. ಆತ್ಮತೃಪ್ತನಿಗೆ ಬಯಕೆಗಳಿಲ್ಲ. ನಿರಾಶೆ ದುಃಖಗಳೂ ಇಲ್ಲ. ಆಸೆಗಳಿಗೆ ಬಲಿಯಾಗಿ ಪರಿಣಾಮಗಳ ಪರಂಪರೆಯ ಸಂಸಾರ ಪ್ರವಾಹದಲ್ಲಿ ತೇಲಿ ಮುಳುಗಿ ಕೊಚ್ಚಿಹೋಗುತ್ತಿರುವುದನ್ನು ತಡೆಗಟ್ಟಬೇಕಾದರೆ ನಾವು ದಡವನ್ನು ಸೇರಿ ಸ್ಥಿರವಾಗಿ ನಿಲ್ಲುವ ಪ್ರಯತ್ನಮಾಡಬೇಕು. ಅವಿವೇಕದಿಂದ ನಾವು

ಅನಾತ್ಮವಸ್ತುಗಳೊಡನೆ ತಾದಾತ್ಮ್ಯಹೊಂದಿರುವವರೆಗೂ ನಾವು ಆ ಪ್ರವಾಹದ ಸೆಳೆತದಿಂದ ತಪ್ಪಿಸಿಕೊಳ್ಳಲಾರೆವು. ಶಾಶ್ವತವೂ, ಆನಂದದಾಯಕವೂ ಆದ ಆತ್ಮವೇ ನಾವೆಂಬ ನಿಜಸ್ವರೂಪದ ಅರಿವು ನಮ್ಮಲ್ಲಿ ಉದಯುವಾದಾಗ ಮಾತ್ರವೇ ನಮಗೆ ಬಿಡುಗಡೆ ಹಾಗೂ ಪರಮ ಸುಖ ಶಾಂತಿಗಳ ಪ್ರಾಪ್ತಿ!

ಅನಾತ್ಮವಸ್ತುಗಳೊಡನೆ ಅಧ್ಯಾಸ ಮಾಡಿಕೊಂಡರೆ ನಾವು ದುಃಖಿಪಡುವ ಹಕ್ಕಿಯಂತೆ. ನಮ್ಮ ನಿಜಸ್ವರೂಪವನ್ನರಿತು ಆತ್ಮವೇ ನಾವೆಂದು ಕಂಡುಕೊಂಡಾಗ ನಾವು ಅತ್ಯಂತ ಗಾಂಭೀರ್ಯದಿಂದ, ಶಾಂತವಾಗಿ ಸಾಕ್ಷಿಯಂತೆ ನೋಡುತ್ತಿರುವ ಇನ್ನೊಂದು ಹಕ್ಕಿಯಂತೆ.

ಮುಂದಿನ ಮಂತ್ರದಲ್ಲಿ ಈ ವಿಷಯುವನ್ನು ಇನ್ನೂ ವಿಶದೀಕರಿಸಿದೆ.

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽ**
**ನೀಶಯಾ ಶೋಚತಿ ಮುಹ್ಯಮಾನಃ ।**
**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ**
**ಮಹಿಮಾನಮಿತಿ ವೀತಶೋಕಃ ॥** ೨

**ಪುರುಷಃ** – ಜೀವನು, **ಸಮಾನೇ ವೃಕ್ಷೇ** – ಅದೇ ಮರದಲ್ಲಿ, **ನಿಮಗ್ನಃ** – ತಲ್ಲೀನನಾಗಿ, **ಮುಹ್ಯಮಾನಃ** – ಮೋಹಗೊಂಡು, **ಅನೀಶಯಾ** – (ಅಸಹಾಯಕತೆಯಿಂದ ಉಂಟಾದ) ಕಳವಳದಿಂದ, **ಶೋಚತಿ** –ಸಂಕಟಪಡುತ್ತಾನೆ, **ಯದಾ** – ಯಾವಾಗ, **ಜುಷ್ಟಂ** – ಸೇವಿಸಲ್ಪಟ್ಟ, **ಅನ್ಯಂ** – ತನಗಿಂತ ವಿಲಕ್ಷಣನಾದ, **ಈಶಂ** – ಈಶ್ವರನನ್ನು, (ಮತ್ತು) **ಅಸ್ಯಮಹಿಮಾನಂ** – ಇವನ ಮಹಿಮೆಯುನ್ನು, **ಇತಿ** – ಹೀಗೆಂದು, **ಪಶ್ಯತಿ** – ಕಂಡುಕೊಳ್ಳುವನೋ, (ಆಗ) **ವೀತಶೋಕಃ** – ಶೋಕವಿಲ್ಲದವನಾಗುತ್ತಾನೆ.

(೨) ಪುರುಷನು (ಜೀವನು) ಅದೇ ವೃಕ್ಷದಲ್ಲಿ ಮಗ್ನನಾಗಿ (ದೇಹಭಾವವನ್ನು ಹೊಂದಿದವನಾಗಿ) ಮೋಹಗೊಂಡು ದೀನಭಾವದಿಂದ ಶೋಕಿಸುತ್ತಿರುವನು. ಅನೇಕ ರೀತಿಯಾಗಿ ಭಜಿಸಲ್ಪಟ್ಟವನೂ, ತನಗಿಂತ ವಿಲಕ್ಷಣನೂ ಆದ ಈಶ್ವರನನ್ನು ಮತ್ತು ಆತನ ಮಹಿಮೆಯನ್ನು ಹೀಗೆಂದು ಕಂಡುಕೊಂಡಾಗ ಜೀವನು ಶೋಕದಿಂದ ಬಿಡುಗಡೆ ಹೊಂದುವನು.

ಈ ಮಂತ್ರವು ಹಿಂದಿನ ಮಂತ್ರದ ಅರ್ಥದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತದೆ. ಆ ಮಂತ್ರದಲ್ಲಿ ಉಕ್ತವಾಗಿರುವ ಎರಡು ಹಕ್ಕಿಗಳು ಯಾವುವು ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಮನಸ್ಸಿನ ತಳಮಳ, ಬುದ್ಧಿಯ ಸ್ಪಂದನದ ಮೂಲಕ ಮಾನವನು ದೇಹವೇ ತಾನೆಂದು ಕಲ್ಪಿಸಿಕೊಂಡಿರುವ ಪರಮಾತ್ಮನೇ ಜೀವ. ಈ ತಪ್ಪು ಕಲ್ಪನೆಯಾಗಿರುವುದು ಅವನಿಗೆ ತನ್ನ ನಿಜಸ್ವರೂಪವು ತಿಳಿಯದಿರುವುದರಿಂದ. ಬಾಹ್ಯಕರಣಗಳೊಂದಿಗೆ ತನ್ನನ್ನು ಅಧ್ಯಾಸ ಮಾಡಿಕೊಂಡು, ಅವುಗಳ ಆಸೆ ಆಕಾಂಕ್ಷೆಗಳನ್ನು ಹೊರ ಜಗತ್ತಿನ ವಿಷಯುವಸ್ತುಗಳ ಮೂಲಕ ಪೂರೈಸಲು ಸತತವಾಗಿ ಶ್ರಮಿಸುತ್ತಾನೆ. ಹಾಗೆ ಜೀವನು ಗೊಂದಲಕ್ಕೆ ಸಿಕ್ಕಿಕೊಂಡು

ನಿಸ್ಸಹಾಯಕತೆಯಿಂದ ಸತತವಾಗಿ ಸಂಕಟಪಡುತ್ತಾನೆ.

ಜೀವವು ಈ ರೀತಿ ಭ್ರಮೆಗೊಳಗಾಗಿ ಸತತ ಸಂಕಟಪಡುವುದೇ ಅದರ ಹಣೆಯ ಬರಹವೇ ? ಅಲ್ಲ. ಈ ಅವಿದ್ಯೆಯು ಕೇವಲ ತಾತ್ಕಾಲಿಕವಾದದ್ದು. ಯಾವ ಗಳಿಗೆಯಲ್ಲಾದರೂ ಜೀವವು ತನ್ನ ನಿಜಸ್ವರೂಪವನ್ನು ಅರಿವಿಗೆ ತಂದುಕೊಂಡು ನಿರಂತರ ಶಾಂತಿಯನ್ನು ಗಳಿಸಿಕೊಳ್ಳಬಹುದು. ತಾನು "ಸಾಕ್ಷಿಯಂತಿರುವ ಹಕ್ಕಿ", ಆತ್ಮವಲ್ಲದೆ ಬೇರಲ್ಲ ಎಂಬುದನ್ನು ತಿಳಿದುಕೊಂಡು ಪರಿಪೂರ್ಣತೆಯನ್ನು ಗಳಿಸಿಕೊಳ್ಳಬಹುದು. ಭಯಂಕರವಾದ, ಸರಸರನೆ ಸರಿಯುವ, ನುಣ್ಣನೆಯ ತಣ್ಣನೆಯ ಚರ್ಮವುಳ್ಳ, ವಿಷದಂಷ್ಟ್ರವುಳ್ಳ ಕಪ್ಪು ಹೆಡೆಯ ಕಾಳಸರ್ಪವೆಂದು ತಾನು ತಿಳಿದಿರುವುದು ಕೇವಲ ಭ್ರಮೆ. ಅದು ನಿಜವಾಗಿಯೂ ವಕ್ರವಕ್ರವಾಗಿ ಬಿದ್ದಿರುವ ಹಗ್ಗ ಎಂದು ತಿಳಿದೊಡನೆ ಭ್ರಮೆಗೊಳಗಾಗಿದ್ದವನ ಮನಸ್ಸು ಭಯವನ್ನು ದೂರಮಾಡಿ ಶಾಂತವಾಗುವುದು. ಹಗ್ಗದ ತಿಳಿವಳಿಕೆಯೇ ಹಾವಿನ ಭ್ರಮೆಯ ನಿರಸನ. ಮನಸ್ಸು ತಳಮಳವನ್ನು ತ್ಯಜಿಸಿ ಮೊದಲಿನ ಸ್ಥಿತಿಗೇ ಬರುವುದು.

ತಪ್ಪುಗ್ರಹಿಕೆ, ದುರ್ನೀತಿ, ಲೋಭ, ಮೋಹ, ಕಾಮ, ಕ್ರೋಧ, ಭಯ, ನಿರಾಶೆ – ಇವುಗಳೆಲ್ಲಾ ಜೀವಕ್ಕೆ ಅನ್ವಯಿಸುವಂತಹವು. ಏಕೆಂದರೆ ತಾನು ದೇಹ, ಮನಸ್ಸು ಬುದ್ಧಿಗಳೆಂದು ಅದು ಭ್ರಮೆಗೊಳಗಾಗಿರುವುದರಿಂದ. ಈ ಭ್ರಮೆಯು ಇರುವ ತನಕ ಈ ಸಂಕಟಗಳು ಅದಕ್ಕೆ ಒದಗೇ ಒದಗುವುವು. ಆದರೆ ತನ್ನ ನಿಜಸ್ವರೂಪವನ್ನು ಅರಿತಬಳಿಕ ಕೆಟ್ಟ ಕನಸಿನಿಂದ ಎಚ್ಚರವಾದಂತೆ ಅದಕ್ಕೆ ಅವುಗಳ ಪೀಡನೆ ನಿಂತುಹೋಗುವುದು. ಆದರಿಂದಲೇ 'ತನಗಿಂತ ಬೇರೆಯಾದ ಈಶ್ವರನನ್ನೂ, ಅವನ ಮಹಿಮೆಯನ್ನೂ ಯಾವಾಗ ಕಂಡುಕೊಳ್ಳುವನೋ ಆಗ ಶೋಕರಹಿತನಾಗುವನು', ಎಂದು ಶ್ರುತಿಯು ಹೇಳುವುದು.

## ಪರಮಾತ್ಮ ಜ್ಞಾನದ ಫಲ

**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ ॥** ೩

**ಯದಾ** – ಯಾವಾಗ, **ಪಶ್ಯಃ** – ಸಾಧಕನು, **ರುಕ್ಮವರ್ಣಂ** – ಬಂಗಾರದ ವರ್ಣದವನಾದ, **ಕರ್ತಾರಂ** – ಕರ್ತೃವಾದ, **ಈಶಂ** – ಈಶ್ವರನಾದ, **ಬ್ರಹ್ಮಯೋನಿಂ** – ಸೃಷ್ಟಿಕರ್ತನಿಗೆ ಕಾರಣನಾದ, **ಪುರುಷಂ** – ಪುರುಷನನ್ನು, **ಪಶ್ಯತೇ** – ನೋಡುತ್ತಾನೆಯೋ, **ತದಾ** – ಆಗ, **ವಿದ್ವಾನ್** – ವಿದ್ವಾಂಸನು, **ಪುಣ್ಯಪಾಪೇ** – ಪುಣ್ಯಪಾಪಗಳನ್ನು, **ವಿಧೂಯ** – ತೊಲಗಿಸಿಕೊಂಡು, **ನಿರಂಜನಃ** – ನಿರ್ಲೇಪನಾಗಿ, **ಪರಮಂ** – ಶ್ರೇಷ್ಠವಾದ (ನಿರತಿಶಯವಾದ), **ಸಾಮ್ಯಂ** – ಸಮತ್ವವನ್ನು, **ಉಪೈತಿ** – ಹೊಂದುವನು.

(೩) ಯಾವಾಗ ಸಾಧಕನು ಸ್ವಯಂಜ್ಯೋತಿ ಸ್ವರೂಪನಾದ, ಸರ್ವಜಗತ್ತಿಗೆ ಕರ್ತೃವಾದ, ಸೃಷ್ಟಿಕರ್ತನಿಗೆ ಕಾರಣನಾದ ಈಶ್ವರನನ್ನು ನೋಡುವನೋ ಆಗ ಆ ವಿದ್ವಾಂಸನು ಪುಣ್ಯಪಾಪಗಳನ್ನು ಕಳೆದುಕೊಂಡು ಕ್ಲೇಶರಹಿತನಾಗಿ ಪರಮಶ್ರೇಷ್ಠವಾದ ಸಮತ್ವವನ್ನು ಹೊಂದುವನು.

ಪ್ರತಿಯೊಬ್ಬ ಸಾಧಕನೂ ಅನಾತ್ಮವಸ್ತುಗಳ ನಡುವೆ ಅವುಗಳಿಂದ ಮುಚ್ಚಲ್ಪಟ್ಟಿರುವ ಆತ್ಮವಸ್ತುವನ್ನು ಅನ್ವೇಷಿಸುತ್ತಿರುವ ಭ್ರಾಂತಿಯುತ ಜೀವ. ಒಂದಲ್ಲ ಒಂದು ದಿನ ಅವನಿಗೆ ಆತ್ಮದರ್ಶನ ಆಗಿಯೇ ಆಗುತ್ತದೆ. ಅನ್ವೇಷಕನು ಧ್ಯಾನೋಪಾಸನೆಗಳಿಂದ ತನ್ನ ಇಂದ್ರಿಯಗಳನ್ನು ಬಾಹ್ಯವಿಷಯಗಳಿಂದ ಹಾಗೂ ತನ್ನ ಮನಸ್ಸನ್ನು ಅಂತರಂಗದ ಅನ್ಯ ಚಿಂತನೆಗಳಿಂದ ಸಂಪೂರ್ಣವಾಗಿ ಹಿಂದಕ್ಕೆಳೆದುಕೊಂಡಾಗ ಅವನಲ್ಲಿ ಒಂದು ವಿಶಿಷ್ಟವಾದ ಆಧ್ಯಾತ್ಮಿಕ ಶಕ್ತಿಯು ಉತ್ಪನ್ನವಾಗುತ್ತದೆ. ಈ ಅದ್ಭುತ ಶಕ್ತಿಯನ್ನು ಒಟ್ಟುಗೂಡಿಸಿ, ಏಕಾಗ್ರವಮಾಡಿ ತನ್ನಲ್ಲೇ ಅಡಗಿರುವ ಆತ್ಮದ ಅನ್ವೇಷಣೆಗೆ ತೊಡಗಿದರೆ ಅವನು ಆತ್ಮಜ್ಞಾನಿಯಾಗುವುದರಲ್ಲಿ ಸಂದೇಹವಿಲ್ಲ.

ಅನ್ಯ ವಿಷಯಗಳಲ್ಲಿ ನಿರತವಾಗಿದ್ದ ಇಂದ್ರಿಯಗಳನ್ನೂ, ಮನಸ್ಸನ್ನೂ ಅವುಗಳಿಂದ ಬಿಡಿಸಿ ಹಿಂದಿರುಗಿಸಿದಾಗ ಅಂತರಂಗದಲ್ಲಿ ಒಂದು ವಿಧವಾದ ಶೂನ್ಯ ಸ್ಥಿತಿಯು ಅನುಭವವಾಗುತ್ತದೆ. ಮಾನಸಿಕ ಉದ್ವಿಗ್ನತೆಯೂ, ಚಿಂತನಾ ಪ್ರವಾಹವೂ ಒಮ್ಮೆಗೇ ನಿಂತು ಒಂದು ತಟಸ್ಥ ಸ್ಥಿತಿಯು ಏರ್ಪಡುತ್ತದೆ. ಈ ಶೂನ್ಯಸ್ಥಿತಿಯು ಅಸ್ತಿತ್ವವು ಸ್ಪಷ್ಟವಾಗಿ ಅವನ ಅರಿವಿಗೆ ಬರುತ್ತದೆ. ಕನಸು ಕಾಣುತ್ತಿದ್ದವನು ಕೂಡಲೇ ಎಚ್ಚರಗೊಂಡಾಗ ಅವನ ಕನಸಿನ ವಿಷಯಗಳ ಅಭಾವವು ಗೋಚರಕ್ಕೆ ಬರುವುದು. ಆತನು ತನ್ನ ಮನಸ್ಸನ್ನು ಮತ್ತೂ ವಿಶ್ಲೇಷಿಸಿಕೊಂಡಾಗ ಶೂನ್ಯಭಾವವು ಸ್ಪಷ್ಟವಾಗಿ ತೋರಿಕೊಂಡು ತನ್ನ ಮನಸ್ಸಿನಲ್ಲಿ ನಿರ್ವಾತರೂಪದ ಶೂನ್ಯತೆಯು ತೋರಿಬರುತ್ತದೆ. ಈ ಸ್ಥಿತಿಯಲ್ಲಿ ಮನಸ್ಸಿನ ಶೂನ್ಯತೆಯೇ ಒಂದು ವಿಧವಾದ ಶಾಂತಿಯನ್ನು ನೆಲೆಸುವಂತೆ ಮಾಡುತ್ತದೆ. ಈ ಶೂನ್ಯ ಸ್ಥಿತಿಯು ಅರಿವು ನಿರ್ವಿಷಯಕ ಜ್ಞಾನ. ಯಾವ ವಿಷಯ ಜ್ಞಾನವೂ ಇಲ್ಲದ ಕೇವಲ ಅರಿವಿನ ಜ್ಞಾನ. ಬೆಳಗಲು ಯಾವ ವಿಷಯವೂ ಇಲ್ಲವಾದ್ದರಿಂದ ಅದು ತನ್ನನ್ನೇ ಬೆಳಗಿಕೊಂಡು ತೋರಿಕೊಳ್ಳುತ್ತದೆ. ಸಾಧಕನು ಮಾನಸಿಕ ಶೂನ್ಯಾವಸ್ಥೆಯನ್ನು ಕುರಿತು ಧ್ಯಾನಮಾಡಿದಾಗ ಅವನಿಗೆ ತನ್ನೊಳಗಿನ ವಿಷಯರಹಿತವಾದ ಅರಿವಿನ ಜ್ಞಾನವೇ ಉಂಟಾಗುತ್ತದೆ.

ಯಾವಾಗ ಸಾಧಕನು ತಾನು ಸರ್ವವ್ಯಾಪಿಯಾದ ಜ್ಯೋತಿರ್ಜ್ಯೋತಿ, ಶುದ್ಧ ಜ್ಞಾನಸ್ವರೂಪಿ, ನಾಮರೂಪಗಳನ್ನು ತಳೆದಿರುವ ವಸ್ತುಗಳಿಗೆಲ್ಲಾ ಚೈತನ್ಯದಾತನಾದ ದಿವ್ಯಾತ್ಮ ಎಂದು ತಿಳಿಯುವನೋ, ಆಗ ಅವನ ತಳಮಳಗಳೂ, ಸಂಕುಚಿತಭಾವವೂ ಕೊನೆಗೊಂಡು ಅವನು ಪರಮ ಶಾಂತಿಯನ್ನೂ, ಮಾನಸಿಕ ಸ್ಥಿರತೆಯನ್ನೂ ಪಡೆಯುವನು, ಎಂದು ಶ್ರುತಿಯು ಹೇಳುತ್ತಿದೆ. ಅಲ್ಲಿಂದ ಮುಂದೆ ಅವನಿಗೆ ಯಾವ ದುಃಖವೂ ಸೋಕದು. ಎಂತಹ ಸನ್ನಿವೇಶದಲ್ಲೂ ಅವನು ಉದ್ವಿಗ್ನನಾಗಲಾರ. ಅವನು ಶಾಂತಿ ಸಮಾಧಾನಗಳ ತೌರು ಆಗುತ್ತಾನೆ. ಮನಸ್ಸನ್ನು

ಉದ್ವಿಗ್ನಪಡಿಸುವಂತಹ ಯಾವ ಮನೋವೃತ್ತಿಗಳೂ ಅವನಲ್ಲಿ ಉದಿಸಲಾರವು. ಎಲ್ಲಾ ಸಂದರ್ಭಗಳಲ್ಲಿಯೂ ಬಾಹ್ಯವಾಗಿ ಮತ್ತು ಆಂತರಿಕವಾಗಿ ಅವನು ಒಂದು ಶಾಂತಿಯ ದಿಗ್ದರ್ಶನ ಜ್ಯೋತಿಯಾಗಿ, ಸಂಸಾರಸಾಗರದಲ್ಲಿ ತೊಳಲಾಡುತ್ತಿರುವ ಜೀವಿಗಳೆಲ್ಲರಿಗೂ ಜ್ಞಾನ, ಸಮಾಧಾನ, ಭರವಸೆ ಮತ್ತು ಸ್ಥೈರ್ಯಗಳ ಸಂದೇಶವನ್ನು ಪ್ರಸರಿಸುತ್ತಾನೆ.

ಅಂತಹ ಜ್ಞಾನಿಗೆ ಯಾವ ಪಾಪಪುಣ್ಯದ ಸೋಂಕೂ ಇರದು. ಅವನಿಗೆ ಪಾಪದ ಭಯವಿಲ್ಲ. ಪುಣ್ಯದ ಅಪೇಕ್ಷೆ ಇಲ್ಲ. ಪಾಪ ಪುಣ್ಯಗಳು ಮಾನಸಿಕ ಪ್ರಕ್ರಿಯೆಗಳು, ಆಧ್ಯಾತ್ಮಿಕ ಬೆಳವಣಿಗೆಯ ಶೈಶವಾವಸ್ಥೆಯಲ್ಲಿ ಬೇಕಾಗುವ ಸಾಧನಗಳು. ಆದರೆ ಅವನು ಆ ಅವಸ್ಥೆಗಳನ್ನು ದಾಟಿ, ಜೀವಭಾವವನ್ನು ಮೀರಿ ಸರ್ವವ್ಯಾಪಿಯಾದ ಜ್ಞಾನಸ್ವರೂಪಿ ತಾನು ಎಂಬ ಅರಿವನ್ನು ಮೂಡಿಸಿಕೊಂಡ ಮೇಲೆ ಅವನು ಪುಣ್ಯಪಾಪಗಳೆಂಬ ಕರ್ಮಫಲಗಳನ್ನು ನಿರ್ಮೂಲ ಮಾಡಿ ಪರಮಾತ್ಮನೊಡನೆ ಸಮತ್ವ ಅಂದರೆ ಐಕ್ಯತೆಯನ್ನು ಹೊಂದುವನು.

ಅಂತಹವನೇ 'ದ್ವಿಜ' ನೆನಿಸಿಕೊಳ್ಳುತ್ತಾನೆ. ಅವನ ಮೊದಲನೆಯ ಹುಟ್ಟು ತಾಯಿಯ ಗರ್ಭದಿಂದ ಅವತರಿಸಿದ್ದು. ಆಗ ಅವನ ಮಾನಸಿಕ ಬೆಳವಣಿಗೆಯೂ, ಬುದ್ಧಿಯ ವಿಕಾಸವೂ ಪೂರ್ಣತೆಯ ಮಟ್ಟಕ್ಕೆ ಬಂದಿರುವುದಿಲ್ಲ. ಮುಂದೆ ಅವನು ಪುನಃಪ್ಯನಾಗಿ ಬೆಳೆದು ವಿವೇಕ ವೈರಾಗ್ಯಗಳನ್ನು ಗಳಿಸಿ, ಶಾಂತಿ ಸಾಧನೆಗಾಗಿ ಧ್ಯಾನವನ್ನು ಮಾಡಿ, ತನ್ನ ಮನೋಬುದ್ಧಿಗಳ ಸಂಕುಚಿತ ಕೋಶವನ್ನು ಭೇದಿಸಿ ಹೊರಬಂದು, ದೇವ-ಮಾನವನಾಗಿ ತೋರಿಕೊಳ್ಳುವುದು ಎರಡನೆಯ ಹುಟ್ಟು. ಅದು ಅವನ ಪರಮ ಸಾಧನೆ.

**ಪ್ರಾಣೋ ಹ್ಯೇಷ ಯಃ ಸರ್ವಭೂತೈರ್ವಿಭಾತಿ**
**ವಿಜಾನನ್ ವಿದ್ವಾನ್ ಭವತೇ ನಾತಿವಾದೀ ।**
**ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನ್**
**ಏಷ ಬ್ರಹ್ಮವಿದಾಂ ವರಿಷ್ಠಃ ॥** ೪

**ಯಃ ಏಷಃ ಪ್ರಾಣಃ ಹಿ** – ಯಾವ ಈ ಪ್ರಾಣನು (ಪರಮೇಶ್ವರನು), **ಸರ್ವಭೂತೈಃ** – ಎಲ್ಲಾ ಭೂತಗಳಲ್ಲಿಯೂ ಇರುವ ಆತ್ಮನಾಗಿ, **ವಿಭಾತಿ** – ಪ್ರಕಾಶಿಸುತ್ತಾನೆ, (ಇವನನ್ನು ಹೀಗೆ) **ವಿಜಾನನ್** – ತಿಳಿದುಕೊಂಡವನಾದ, **ವಿದ್ವಾನ್** – ವಿದ್ವಾಂಸನು, **ಅತಿವಾದೀ** – ಮಿತಿಮೀರಿ ಮಾತನಾಡುವವನು, **ನ ಭವತೇ** – ಆಗುವುದಿಲ್ಲ, **ಆತ್ಮಕ್ರೀಡಃ** – ಆತ್ಮನಲ್ಲಿಯೇ ನಿರತನಾದ, **ಆತ್ಮರತಿಃ** – ಆತ್ಮನಲ್ಲೇ ಪ್ರೀತಿಯುಳ್ಳ, **ಕ್ರಿಯಾವಾನ್** – ಕ್ರಿಯಾವಂತನೂ ಆದ, **ಏಷಃ** – ಈತನು, **ಬ್ರಹ್ಮವಿದಾಂ** – ಬ್ರಹ್ಮವನ್ನು ತಿಳಿದವರಲ್ಲಿ, **ವರಿಷ್ಠಃ** – ಅತ್ಯಂತ ಶ್ರೇಷ್ಠನು.

**(೪) ಈ ಪ್ರಾಣನೇ (ಪರಮೇಶ್ವರನೇ) ಸರ್ವಭೂತಗಳಲ್ಲಿಯೂ ಇರುವ ಸರ್ವಾತ್ಮನಾಗಿ ಪ್ರಕಾಶಿಸುತ್ತಾನೆ. ಹೀಗೆಂದು ಇವನನ್ನು ತಿಳಿದುಕೊಂಡ ವಿದ್ವಾಂಸನು ಯಾವುದನ್ನೂ ಅತಿಕ್ರಮಿಸಿ ನುಡಿಯುವುದಿಲ್ಲ. ಯಾವುದನ್ನೂ ಬಯಸದೆ ಆತ್ಮನಲ್ಲಿಯೇ ಸಂತೃಪ್ತನಾಗಿರುವವನೂ, ಆತ್ಮನಲ್ಲಿಯೇ**

ಪ್ರೀತಿಯುಳ್ಳವನೂ ಆದ ಈತನು ಬ್ರಹ್ಮವನ್ನು ತಿಳಿದವರಲ್ಲಿ ಅತ್ಯಂತ ಶ್ರೇಷ್ಠನು

**ಪ್ರಾಣೋ ಹ್ಯೇಷ ಯಃ –**

ಇಲ್ಲಿ 'ಪ್ರಾಣ' ಎಂದರೆ ಪ್ರಾಣಕ್ಕೂ ಪ್ರಾಣನಾಗಿರುವವನು ಎಂದು. ಆ ಮಾತಿನಿಂದ ಸಮಷ್ಟಿರೂಪದ ಪ್ರಾಣವನ್ನು ಸೂಚಿಸಿದೆ. ಅದನ್ನು ವೇದಾಂತದಲ್ಲಿ 'ಸೂತ್ರಾತ್ಮಾ' ಎಂದು ಕರೆಯುತ್ತಾರೆ. ಸೂತ್ರಾತ್ಮಾ ಎಂದರೆ ಪರಮಾತ್ಮ ತತ್ತ್ವ ಅಥವಾ ಈಶ್ವರ. ಪರಿಶುದ್ಧ ಜ್ಞಾನರೂಪದ ಆತ್ಮವನ್ನು ಅರಿತಮೇಲೆ ನಿಜವಾಗಿಯೂ ಅದೇ ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರಕವೆಂಬ ತಿಳಿವು ಆತನಲ್ಲಿ ಮೂಡುತ್ತದೆ. ಆ ಜ್ಞಾನಿಯು ಬೇರೆ ಯಾವುದನ್ನು ಕುರಿತೂ ವಾದಮಾಡುವುದಿಲ್ಲ, ಅನಿತ್ಯವಾದ ಪ್ರಾಪಂಚಿಕ ವಿಷಯಗಳಲ್ಲಿ ಚಿಂತನೆಯನ್ನೂ ಮಾಡುವುದಿಲ್ಲ. ಅವುಗಳ ವಿಚಾರವಾಗಿ ವ್ಯರ್ಥ ಕಾಲಹರಣವನ್ನೂ ಮಾಡುವುದಿಲ್ಲ. ಸಂಪಾದನೆ, ಸಂಗ್ರಹಣೆ, ಸ್ಪರ್ಧೆ, ಲಾಭದೃಷ್ಟಿ, ದುಡಿಮೆ, ಬಳಲಿಕೆ, ಗಳಿಕೆ, ವೆಚ್ಚ – ಇವುಗಳಲ್ಲಿ ಅವನು ಅಲ್ಲಿಂದ ಮುಂದೆ ಎಂದೂ ನಿರತನಾಗಲಾರ. ಕನಸಿನಲ್ಲಿ ಕಟ್ಟಿಕೊಂಡ ಸಂಸಾರದ ನಿರ್ವಹಣೆಗಾಗಿ ಎಚ್ಚರವಾದ ಮೇಲೆ ಯಾರೂ ಲೋಕದಲ್ಲಿ ಶ್ರಮಪಡುವುದಿಲ್ಲ.

ಸರ್ವಭೂತಗಳಲ್ಲಿಯೂ ಬೆಳಗುತ್ತಿರುವ ಪರಮೇಶ್ವರನ ಸ್ವರೂಪವೇ 'ನನ್ನ ಸ್ವರೂಪ' ಎಂದು ತಿಳಿದ ಜ್ಞಾನಿಯು ಲೌಕಿಕ ಹವ್ಯಾಸಗಳನ್ನು ಬಿಟ್ಟು ವ್ಯರ್ಥವಾದಗಳನ್ನು ತ್ಯಜಿಸುತ್ತಾನೆ. ಅವನಿಗೆ ಆತ್ಮ ಮತ್ತು ಅದರ ಮಹಾತ್ಮೆಯನ್ನು ಬಿಟ್ಟು ಬೇರೇನೂ ಬೇಕೆನಿಸುವುದಿಲ್ಲ. ಅಲ್ಲಿಂದ ಮುಂದೆ ಆತ್ಮಕ್ರೀಡನಾಗಿ, ಆತ್ಮರತಿಯಾಗಿರುವುದೇ ಅವನ ಏಕಮಾತ್ರ ಪ್ರವೃತ್ತಿ. ಸಂಸ್ಕೃತದಲ್ಲಿ ಆತ್ಮಕ್ರೀಡೆ, ಆತ್ಮರತಿ ಎಂಬ ಎರಡು ಶಬ್ದಗಳ ಸಾಮಾನ್ಯ ಅರ್ಥ ಒಂದೇ ಆದರೂ ಅವುಗಳಲ್ಲಿ ಸ್ವಲ್ಪ ಸೂಕ್ಷ್ಮ ವ್ಯತ್ಯಾಸವಿದೆ. ಕ್ರೀಡೆ ಎಂದರೆ ಹೊರಗಿನ ವಸ್ತುಗಳನ್ನು ಸಾಧನವಾಗಿ ಮಾಡಿಕೊಂಡು ರಮಿಸುವುದು. ರತಿ ಎಂದರೆ ಯಾವ ಹೊರಗಿನ ಸಾಧನವನ್ನೂ ಬಯಸದೆ ತನ್ನೊಳಗೇ ಆನಂದವನ್ನು ಅನುಭವಿಸುತ್ತಿರುವುದು. ತನ್ನ ಸ್ವರೂಪವನ್ನು ಅರಿತ ಜ್ಞಾನಿಯು ತನ್ನೊಳಗಿರುವ ಪರಮಾತ್ಮನ ಆನಂದವನ್ನು ಅನುಭವಿಸುತ್ತಿರುತ್ತಾನೆ. ಹಾಗೂ ತನ್ನ ಸುತ್ತಮುತ್ತ ಇರುವ ನಾಮ ರೂಪಗಳ ಸಕಲ ವಸ್ತುಗಳಲ್ಲಿಯೂ ಪರಮಾತ್ಮನನ್ನೇ ಕಾಣುತ್ತಾನೆ. ಅವನಿಗೆ ಆಗಲೂ ಅದೇ ಆನಂದ. ಆತ್ಮಜ್ಞಾನಿಗೆ ಎಲ್ಲೆಲ್ಲಿಯೂ ಯಾವಾಗಲೂ ಒಳಗೂ–ಹೊರಗೂ ಸತ್–ಚಿತ್–ಆನಂದದ ಅನುಭವ. ಅವನು ಬದುಕು ಪ್ರಕಾಶ–ಶಕ್ತಿ–ಜ್ಞಾನಗಳ ಸಮ್ಮಿಳನ.

ಅರೆಬರೆಯ ಶಾಸ್ತ್ರಜ್ಞಾನ, ಅವುಗಳ ಪೂರ್ಣ ಅಜ್ಞಾನಕ್ಕಿಂತ ಹೆಚ್ಚು ಅಪಾಯಕಾರಿ. ಪವಿತ್ರಶಾಸ್ತ್ರಗಳ ಅಪಕ್ವ ಪಂಡಿತರಲ್ಲಿ ಕೆಲವರು, ಆತ್ಮಸಾಕ್ಷಾತ್ಕಾರವಾದ ಮೇಲೆ ಜ್ಞಾನಿಯು ಮಾಡಬೇಕಾದ ಯಾವ ಕರ್ಮವೂ ಇರುವುದೇ ಇಲ್ಲ ಎಂದು ವಾದಿಸುತ್ತಾರೆ. ಮೇಲ್ನೋಟಕ್ಕೆ ಆ ತೆರದ ಅರ್ಥ ಕೊಡುವ ವಾಕ್ಯಗಳು ಶ್ರುತಿಯಲ್ಲಿ ಕಂಡುಬರುವುದೇನೋ ನಿಜ. ಆದರೆ ಅವುಗಳ ನಿಜವಾದ

ಅರ್ಥ, ಕಾಮ್ಯಕರ್ಮಗಳಾಗಲಿ, ಅಹಂಕಾರಯುತವಾದ ಸ್ವಾರ್ಥಕರ್ಮಗಳಾಗಲಿ ಇರುವುದಿಲ್ಲ ಎಂದಲ್ಲದೆ ಯಾವ ಕರ್ಮವೂ ಇರುವುದೇ ಇಲ್ಲವೆಂದಲ್ಲ; ಲೋಕಕಲ್ಯಾಣಕ್ಕಾಗಿ, ಸಮಾಜದ ಹಿತಕ್ಕಾಗಿ ಅವರು ಮಾಡಬೇಕಾದ ಕರ್ಮಗಳನ್ನು ಮಾಡಲೇಬೇಕು. ಬ್ರಹ್ಮಜ್ಞಾನಿಯಾದೊಡನೆ ಹೆರರ ಸಂಕಟಕ್ಕೂ ಮರುಗದೆ, ದೀನದಲಿತರ ಉದ್ಧಾರಕ್ಕೂ ಯತ್ನಿಸದೆ, ತನ್ನ ಆನಂದದಲ್ಲೇ ಮರೆಯುತ್ತ ಕರ್ಮಬಾಹಿರನಾಗಿ ಕೈಕಟ್ಟಿ ಕುಳಿತಿರುವುದಕ್ಕೆ ಯಾವ ಪರ್ಮಾನಗಿಯೂ ಅವನಿಗೆ ದೊರೆತಂತಲ್ಲ. ಅದು ಉಪನಿಷತ್ತಿನ ಉದಾತ್ತ ಉಪದೇಶವಲ್ಲ.

'ಕ್ರಿಯಾವಾನ್' ಎಂಬ ಶಬ್ದದಿಂದ ಶ್ರುತಿಯು ಈ ಎಚ್ಚರಿಕೆ ಕೊಡುತ್ತಿದೆ. ಜ್ಞಾನ, ಧ್ಯಾನ, ವೈರಾಗ್ಯಗಳೊಂದಿಗೆ ಅವನು ಕ್ರಿಯಾವಂತನಾಗಿಯೂ ಇರಬೇಕು. ಅವನ ನಿಸ್ವಾರ್ಥ ಕಾರ್ಯಗಳೇ ಸಮಾಜದ ಏಳಿಗೆಗೂ, ಸಂಸ್ಕೃತಿಯ ಜಾಗೃತಿಗೂ ಕಾರಣವಾಗಬೇಕು. ದೈತ್ಯಮಾನವನು ದೇವಮಾನವನಾಗುವುದಕ್ಕೆ ಜ್ಞಾನಿಗಳ ಸಹಾಯಹಸ್ತ ಅಗತ್ಯ. ಇಂದಿಗೆ ಪಶುಪ್ರವೃತ್ತಿಯನ್ನು ಅದುಮಿ ಕರುಣೆ, ಪ್ರೇಮ ಮುಂತಾದ ಸಜ್ಜನಿಕೆಯನ್ನು ವೃದ್ಧಿಸಿ ವನ್ಯಮೃಗವಾಗಿದ್ದ ಕಾಡುಮನುಷ್ಯನನ್ನು ನಾಗರಿಕನನ್ನಾಗಿ ಮಾಡಿ, ಅವನಲ್ಲಿ ಧರ್ಮ, ಪುಣ್ಯ, ನಯ ನೀತಿಗಳ ಸದ್ಗುಣಗಳನ್ನು ಬಿತ್ತಿ, ದೈವತ್ವದ ಕಡೆಗೆ ಅವನನ್ನು ಒಲಿಯುವಂತೆ ಮಾಡಿದವರು ಆತ್ಮಜ್ಞಾನಿಗಳೇ ಮತ್ತು ಸಾಧುಸಂತರೇ. ಬಾಹ್ಯ ಮತ್ತು ಅಂತರಂಗದ ಸಂಸ್ಕೃತಿಗೆ ನಯ ನಾಜೂಕುಗಳ ಶಾಶ್ವತ ಹೊಳಪು ತಂದುಕೊಟ್ಟಿರುವುದು ಯೋಧನ ಕತ್ತಿಯಾಗಲಿ, ರಾಜರಾಜಾಧಿಪತಿಗಳ ತೋಳಬಲವಾಗಲಿ, ಕೊನೆಗೆ ವಿಜ್ಞಾನಿಗಳ ಸೂಕ್ಷ್ಮಮತಿಯಾಗಲಿ ಅಲ್ಲ. ಪಾಶವೀ ಪ್ರವೃತ್ತಿಗಳನ್ನು ಪ್ರಾರಂಭದಲ್ಲೇ ನಾಶಮಾಡಿ ರಾಕ್ಷಸನನ್ನು ಮಾನವತ್ವದ ಮೇಲ್ಮಟ್ಟಕ್ಕೆ ಎತ್ತಲು ಅಗತ್ಯವಾದ ಉತ್ತಮೋತ್ತಮ ತತ್ತ್ವಾನುಷ್ಠಾನದ ಕಡೆಗೆ ಒಯ್ದು, ದೈವತ್ವವನ್ನು ಸಂಪಾದಿಸಿಕೊಳ್ಳುವಂತೆ ಮಾಡುವುದರಲ್ಲಿ ಪ್ರತಿಹೆಜ್ಜೆಗೂ ಸಾಧುಸಂತರ (ದಿವ್ಯ ಜ್ಞಾನಿಗಳ) ಸಕ್ರಿಯವಾದ ಪಾತ್ರವೂ ಮಾರ್ಗದರ್ಶನವೂ ಇದ್ದೇ ಇವೆ. ಒಂದು ಕಾಲದಲ್ಲಿ ನಮ್ಮ ತಪಸ್ವಿಗಳು ಪ್ರಪಂಚ ಪರಿತ್ಯಾಗ ಮಾಡಿ ಸಮಾಜದಿಂದ ದೂರವಾದಾಗಲೇ ನಮ್ಮ ಧರ್ಮಸಂಸ್ಕೃತಿಗಳಲ್ಲಿ ಅಧಃಪತನ ತೋರಿಕೊಂಡಿದ್ದು. ಸ್ವಾರ್ಥಫಲೋದ್ದೇಶದಿಂದ ಮಾಡುವ ಕರ್ಮಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ ಶ್ರೀ ಶಂಕರರೇ ಅವರ ಕಾಲದಲ್ಲಿ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಅತ್ಯಂತ ಕ್ರಿಯಾಶೀಲರಾಗಿ ದುಡಿದವರು. ಆದ್ದರಿಂದ ಶ್ರುತಿಯು ನಿಷೇಧಿಸುವುದು ಸ್ವಾರ್ಥಫಲಾಪೇಕ್ಷೆಯಿಂದ ಮಾಡುವ ಕರ್ಮಗಳನ್ನೇ ಹೊರತು ನಿಸ್ವಾರ್ಥವಾದ, ಜನಹಿತಪ್ರದವಾದ ಕರ್ಮಗಳನ್ನಲ್ಲ.

ಅಂತಹ ಸಮಾಜಕಲ್ಯಾಣ ಕರ್ಮಗಳನ್ನು ಶ್ರುತಿಯು ಶ್ಲಾಘಿಸುತ್ತದೆ. ಅಲ್ಲದೆ ಆ ಕರ್ಮಗಳ ಅನುಷ್ಠಾನವೇ ಆತ್ಮಜ್ಞಾನಿಗಳು, ಸಾಧುಸಂತರು ಮಾಡಬೇಕಾದ ಲೋಕಸೇವೆ ಎನ್ನುತ್ತದೆ!

# ಆತ್ಮದರ್ಶನದ ಹಂತಗಳು

**ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ**
**ಸಮ್ಯಗ್‌ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್ ।**
**ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ**
**ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥** ೫

**ಏಷ ಆತ್ಮಾ** – ಈ ಆತ್ಮನು, **ನಿತ್ಯಂ** – ಯಾವಾಗಲೂ, **ಸತ್ಯೇನ** – ಸತ್ಯದಿಂದಲೂ, **ತಪಸಾ ಹಿ** – ತಪಸ್ಸಿನಿಂದಲೂ, **ಸಮ್ಯಗ್ ಜ್ಞಾನೇನ** – ಯಥಾರ್ಥ ಜ್ಞಾನದಿಂದಲೂ, **ಲಭ್ಯಃ** – ಪ್ರಾಪ್ತನಾಗುವನು, (ಇವನು) **ಅಂತಃಶರೀರೇ** – ಹೃದಯಾಕಾಶದಲ್ಲಿ, **ಜ್ಯೋತಿರ್ಮಯಃ ಹಿ** – ಪ್ರಕಾಶಮಾನನೂ, **ಶುಭ್ರಃ** – ಶುದ್ಧನೂ ಆದ, **ಯಂ** – ಇಂತಹ ಆತ್ಮನನ್ನು, **ಕ್ಷೀಣದೋಷಾಃ** – ದೋಷವನ್ನು ಕ್ಷಯಿಸಿರುವ (ನ್ಯೂನತೆಗಳನ್ನು ಕಡಮೆ ಮಾಡಿಕೊಂಡಿರುವ) **ಯತಯಃ** – ಯತಿಗಳು, **ಪಶ್ಯಂತಿ** – ಕಂಡುಕೊಳ್ಳುವರು

(೫) ಈ ಆತ್ಮನು ಯಾವಾಗಲೂ ಸತ್ಯದಿಂದಲೂ, ತಪಸ್ಸಿನಿಂದಲೂ, ಯಥಾರ್ಥ ಜ್ಞಾನದಿಂದಲೂ, ಬ್ರಹ್ಮಚರ್ಯವನ್ನು ಪಾಲಿಸುವುದರಿಂದಲೂ ಲಭ್ಯನು. ಇವನು ಹೃದಯಾಕಾಶದಲ್ಲಿ ಪ್ರಕಾಶಮಾನನೂ. ಶುದ್ಧನೂ ಆಗಿರುವನು. ಇಂತಹ ಆತ್ಮನನ್ನು ಶುದ್ಧಚಿತ್ತರಾದ ಯತಿಗಳು ಕಂಡುಕೊಳ್ಳುವರು.

ಸತ್ಯ, ಅಹಿಂಸಾ, ಬ್ರಹ್ಮಚರ್ಯ – ಇವು ಮೂರೂ ಹಿಂದೂಧರ್ಮದ ಅಡಿಗಲ್ಲುಗಳು. ಸನ್ಮಾರ್ಗಕ್ಕೆ ಇವು ಮೂರೂ ಅಗತ್ಯವೆಂದು ಹೇಳುವಾಗಲೂ, ನಮ್ಮ ಪೂರ್ವಸೂರಿಗಳು ಸತ್ಯವನ್ನೇ ಮೊದಲ ಸದ್ಗುಣವಾಗಿ ಹೇಳಿದ್ದಾರೆ. ಸತ್ಯವೇ ಧರ್ಮದ ಮೂಲ. ಸತ್ಯವೆಂದರೆ ಸುಳ್ಳು ಹೇಳದಿರುವುದು. ಅಷ್ಟುಮಾತ್ರವಲ್ಲ. ನಿತ್ಯ ನಡವಳಿಕೆಯಲ್ಲೂ ಸತ್ಯವೆಂದರೆ, ಮನಸ್ಸಿನ ಯೋಚನೆಯಂತೆ ನುಡಿಯುವುದು. ನುಡಿದಂತೆ ನಡೆಯುವುದು. ಕಾಯಾ, ವಾಚಾ, ಮನಸಾ ಒಮ್ಮತವಾಗಿರುವುದೇ ಸತ್ಯ.

ಉದಾಹರಣೆಗೆ ಯಾವುದಾದರೊಂದು ನಡತೆ ಅಧರ್ಮವಾದದ್ದೆಂದು ನಮಗೆ ಗೊತ್ತಿದ್ದರೂ ಅದನ್ನು ಸಾಧುವೆಂದು ಹೇಳಿದರೆ ಆಗ ನಾವು ನಮ್ಮ ಮನಸ್ಸಿಗೇ ಮೋಸಮಾಡಿಕೊಂಡಂತೆ ಆಗುತ್ತದೆ. ಆಗ ನಾವು ಹುಸಿಯನ್ನಾಡುವ ಅಪ್ರಾಮಾಣಿಕರೆನಿಸಿಕೊಳ್ಳುತ್ತೇವೆ.

ಆಧ್ಯಾತ್ಮಿಕ ಕ್ಷೇತ್ರದಲ್ಲಿ 'ಸತ್ಯ' ಎನ್ನುವುದಕ್ಕೆ ಬುದ್ಧಿಗೆ ಸಂಬಂಧಪಟ್ಟಂತೆ ವಿಶೇಷ ಅರ್ಥವಿದೆ. ನಮ್ಮ ದಿನಚರಿಯ ವ್ಯವಹಾರದಲ್ಲಿ ನಾವು ಸಂಪರ್ಕಿಸುವ ವ್ಯಕ್ತಿಗಳು, ಸಂಘ ಸಂಸ್ಥೆಗಳು ನಮ್ಮ ಅನುಭವಕ್ಕೆ ಬರುವ ಘಟನಾವಳಿಗಳೂ – ಇವುಗಳ ವಿಚಾರದಲ್ಲಿ ಯೋಚಿಸಿ, ಮೌಲ್ಯಮಾಪನ ಮಾಡಿ ಒಂದು ನಿರ್ದಿಷ್ಟವಾದ ತೀರ್ಮಾನಕ್ಕೆ ಬಂದಿರುತ್ತೇವೆ. ಈ ತೀರ್ಮಾನಕ್ಕೆ ವಿರುದ್ಧವಾಗಿ ವರ್ತಿಸಿದರೆ ನಾವು ಅಸತ್ಯವಂತರೇ ಹೌದು. ಅದರಿಂದ ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ನಾವು

ಅಪ್ರಮಾಣಿಕರು. ಹಾಗೆಯೇ ಶಾಸ್ತ್ರಾಧ್ಯಯನ, ಧ್ಯಾನೋಪಾಸನೆಗಳಿಂದ ದೈವ ಸ್ವರೂಪವು ನಮಗೆ ಮನದಟ್ಟಾಗಿದ್ದರೂ ನಾವು ನಮ್ಮ ಪಶುಪ್ರವೃತ್ತಿಯನ್ನು ತ್ಯಜಿಸದಿದ್ದರೆ ಕಪಟಿ, ಮಿಥ್ಯಾಚಾರರೆನಿಸಿಕೊಳ್ಳುತ್ತೇವೆ. ಇದು ಸಾಧಕನ ವಿಚಾರದಲ್ಲಿ ಅಕ್ಷಮ್ಯ ಅಪರಾಧ.

ಮನಸ್ಸಿನ ಮತ್ತು ಇಂದ್ರಿಯಗಳ ಏಕಾಗ್ರತೆಯೇ ತಪಸ್ಸು. ದೇಹದಂಡನೆ, ಕಠಿಣ ವ್ರತಗಳು ದೇಹಮನಸ್ಸುಗಳನ್ನು ಹತೋಟಿಯಲ್ಲಿಡುವುದಕ್ಕೆ ಕೆಲವರಿಗೆ ಸಹಾಯಕವಾಗಿದ್ದರೂ ಅದು ನಿಜವಾದ ತಪಸ್ಸಲ್ಲ.

ಸತ್ಯ, ತಪಸ್ಸಾಧನೆ ಧ್ಯಾನಾದಿಗಳಿಂದ ಏಕಾಗ್ರತೆ, ದಾರ್ಢ್ಯಗಳನ್ನು ಪಡೆದ ಮನಸ್ಸು ಶ್ರುತಿಮಂತ್ರಗಳ ರಹಸ್ಯಾರ್ಥವನ್ನು ಭೇದಿಸಲು ಸಮರ್ಥವಾಗುತ್ತದೆ. ಗುರುವಿನ ಬೋಧೆಯಿಂದ ಪ್ರಾರಂಭವಾಗಿದ್ದ ಶಾಸ್ತ್ರಗ್ರಂಥಗಳ ಹೆಚ್ಚಿನ ಅಧ್ಯಯನ, ಚಿಂತನೆಗಳಿಂದ ಅವುಗಳ ಹೊಸಹೊಸ ಅರ್ಥ, ಗೂಢಾರ್ಥಗಳ ವೈವಿಧ್ಯ–ಇವೆಲ್ಲವೂ ಬುದ್ಧಿಗೆ ಸ್ಫುರಿಸುವುವು. ಅವನ ಜ್ಞಾನವು ಅದ್ಭುತವಾಗಿ ವಿಕಾಸವಾಗುವುದು.

ಸತ್ಯ, ಧ್ಯಾನ, ಅಧ್ಯಯನ ಇವುಗಳ ಪೂರ್ಣಪ್ರಯೋಜನ ಸಿದ್ಧಿಸಬೇಕಾದರೆ ಸಾಧಕನು ಬ್ರಹ್ಮಚರ್ಯ ವ್ರತವನ್ನು ಪಾಲಿಸಬೇಕು. ಬ್ರಹ್ಮಚರ್ಯವನ್ನು ಅತಿ ಕಟ್ಟುನಿಟ್ಟಾಗಿ, ಅದರ ಪೂರ್ಣ ಅರ್ಥವ್ಯಾಪ್ತಿಯಲ್ಲಿ ಅಕ್ಷರಶಃ ಪಾಲಿಸುವುದು ಸನ್ಯಾಸಿಗಳಿಗೆ ಮಾತ್ರ ಸಾಧ್ಯ. ಗೃಹಸ್ಥರೂ ಮತ್ತಿತರರೂ ತಮ್ಮ ಮನಸನ್ನು ಹತೋಟಿಯಲ್ಲಿಟ್ಟುಕೊಂಡು ಸಂಯಮದಿಂದ ಸಮಾಜದಲ್ಲಿ ತಮ್ಮ ತಮ್ಮ ಮಿತಿಯಲ್ಲಿದ್ದರೆ ಅದು ಬ್ರಹ್ಮಚರ್ಯವನ್ನು ಪಾಲಿಸಿದಂತೆಯೇ. ಧರ್ಮವಿರುದ್ಧವಲ್ಲದ ಕಾಮವನ್ನು ಶಾಸ್ತ್ರವೂ ಒಪ್ಪಿರುತ್ತದೆ. 'ಬ್ರಹ್ಮಚರ್ಯ' ಎಂಬ ಶಬ್ದವನ್ನು ಅಪಾರ್ಥ ಮಾಡಿಕೊಂಡು ದೈಹಿಕ ಅಥವಾ ಮಾನಸಿಕ ವಿಪರೀತ ಪರಿಣಾಮಕ್ಕೆ ಒಳಗಾಗಬಾರದು. ಅದಕ್ಕೆ ತಕ್ಕ ಸಿದ್ಧತೆ, ತರಬೇತಿ, ಸಾಧನೆಗಳು ಅಗತ್ಯ.

ಸತ್ಯ, ಧ್ಯಾನ, ಶಾಸ್ತ್ರಾಧ್ಯಯನ ಮತ್ತು ಬ್ರಹ್ಮಚರ್ಯಗಳ ಸಾಧನೆಯನ್ನು ಸತತವಾಗಿ ಮಾಡುತ್ತಲೇ ಇರಬೇಕು. ಅದು ಯಾವುದೋ ಒಂದು ತಾತ್ಕಾಲಿಕ ಹುಮ್ಮಸ್ಸಿನ ಅನುಷ್ಠಾನವಲ್ಲ. ಇವುಗಳ ನಿರಂತರ ಅಭ್ಯಾಸದಿಂದ ಕಾಲಕ್ರಮೇಣ ಸಾಧಕನು ಮನಸ್ಸಿನ ಸಮತ್ವವನ್ನು ಪಡೆದು ಅತ್ಯಂತ ತೀಕ್ಷ್ಣಮತಿವಂತನೂ ವಿವೇಕಿಯೂ ಆಗುತ್ತಾನೆ. ಈ ಸೂಕ್ಷ್ಮ ಮಾನಸಿಕ ಸ್ಥಿತಿಯನ್ನು ವೇದಾಂತದಲ್ಲಿ 'ಅಂತಃಕರಣ ಶುದ್ಧಿ' ಎನ್ನುತ್ತಾರೆ.

ಸದ್ಯದಲ್ಲಿ ನಮ್ಮ ಶಕ್ತಿಸಾಮರ್ಥ್ಯಗಳು ಬಲಗುಂದಿವೆ. ಮನಸ್ಸು ಸೂಕ್ಷ್ಮತೆಯನ್ನು ಕಳೆದುಕೊಂಡಿದೆ. ನಮ್ಮಲ್ಲಿ ಪಶುಪ್ರವೃತ್ತಿ ಎಷ್ಟರಮಟ್ಟಿಗೆ ನೆಲೆಸಿದೆಯೋ ಅಷ್ಟರಮಟ್ಟಿಗೆ ನಮ್ಮ ಮನಸ್ಸು ಬುದ್ಧಿಗಳು ಮಂದವಾಗಿವೆ. ಮೇಲೆ ವಿವರಿಸಿದ ಸತ್ಯ, ಧ್ಯಾನ, ಅಧ್ಯಯನ, ಬ್ರಹ್ಮಚರ್ಯ ಮುಂತಾದ ಸಾಧನೆಗಳಿಂದ ನಮ್ಮ ಜೀವನವನ್ನು ನಡೆಸತೊಡಗಿದರೆ ನಮ್ಮಲ್ಲಿ ಸತ್ತ್ವಶುದ್ಧಿ ಹೆಚ್ಚಾಗಿ ನಾವು ಕ್ಷೀಣದೋಷರಾಗುತ್ತೇವೆ. ಆಗ ನಮ್ಮ ಬುದ್ಧಿಯು ಅತ್ಯಂತ ಸೂಕ್ಷ್ಮವಾಗಿ ನಮ್ಮಲ್ಲೇ

ಇರುವ ಜ್ಞಾನಸ್ವರೂಪಿಯಾದ ಆತ್ಮನನ್ನು ಅರಿಯಲು ಸಾಧ್ಯವಾಗುತ್ತದೆ.

## ಸತ್ಯದ ಮಹಿಮೆ

**ಸತ್ಯಮೇವ ಜಯತೇ ನಾನೃತಂ**
**ಸತ್ಯೇನ ಪಂಥಾ ವಿತತೋ ದೇವಯಾನಃ ।**
**ಯೇನಾಕ್ರಮನ್ತ್ಯೃಷಯೋ ಹ್ಯಾಪ್ತಕಾಮಾಃ**
**ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥** ೬

**ಸತ್ಯಂ ಏವ** – ಸತ್ಯವೇ, **ಜಯತೇ** – ಗೆಲ್ಲುತ್ತದೆ, **ನ ಅನೃತಂ** – ಸುಳ್ಳಲ್ಲ, **ಆಪ್ತಕಾಮಾಃ** – ಆಸೆಗಳನ್ನು ತೊರೆದಿರುವ, **ಋಷಯಃ** – ಜ್ಞಾನಿಗಳು, **ತತ್** – ಆ, **ಸತ್ಯಸ್ಯ** – ಸತ್ಯದ, **ಪರಮಂ ನಿಧಾನಂ** – ಬ್ರಹ್ಮವು (ಇರುವಲ್ಲಿಗೆ), **ಯೇನ** – ಯಾವ ಮಾರ್ಗದಿಂದ, **ಆಕ್ರಮಂತಿ** – ಹೋಗುತ್ತಾರೋ (ಅಂತಹ), **ದೇವಯಾನಃ** – ದೇವಯಾನವೆಂಬ, **ಪಂಥಾಃ** – ದಾರಿಯು, **ಸತ್ಯೇನ** – ಸತ್ಯದಿಂದ, **ವಿತತಃ** – ಹರಡಿರುತ್ತದೆ.

(೬) ಸತ್ಯವೇ ಗೆಲ್ಲುತ್ತದೆ. ಸುಳ್ಳು ಗೆಲ್ಲುವುದಿಲ್ಲ. ಸತ್ಯದ ಪರಮ ನಿಧಾನವು (ಬ್ರಹ್ಮವು) ಇರುವಲ್ಲಿಗೆ ವಿಗತತೃಷ್ಣರಾದ (ಆಸೆಗಳನ್ನು ತೊರೆದಿರುವ) ಋಷಿಗಳು ಯಾವ ದಾರಿಯಿಂದ ಹೋಗುತ್ತಾರೋ ಅಂತಹ ದೇವಯಾನವೆಂಬ ಪಥವು ಸತ್ಯದಿಂದಲೇ ಹರಡಿಕೊಂಡಿರುತ್ತದೆ.

ಆಧ್ಯಾತ್ಮಿಕ ಜೀವನದಲ್ಲಿ ಸತ್ಯದ ಅವಶ್ಯಕತೆಯನ್ನೂ, ಸತ್ಯವಂತರಾಗಿ ಬಾಳುವ ಅಗತ್ಯವನ್ನೂ ಯಾರೂ ಅಲ್ಲಗಳೆಯಲಾರರು. ಅದರ ಪ್ರಾಧಾನ್ಯವನ್ನು ಒತ್ತಿಹೇಳುವ ಉದ್ದೇಶದಿಂದಲೇ ಶ್ರುತಿಯು ಅದರ ಹಿರಿಮೆಯನ್ನು ಎತ್ತಿಹಿಡಿಯುವ ಮತ್ತೊಂದು ಮಂತ್ರವನ್ನು ಘೋಷಿಸಿದೆ. "ಸತ್ಯಮೇವ ಜಯತೇ, ನಾನೃತಂ" ಎನ್ನುವ ಶ್ರುತಿಯ ವಾಕ್ಯಕ್ಕೆ ಶ್ರೀ ಶಂಕರರು ಸತ್ಯವಂತನೇ ಗೆಲ್ಲುವನು, ಸುಳ್ಳನ್ನು ಹೇಳುವವನಲ್ಲ, ಎಂದು ಸರಿಯಾಗಿ ವ್ಯಾಖ್ಯಾನಮಾಡಿದ್ದಾರೆ. ಎಷ್ಟೇ ಉದಾತ್ತ ಸದ್ಗುಣವಾಗಲಿ, ಅದನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ಆಚರಣೆಯಲ್ಲಿ ಅನುಸರಿಸಿದಾಗಲೇ ಅದು ನಮ್ಮನ್ನು ಹರಸಿ ರಕ್ಷಿಸುವ ಸಾಮರ್ಥ್ಯ ಪಡೆಯುವುದು. ಶಿಲ್ಪಿಯು ನಿರ್ಮಿಸುತ್ತಿರುವ ವಿಗ್ರಹಕ್ಕೆ ಅದ್ಭುತ ಸೌಂದರ್ಯವನ್ನು ಕೊಡುವುದು ಅವನ ಕೈಯಲ್ಲಿನ ಉಳಿಯಲ್ಲ. ನೋಟವನ್ನು ಸೆರೆಹಿಡಿಯುವ ರಮ್ಯ ಕಲಾಚಿತ್ರವನ್ನು ಸೃಷ್ಟಿಸುವುದು ಬಣ್ಣ ಬಳಿಯುವ ಕುಂಚವಲ್ಲ. ವಿಗ್ರಹವನ್ನು ಕಡೆಯುವುದಕ್ಕೆ ಉಳಿಯೂ, ಚಿತ್ರನಿರ್ಮಾಣಕ್ಕೆ ಕುಂಚವೂ ಅಗತ್ಯವೇನೋ ನಿಜ. ಆದರೆ ಅವು ಸಾಧನಗಳಷ್ಟೆ. ನಿಜವಾದ ರೂಪ ಲಾವಣ್ಯಗಳನ್ನು ಕೊಡುವುದು ಸೃಜಿಸುವವನ ಮನಸ್ಸಿನಲ್ಲಿ ಕಲ್ಪಿತವಾಗಿರುವ ಕಲಾಕೃತಿಯ ಭಾವನೆ. ಆ ಭಾವನೆಯಂತೆ ಅವನ ಕಲಾಸೃಷ್ಟಿ ಅಭಿವ್ಯಕ್ತವಾಗುತ್ತದೆ. ಕೇವಲ ಭಾವನೆ, ಸಂಕಲ್ಪಗಳೇ ಕಾರ್ಯರೂಪಕ್ಕೆ ಪರಿವರ್ತನೆಯಾಗಲು ಸಾಧ್ಯವಿಲ್ಲ. ಅವುಗಳನ್ನು ತನ್ನ ಮನಸ್ಸಿನಲ್ಲಿ ತುಂಬಿಕೊಂಡು, ಅವುಗಳಿಂದ ಸ್ಫೂರ್ತಿಗೊಂಡು ಅದರಂತೆ ಕೆಲಸಮಾಡುವ ವ್ಯಕ್ತಿಯು ಅವಶ್ಯಕ.

ಶ್ರುತಿಯು ಸತ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದೆ. ಏಕೆಂದರೆ ಪರಮಾರ್ಥ ಸತ್ಯವೇ ನಮ್ಮ ಗುರಿ. ಅದಕ್ಕೆ ಸಾಧನ ಮಾರ್ಗವೂ ಸತ್ಯವೇ. ಆ ಮಾರ್ಗವು ಸತ್ಯದಿಂದಲೇ ಹಬ್ಬಿಕೊಂಡಿದೆ. ಅಂದರೆ ಆ ಪಥವು ಸತ್ಯದಿಂದಲೇ ನಿರ್ಮಿತವಾಗಿದೆ. ಸತ್ಯವಂತನಾಗಿ ಸತ್ಯದ ದಾರಿಯಲ್ಲೇ ನಡೆಯುವ ಸನ್ಮಾರ್ಗಿಯು ಸುಗಮವಾಗಿ ತನ್ನ ಆಧ್ಯಾತ್ಮಗುರಿಯನ್ನು ತಲುಪುತ್ತಾನೆ.

ಸತ್ಯವಂತನ ಮಾರ್ಗವನ್ನು 'ದೇವಯಾನ ಮಾರ್ಗ' ಎಂದು ಶ್ರುತಿಯಲ್ಲಿ ಹೇಳಿದೆ. ದೇವಯಾನ ಮಾರ್ಗವು ಸತ್ಯವನ್ನವಲಂಬಿಸಿರುವವನ ಮಾರ್ಗ.

**ಆಪ್ತಕಾಮಃ –**

ಯಾರು ತಮ್ಮ ಕಾಮನೆಗಳೆಲ್ಲವನ್ನೂ ಸಂಪೂರ್ಣವಾಗಿ ಈಡೇರಿಸಿಕೊಂಡಿರುವರೋ ಅವರು ಆಪ್ತಕಾಮರು, ಅಂದರೆ ಪೂರ್ಣತೃಪ್ತರು. ಒಂದಲ್ಲ ಒಂದು ರೀತಿಯಿಂದ ಪ್ರತಿಗಳಿಗೆಯಲ್ಲೂ ನಮ್ಮನ್ನು ಚಿತ್ರಹಿಂಸೆಗೆ ಒಳಗು ಮಾಡುತ್ತಿರುವ ಕಾಮನೆಗಳ ಕಾಟದಿಂದ ತಪ್ಪಿಸಿಕೊಂಡಿದ್ದೇ ಆದರೆ ಅದು ಎಷ್ಟು ಆನಂದದಾಯಕವಾಗಿರುವುದು ! ಆಸೆಗಳು ಬುಗ್ಗೆಯಂತೆ ಉದ್ಭವಿಸುವುವು. ನಮ್ಮ ವಾಸನೆಗಳಿಂದ ಅವಿದ್ಯೆಯ ಫಲವಾಗಿ, ನೂರಾರು ಆಸೆಗಳು ಮುನ್ನುಗ್ಗಿ ನಮ್ಮ ಚಿಂತನಾಲಹರಿಯಲ್ಲಿ ಸುತ್ತಿಸುಳಿದು ನಮ್ಮನ್ನು ಕರ್ಮದಲ್ಲಿ ಪ್ರವೃತ್ತರಾಗುವಂತೆ ಮಾಡುತ್ತವೆ. ಅದರಿಂದ ದುಃಖ, ಸಂಕಟ, ತಳಮಳ. ನಾವು ನಮಗಾಗಲಿ, ಇತರರಿಗಾಗಲಿ, ಬಾಹ್ಯವಾಗಿಯಾಗಲಿ, ಅಂತರಂಗವಾಗಿಯಾಗಲಿ ಹಿಂಸೆ ಕೊಡದಿರುವುದು ಅತ್ಯಂತ ಅಪೇಕ್ಷಣೀಯ ಸ್ಥಿತಿ. ಈ ಸ್ಥಿತಿಯನ್ನು ನಾವು ತಲುಪಬೇಕಾದರೆ ನಮ್ಮ ವಾಸನೆಗಳನ್ನೂ, ಅವಿದ್ಯೆಯನ್ನೂ ನಾಶಪಡಿಸಬೇಕು.

ಆತ್ಮಸಾಕ್ಷಾತ್ಕಾರವಾದ ಮೇಲೆ ಅವಿದ್ಯೆಯು ನಾಶವಾಗುವುದು. ಅವಿದ್ಯೆಯು ಕೊನೆಗೊಂಡರೆ ನಮ್ಮ ವಾಸನೆಗಳೂ, ಕಾಮನೆಗಳೂ ಅಳಿಯುವುವು. ಆಗ ಜ್ಞಾನಿಯು ಸಮಾಧಾನಚಿತ್ತನಾಗಿ, ಆತ್ಮತೃಪ್ತನಾಗಿ ಒಳಗೂ ಹೊರಗೂ ಪರಮ ಶಾಂತಿಯಿಂದ ಕೂಡಿರುತ್ತಾನೆ. ಆಗ ಅವನು ಆಪ್ತಕಾಮ.

ಮೋಸ, ವಂಚನೆ, ಡಂಭ, ರಕ್ಕು, ಅಹಂಕಾರ, ಸುಳ್ಳು, ತಟವಟ, ಕಪಟ, ಅಸೂಯೆ, ದುರಾಸೆ, ದ್ವೇಷ ಮುಂತಾದವುಗಳಿಂದ ಮುಕ್ತರಾದ ಸಾಧಕರು ಖಂಡಿತವಾಗಿ ಸತ್ಯಸಾಮ್ರಾಜ್ಯವನ್ನು ಸೇರುತ್ತಾರೆ. ಆ ಸಾಮ್ರಾಜ್ಯವು ಯಾವುದು, ಅದು ಹೇಗಿರುತ್ತದೆ ಎಂಬುದನ್ನು ಮುಂದಿನ ಮಂತ್ರದಲ್ಲಿ ತಿಳಿಸಿದೆ.

## ಬ್ರಹ್ಮಸ್ವರೂಪ

**ಬೃಹಚ್ಚ ತದ್ದಿವ್ಯಮಚಿಂತ್ಯರೂಪಂ**
**ಸೂಕ್ಷ್ಮಾಚ್ಚ ತತ್ ಸೂಕ್ಷ್ಮತರಂ ವಿಭಾತಿ ।**
**ದೂರಾತ್ ಸುದೂರೇ ತದಿಹಾಂತಿಕೇ ಚ**
**ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಮ್ ॥** ೭

**ತತ್** – ಆ ಬ್ರಹ್ಮವು, **ಬೃಹಚ್ಚ** – ಬಹಳ ದೊಡ್ಡದಾಗಿರುವುದು, **ದಿವ್ಯಂ** – ಸ್ವಯಂ ಪ್ರಕಾಶವುಳ್ಳದ್ದು, **ಅಚಿಂತ್ಯರೂಪಂ** – ಊಹಿಸಲಶಕ್ಯವಾದ ರೂಪವುಳ್ಳದ್ದು, **ಚ** – ಮತ್ತು, **ತತ್** – ಅದು, **ಸೂಕ್ಷ್ಮಾತ್** – ಸೂಕ್ಷ್ಮವಾದದ್ದಕ್ಕಿಂತಲೂ, **ಸೂಕ್ಷ್ಮತರಂ** – ಹೆಚ್ಚು ಸೂಕ್ಷ್ಮವಾಗಿ, **ವಿಭಾತಿ** – ಪ್ರಕಾಶಿಸುತ್ತಿರುವುದು, **ತತ್** – ಅದು, **ದೂರಾತ್** – ದೂರವಾದದ್ದಕ್ಕಿಂತಲೂ, **ಸುದೂರೇ** – ಅತ್ಯಂತ ದೂರದಲ್ಲಿಯೂ, **ಇಹ ಅಂತಿಕೇಚ** – ಇಲ್ಲಿಯೇ ಸಮೀಪದಲ್ಲಿಯೂ (ಇರುವುದು), **ಇಹ** – ಇಲ್ಲಿ, **ಪಶ್ಯತ್ಸು** – ನೋಡುವವರಿಗೆ, **ಗುಹಾಯಾಂ ಏವ** – ಹೃದಯ ಗುಹೆಯಲ್ಲಿಯೇ, **ನಿಹಿತಂ** – ಇಡಲ್ಪಟ್ಟಿರುವುದು.

(೭) ಬ್ರಹ್ಮವು ಅತಿ ದೊಡ್ಡದಾಗಿಯೂ, ಸ್ವಯಂ ಪ್ರಕಾಶವುಳ್ಳದ್ದಾಗಿಯೂ, ಊಹಿಸಲಸಾಧ್ಯವಾದ ರೂಪವುಳ್ಳದ್ದಾಗಿಯೂ ಇದೆ. ಅದು ಸೂಕ್ಷ್ಮವಾದದ್ದಕ್ಕಿಂತಲೂ (ಅಂದರೆ ಆಕಾಶ ಮುಂತಾದವುಗಳಿಗಿಂತಲೂ) ಅತಿ ಸೂಕ್ಷ್ಮವಾಗಿ ಪ್ರಕಾಶಿಸುತ್ತಿರುವುದು. ಅದು ಅತ್ಯಂತ ದೂರವಾಗಿರುವುದಕ್ಕಿಂತಲೂ ಅತಿ ದೂರದಲ್ಲಿಯೂ, ಇಲ್ಲಿಯೇ ಸಮೀಪದಲ್ಲಿಯೂ ಇರುವುದು ಅದು ಇಲ್ಲಿ ನೋಡುವವರಿಗೆ ಹೃದಯಗುಹೆಯದಲ್ಲಿಯೇ ಇಡಲ್ಪಟ್ಟಂತಿರುವುದು

ಬ್ರಹ್ಮವು ಅತ್ಯಂತ ದೊಡ್ಡದಾದದ್ದು. ಏಕೆಂದರೆ ಅದು ಸರ್ವವ್ಯಾಪಿ. ಬೃಹತ್ ಆದದ್ದು ಬ್ರಹ್ಮ ಬೃಹತ್ ಎಂದರೆ ಅತಿ ದೊಡ್ಡದಾಗಿರುವುದು. ಸರ್ವವ್ಯಾಪಿಯಾಗಿರುವುದು ಎಲ್ಲವನ್ನೂ ಆವರಿಸಿರುತ್ತದೆ. ಅದನ್ನು ಅವನ್ನು ಆವರಿಸುವುದು ಯಾವುದೂ ಇಲ್ಲ.

ಇಲ್ಲಿ ಬಂದಿರುವ ಅನೇಕ ಶಬ್ದಗಳನ್ನು ಹಿಂದಾಗಲೇ ವಿವರಿಸಿದೆ.

## ದಿವ್ಯಮಚಿಂತ್ಯರೂಪಂ –

'ದಿವ್ಯಮ್' ಎಂದರೆ ಸ್ವಪ್ರಕಾಶವುಳ್ಳದ್ದು. 'ಅಚಿಂತ್ಯರೂಪಂ' ಎಂದರೆ ಚಿಂತಿಸಲು ಅಥವಾ ಯೋಚಿಸಲು ಅಸಾಧ್ಯವಾದ ರೂಪವುಳ್ಳದ್ದು, ತಿಳಿವಿಗೆ ಮೀರಿದ್ದು. ಆತ್ಮ ಚೈತನ್ಯವು ನಮ್ಮ ಇಂದ್ರಿಯಗಳನ್ನೂ ಮನಸ್ಸು ಬುದ್ಧಿಗಳನ್ನೂ ಪ್ರಕಾಶಿಸುವ ತತ್ತ್ವ. ಹೊರಗಿನಿಂದ ಬೆಳಕನ್ನು ಕೊಡುವ ಸೂರ್ಯ, ಚಂದ್ರ ತಾರಕೆಗಳನ್ನೂ ಅಗ್ನಿಯನ್ನೂ ಬೆಳಗುವ ವಸ್ತು ಅದು. ಬ್ರಹ್ಮದ ಸ್ವರೂಪವೇ ಒಂದು ಜ್ಯೋತಿ ರಾಶಿ. ಇಲ್ಲಿ ಜ್ಯೋತಿ ಎಂದರೆ ನಾವು ಸಾಮಾನ್ಯವಾಗಿ ತಿಳಿದಿರುವ ಪ್ರಕಾಶ ಮಾತ್ರವಲ್ಲ. ಅದು ನಮಗೆ ಅರಿವನ್ನುಂಟುಮಾಡುವ ವಸ್ತು. ಶ್ರೀ ರಾಮಕೃಷ್ಣಪರಮಹಂಸರು ಹೇಳಿರುವಂತೆ ಅದು ಭೌತಿಕ ಲಕ್ಷಣಗಳೂ, ಸಾಮಾನ್ಯವಾಗಿ ತಿಳಿದಿರುವ ಗುಣಗಳೂ ಇಲ್ಲದ ಪ್ರಕಾಶ. ಅದೇ ಅರಿವು, ತಿಳಿವಿನ ಮೂಲ. ನಮ್ಮ ಬುದ್ಧಿಗೂ ತಿಳಿಯುವ ಶಕ್ತಿಕೊಡುವ ಮೂಲ ಅರಿವೇ ಅದು ಆಗಿರುವುದರಿಂದ ಬುದ್ಧಿಯು ಅದನ್ನು ಪ್ರತ್ಯಕ್ಷವಾಗಿ ತಿಳಿಯುವುದು ಸಾಧ್ಯವಿಲ್ಲ. ಅದನ್ನು ಹಿಂದಾಗಲೇ ಚರ್ಚಿಸಿದೆ.

**ದೂರಾತ್ ಸುದೂರೇ ತದಿಹಾಂತಿಕೇ–**

ಅನಿರ್ವಾಚ್ಯನಾದ ಮತ್ತು ಸರ್ವವ್ಯಾಪಿಯಾದ ಪರಮಾತ್ಮನನ್ನು ನಿರ್ದೇಶಿಸುವಾಗ ಶ್ರುತಿಯು ಬಳಸುವ ವಿಶಿಷ್ಟಕ್ರಮಕ್ಕೆ ಇದೊಂದು ಉತ್ತಮ ಉದಾಹರಣೆ. ಶ್ರುತಿಯ ಬೋಧನಾ ಕ್ರಮವನ್ನು ತಿಳಿಯದವರಿಗೆ ಇದು ವಿರೋಧಾಭಾಸಗಳಂತಿರುವ ಮಾತುಗಳಿಂದ ಮಂಕುಬಡಿಸಿ ಗೊಂದಲದಲ್ಲಿ ಸಿಗಿಸುತ್ತದೆ. ಈ ಮಂತ್ರದಲ್ಲಿ ಬ್ರಹ್ಮವನ್ನು ಕುರಿತು ಹೇಳುವಾಗ "ಅದು ಅತ್ಯಂತ ದೂರವಾಗಿರುವುದಕ್ಕಿಂತ ದೂರವಾಗಿದೆ ಮತ್ತು ಇಲ್ಲಿಯೋ ಅತಿಸಮೀಪದಲ್ಲಿಯೇ ಇದೆ", ಎಂದು ಹೇಳುತ್ತದೆ. ಒಂದೇ ವಸ್ತುವು ಏಕಕಾಲದಲ್ಲಿ ಅತ್ಯಂತ ದೂರದಲ್ಲಿಯೂ, ಅತಿ ಸಮೀಪದಲ್ಲೂ ಇರಲು ಹೇಗೆ ಸಾಧ್ಯ ?

ಆದರೂ ಅದು ಬ್ರಹ್ಮದ ವಿಚಾರದಲ್ಲಿ ನಿಜ. ಸರ್ವವ್ಯಾಪಿಯಾದ ವಸ್ತು ಅತ್ಯಂತ ದೂರದಲ್ಲಿಯೂ ಇರಬಲ್ಲದು, ಅತ್ಯಂತ ಹತ್ತಿರದಲ್ಲೂ ಏಕಕಾಲದಲ್ಲೇ ಇರಬಹುದು. ಅದು ಕಾಲ, ದೇಶ, ಕಲ್ಪನೆಗಳಿಗೆ ಅತೀತವಾದದ್ದು. ಹಾಗಿಲ್ಲದಿದ್ದರೆ ಅದು ಸರ್ವವ್ಯಾಪಿ ಎನಿಸಿಕೊಳ್ಳಲಾರದು. ಶುದ್ಧಜ್ಞಾನವು ನಮ್ಮ ಹೃದಯದ ಮಧ್ಯದಲ್ಲೇ ಇರುತ್ತದೆ. ಅಲ್ಲದೆ ಹೊರಗೆ ಅತ್ಯಂತ ದೂರವಾಗಿರುವ ವಸ್ತುವನ್ನು ಅರಿಯುವಾಗ ಅದು ಅಲ್ಲಿಯೂ ಇರುವುದು. ನೋಡುವುದಾಗಲಿ, ಕೇಳುವುದಾಗಲಿ, ಭಾವಿಸುವುದಾಗಲಿ ಎಲ್ಲವೂ ಆ ಜ್ಞಾನದ ಪರಿವೇಷದಲ್ಲಿಯೇ ಇರಬೇಕಲ್ಲವೇ ? ಆದ್ದರಿಂದ ಅದು ಅತ್ಯಂತ ದೂರದಲ್ಲಿ ಇರಬಲ್ಲದು. ಅದೇ ಸಮಯದಲ್ಲಿ ಅತ್ಯಂತ ಹತ್ತಿರವಾಗಿಯೂ ನಮ್ಮೊಳಗೇ ಇರಬಲ್ಲದು.

ಈ ರೀತಿಯ ಅಚಿಂತ್ಯವೂ, ಸರ್ವಗತವೂ ಆಗಿರುವ ಬ್ರಹ್ಮವನ್ನು ಹೇಗೆ, ಎಲ್ಲಿ, ತಿಳಿಯಬಹುದು ಎಂಬ ಪ್ರಶ್ನೆ ಸಾಧಕನಲ್ಲಿ ಉದ್ಭವಿಸುವುದು ಸಹಜ. ಪರಮ ಜ್ಞಾನಿಗಳಾದ ನಮ್ಮ ಋಷಿವರ್ಯರು ಅದನ್ನು ಯೋಚಿಸಿ ಹೇಳಿದ್ದಾರೆ. ಇಲ್ಲಿಯೇ ನಮ್ಮ ಹೃದಯ ಕುಹರದಲ್ಲೇ ಅದನ್ನು ಅರಿಯಬಹುದು, ಎಂದು ಶ್ರುತಿಯು ತಿಳಿಸುತ್ತದೆ. ಅದನ್ನು ಅರಿಯುವ ತಂತ್ರವನ್ನು ಹಿಂದೆಯೇ ಚರ್ಚಿಸಿದೆ. ಆದರೂ ಅದನ್ನು ಪುನಃ ಮುಂದಿನ ಮಂತ್ರದಲ್ಲಿ ವಿಶದಪಡಿಸಿದೆ.

## ಆತ್ಮನನ್ನು ಅರಿಯುವ ವಿಶೇಷ ಸಾಧನಗಳು

**ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ**
**ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।**
**ಜ್ಞಾನಪ್ರಸಾದೇನ ವಿಶುದ್ಧಸತ್ತ್ವ–**
**ಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥** ೮

(ಬ್ರಹ್ಮನು), **ಚಕ್ಷುಷಾ** – ಕಣ್ಣಿನಿಂದ, **ನ ಗೃಹ್ಯತೇ** – ಗ್ರಹಿಸಲ್ಪಡುವುದಿಲ್ಲ, **ವಾಚಾ ಅಪಿ** – ಮಾತಿನಿಂದಲೂ, **ನ** – ಗ್ರಹಿಸಲ್ಪಡುವುದಿಲ್ಲ, **ಅನ್ಯೈಃ ದೇವೈಃ** – ಇತರ

ಇಂದ್ರಿಯಗಳಿಂದಲೂ, **ತಪಸಾ ಕರ್ಮಣಾ ವಾ** – ಅಥವಾ ತಪಸ್ಸು ಕರ್ಮಗಳಿಂದಲೂ **ನ** – ಗ್ರಹಿಸಲ್ಪಡುವುದಿಲ್ಲ, **ತು** – ಆದರೆ, **ಜ್ಞಾನಪ್ರಸಾದೇನ** – ಜ್ಞಾನಪ್ರಸಾದದಿಂದ **ವಿಶುದ್ಧಸತ್ತ್ವಃ** – ಶುದ್ಧವಾದ ಅಂತಃಕರಣವುಳ್ಳವನಾಗಿ, **ಧ್ಯಾಯಮಾನಃ** – ಧ್ಯಾನಮಾಡುವವನು, **ತತಃ** – ಅದರಿಂದ, **ನಿಷ್ಕಲಂ** – ನಿರವಯವಿಯಾದ, **ತಂ** – ಆತನನ್ನು, **ಪಶ್ಯತೇ** – ನೋಡುತ್ತಾನೆ.

**(ಅ) ಆತ್ಮನನ್ನು ಕಣ್ಣಿನಿಂದಾಗಲಿ, ಮಾತಿನಿಂದಾಗಲಿ, ಇತರ ಇಂದ್ರಿಯಗಳಿಂದಾಗಲಿ ಗ್ರಹಿಸಲಾಗುವುದಿಲ್ಲ ಅಥವಾ ತಪಸ್ಸು ಕರ್ಮಗಳಿಂದಲೂ ಗ್ರಹಿಸಲಾಗುವುದಿಲ್ಲ. ಆದರೆ ಜ್ಞಾನದ ಅನುಗ್ರಹದಿಂದ ಪರಿಶುದ್ಧವಾದ ಅಂತಃಕರಣವುಳ್ಳವನಾಗಿ ಧ್ಯಾನಮಾಡುವವನು ಮಾತ್ರ ಯಾವ ಅವಯವ ವಿಶೇಷವೂ ಇಲ್ಲದ ಆತ್ಮನನ್ನು ಕಂಡುಕೊಳ್ಳುತ್ತಾನೆ.**

ಮಾತುಗಳು ಮನಸ್ಸಿನ ಭಾವಗಳನ್ನೂ, ಅನುಭವಗಳನ್ನೂ ಅಭಿವ್ಯಕ್ತಪಡಿಸುವುದಕ್ಕೆ ಮಾನವನು ನಿರ್ಮಿಸಿಕೊಂಡಿರುವ ಸಂಕೇತಗಳು. ಆದರೆ ಅತೀಂದ್ರಿಯ ಅನುಭವಗಳನ್ನೂ, ತೀವ್ರ ಭಾವೋದ್ರೇಕಗಳನ್ನೂ, ಮನಸ್ಸಿನ ಪೂರ್ಣಗ್ರಹಿಕೆಗೂ ಮೀರಿದ ಆನಂದಾನುಭವಗಳನ್ನು ಸ್ಪಷ್ಟವಾಗಿ ಪ್ರಕಟಪಡಿಸುವುದಕ್ಕೆ ಮಾತುಗಳು ಅಸಮರ್ಥವಾಗುವುವು. ಕೆಲವು ಸಂಕೀರ್ಣ ಚಿಂತನೆಗಳನ್ನು, ಕೇವಲ ಆತ್ಮೀಯವಾದ ಅನುಭಾವಗಳನ್ನು ಕೂಡ ಮಾತುಗಳು ವರ್ಣಿಸಲಾರವೆಂದಮೇಲೆ ಸಮಾಧಿಯ ಗಾಢ, ನಿಗೂಢ ಆತ್ಮಾನುಭಾವದ ವಿಷಯಗಳನ್ನು ವಿಶದಪಡಿಸುವುದು ಅವಕ್ಕೆ ಹೇಗೆ ಸಾಧ್ಯ ? ಗಾಢ ಪ್ರೇಮಿಗಳೂ ಕೂಡ ತಮ್ಮ ಮನಸ್ಸಿನ ಉತ್ಕಟ ಸಂವೇದನೆಗಳನ್ನು ಹಾವಭಾವಗಳಿಂದ, ಮುಖಮುದ್ರೆಗಳಿಂದ ಅಥವಾ ಕಾರ್ಯಮುಖೇನ ಬಹಿರಂಗಪಡಿಸಬಲ್ಲರೇ ಹೊರತು ಮಾತುಗಳಿಂದಲ್ಲ. ಕೆಲವು ವೇಳೆ ಕೇವಲ ಮೌನವೇ ಮಾತಿಗಿಂತ ಹೆಚ್ಚು ಭಾವಗಳನ್ನು ಪ್ರಕಟಪಡಿಸಬಲ್ಲದು. ನಿಜವಾಗಿಯೂ ಭಾವೋದ್ರೇಕವಾದಾಗ ಮಾತೇ ಮರೆತುಹೋಗಬಹುದು. ಅದರಿಂದಲೇ ಶ್ರುತಿಯು 'ಮಾತಿನಿಂದ ಆತ್ಮನನ್ನು ಗ್ರಹಿಸುವುದಕ್ಕಾಗುವುದಿಲ್ಲ' ಎಂದು ಹೇಳಿರುವುದು.

ಇಂದ್ರಿಯಗಳು ಆತ್ಮವನ್ನು ಗ್ರಹಿಸಲಾರವು ಎಂದು ಹಿಂದೆಯೇ ಹೇಳಿದೆ. ಅಷ್ಟೇ ಅಲ್ಲ. ಕರ್ಮಗಳಿಂದಲೂ, ತಪಸ್ಸಿನಿಂದಲೂ ಆತ್ಮವು ಗೋಚರಿಸದು ಎಂದೂ ಶ್ರುತಿಯು ಈ ಮಂತ್ರದಲ್ಲಿ ತಿಳಿಸುತ್ತದೆ. ಶ್ರದ್ಧಾವಂತರಾದ ಕರ್ಮಠರಲ್ಲಿ ವೈದಿಕ ಕರ್ಮಗಳಿಂದಲೇ ಆತ್ಮದರ್ಶನವಾಗುವುದೆಂಬ ನಂಬಿಕೆ ಇದೆ. ಇದು ತಪ್ಪು ಭಾವನೆ. ನಶ್ವರವಾದ ವಸ್ತುಗಳಿಂದ ನಶ್ವರವಾದ ಕಾರ್ಯಗಳನ್ನು ಮಾಡಿದಾಗ ಅವು ನಶ್ವರವಾದ ಫಲಗಳನ್ನು ಕೊಡಬಲ್ಲವೇ ವಿನಹ ಶಾಶ್ವತಫಲಗಳನ್ನಲ್ಲ. ನಶ್ವರದಿಂದ ಶಾಶ್ವತವನ್ನು ಗಳಿಸುವುದು ಅಸಾಧ್ಯ. ಒಂದು ಮಣ್ಣಿನ ಮುದ್ದೆಯಿಂದ ಚಿನ್ನದ ಸರವನ್ನು ಮಾಡುವುದು ಸಾಧ್ಯವೆ ? ಕಾರಣವಿದ್ದಂತೆ ಕಾರ್ಯ, ಅಲ್ಲವೇ ?

ಆದರೆ ಜಗತ್ತಿನ ಎಲ್ಲಾ ಶಾಸ್ತ್ರಗ್ರಂಥಗಳೂ ತಪಶ್ಚರ್ಯೆ ಮತ್ತು ಕರ್ಮಾಚರಣೆಗಳ ಮಹಾತ್ಮೆಯನ್ನು ಅತಿಶಯವಾಗಿ ಶ್ಲಾಘಿಸಿವೆ. ಹಾಗಾದರೆ

ಅವುಗಳಲ್ಲಿ ಹೇಳಿರುವುದು ಸುಳ್ಳೇ, ತಪ್ಪೇ, ಅಥವಾ ಮೋಸವೇ? ಅವುಗಳ ಅನುಸರಣೆ ವ್ಯರ್ಥವೇ? ಹಾಗಲ್ಲ, ಸಾಧಕನಿಗೆ ಪ್ರಾರಂಭದಲ್ಲಿ ಕರ್ಮಾಚರಣೆಗಳು ಆಧ್ಯಾತ್ಮಿಕ ಪ್ರಗತಿಯ ಹಾದಿಯಲ್ಲಿ ಪ್ರಥಮ ಹಂತಗಳು. ತಪಶ್ಚರ್ಯೆಯು ಮನಸ್ಸು ಬುದ್ಧಿಗಳ ಸಂಸ್ಕಾರಕ್ಕೆ ಅಗತ್ಯ. ಅವುಗಳಿಂದ ಮನಸ್ಸು ಸಂಯಮಪಡೆದು, ದೋಷಗಳನ್ನು ಕಳೆದುಕೊಂಡು ಶುದ್ಧವಾಗುವುದು. ಸಾಕಾದಷ್ಟು ದೀರ್ಘಕಾಲ ಪೂಜೆಪುರಸ್ಕಾರ, ಧ್ಯಾನತಪಸ್ಸುಗಳ ಅಭ್ಯಾಸದಿಂದ ಸಾಧಕನು ತನ್ನ ವ್ಯಕ್ತಿತ್ವದ ಸಮಗ್ರತೆ ಮತ್ತು ಸುವ್ಯವಸ್ಥಿತ ವಿಕಾಸತೆಯನ್ನು ಪಡೆಯುತ್ತಾನೆ. ತನ್ನ ಅಂತ ಶ್ಶಕ್ತಿಯನ್ನು ಕೇಂದ್ರೀಕರಿಸಿಕೊಂಡು ಅತ್ಯಂತ ಸಮರ್ಥನಾಗುತ್ತಾನೆ. ಶಾಂತಿ ಸಮಾಧಾನಗಳಿಂದ ತನ್ನ ಮನಸ್ಸಿನ ಏಕಾಗ್ರತೆ, ಬುದ್ಧಿಯ ಸೂಕ್ಷ್ಮತೆಗಳನ್ನು ವೃದ್ಧಿಸಿಕೊಳ್ಳುತ್ತಾನೆ. ಅಂತರ್ಮುಖಿಯಾಗಿ ಮನನದಿಂದ ವಿವೇಕ ಪಡೆಯುತ್ತಾನೆ. ವಿರಾಗಿಯಾಗಿ ಹೊರಜಗತ್ತಿನಲ್ಲಿ ಔದಾಸೀನ್ಯವನ್ನು ಸಾಧಿಸಿಕೊಂಡು ಅಂತರ್ಯದಲ್ಲಿ ಆತ್ಮತೃಪ್ತಿಯಿಂದಿರುತ್ತಾನೆ. ಇವು ಮುಂದಿನ ಹಂತಗಳನ್ನೇರಲು ಪೂರ್ವಸಿದ್ಧತೆಗಳು. ಆದರೆ ಅವುಗಳನ್ನೇ ಅಂತಿಮ ಗುರಿಯೆಂದು ಭಾವಿಸಿ ತನ್ನ ಮುಂದಿನ ಸಾಧನೆಯನ್ನು ನಿಲ್ಲಿಸಿದರೆ ಅದು ಮಹಾಪರಾಧ, ದುರಂತ. ಅಂತಹ ಪ್ರಮಾದ ಸಂಭವಿಸಬಾರದೆಂದೇ ಶ್ರುತಿಯು ವಾತ್ಸಲ್ಯದಿಂದ ನಮಗೆ ಎಚ್ಚರಿಕೆ ಕೊಡುತ್ತಿದೆ.

ಧ್ಯಾನವು ಸಾಧನ, ಆತ್ಮಸಾಕ್ಷಾತ್ಕಾರವು ಸಾಧ್ಯ. ಆದರೆ ಧ್ಯಾನ ಮತ್ತು ಆತ್ಮಸಾಕ್ಷಾತ್ಕಾರಗಳ ನಡುವೆ ಕಾರ್ಯಕಾರಣ ಸಂಬಂಧವಿಲ್ಲ. ಧ್ಯಾನವು ಆತ್ಮದ ಮೇಲೆ ಕವಿದಿರುವ ಮುಸುಕನ್ನು ತೆಗೆದುಹಾಕುತ್ತದೆ. ಆಗ ಆತ್ಮವು ತನ್ನ ಪ್ರಕಾಶದಿಂದಲೇ ತಾನಾಗಿ ತೋರಿಕೊಳ್ಳುತ್ತದೆ. ಗಾಳಿ ಜೋರಾಗಿ ಬೀಸಿ ಮೋಡಗಳನ್ನು ಚದುರಿಸುತ್ತದೆ. ಮೋಡಗಳ ಹಿಂದಿದ್ದ ಸೂರ್ಯನು ಸ್ವಪ್ರಕಾಶದಿಂದ ಬೆಳಗುತ್ತಾನೆ. ಗಾಳಿಯು ಬೀಸಿ ಮೋಡಗಳನ್ನು ಚದುರಿಸುವಂತೆ ಧ್ಯಾನವು ಆತ್ಮದರ್ಶನಕ್ಕೆ ಅಡ್ಡಿಯಾಗಿರುವ ಪರದೆಯನ್ನು ಹರಿದುಹಾಕುತ್ತದೆ. ಆತ್ಮದರ್ಶನಕ್ಕೆ ಅಡ್ಡಿಯಾಗಿರುವ ಪರದೆಯೇ ಅವಿದ್ಯೆ. ನಮ್ಮ ಸಹಜ ಸ್ವಭಾವವೇ ವಿದ್ಯೆ, ಆದ್ದರಿಂದ ಧ್ಯಾನವು ಅವಿದ್ಯೆಯನ್ನು ಹೋಗಲಾಡಿಸುವುದಕ್ಕೆ ಕಾರಣವೇ ಹೊರತು ಆತ್ಮಸಾಕ್ಷಾತ್ಕಾರಕ್ಕೆ ನೇರವಾದ ಕಾರಣವಲ್ಲ. ಆತ್ಮವು ಸ್ವಯಂಜ್ಯೋತಿಯಾದ್ದರಿಂದ ಅದು ಬೇರಾವ ಸಾಧನದ ಅಗತ್ಯವೂ ಇಲ್ಲದೆ ತಾನಾಗಿ ತೋರಿಕೊಳ್ಳುವುದು.

ಸಾಧನೆಯ ಮೂಲಕ ಮನಸ್ಸು ಬುದ್ಧಿಗಳು ಶುದ್ಧವಾಗಿ, ಶಾಂತವೂ, ಸೂಕ್ಷ್ಮವೂ ಆದಾಗ ಧ್ಯಾನಮಾಡುವಾತನು ಪರಮಪವಿತ್ರವಾದ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ, ಎಂದು ಶ್ರುತಿಯು ಹೇಳುತ್ತದೆ. ಈ ಸಾಧನೆಯಲ್ಲಿ ಮನಸ್ಸಿನ ಪರಿಶುದ್ಧತೆಯು ಬಹಳ ಪ್ರಾಮುಖ್ಯವಾದ ಅಂಶ. ಅದೇ 'ವಿಶುದ್ಧ ಸತ್ತ್ವ' ಎಂದು ಮಂತ್ರದಲ್ಲಿ ಹೇಳಿರುವುದರ ಇಂಗಿತ. ಕಾಲ, ದೇಶ, ವರ್ತಮಾನ ಹಾಗೂ ಕಾರ್ಯಕಾರಣ – ಇತ್ಯಾದಿ ಸಂಕೀರ್ಣ ಪರಿಸ್ಥಿತಿಗಳ ಮೂಲಕ ಅತ್ಯಂತ ಕೆಳದರ್ಜೆಯಿಂದ ಜೀವವು ಹಾದು ಬರುವಾಗ ಅನೇಕ ವಾಸನಾದಿ ದೋಷಗಳನ್ನು

ಅಂಟಿಸಿಕೊಂಡು ಬಂದಿರುತ್ತದೆ. ಜಡವಸ್ತುಗಳಿಂದ ಹಿಡಿದು ಜೀವನದ ಪ್ರಾರಂಭದಿಶೆಯಲ್ಲಿರುವ ಸಸ್ಯಗಳು, ಪ್ರಜ್ಞೆ ಇರುವ ಪ್ರಾಣಿಗಳು, ಕೊನೆಗೆ ವಿಚಾರವಂತ ಮಾನವನವರೆಗೆ ವಿವಿಧ ಜನ್ಮಾಂತರಗಳಲ್ಲಿ ಹಾದು ಬಂದಾಗ ಎಷ್ಟೋ ಪಾಶವೀ ಗುಣಗಳ, ಸಹಜ ಪ್ರವೃತ್ತಿಗಳ ಪದರಗಳನ್ನು ನಮ್ಮ ವ್ಯಕ್ತಿತ್ವಕ್ಕೆ ಹೊಂದಿಸಿಕೊಂಡು ಬಂದಿರುತ್ತೇವೆ. ಅವುಗಳನ್ನು ಉಜ್ಜಿ ತೊಳೆದು ಆ ಮಾಲಿನ್ಯಗಳನ್ನು ಕಳೆಯುವುದೇ ಅಂತಃಕರಣದ ಶುದ್ಧೀಕರಣ ಕಾರ್ಯ. ಅದು ಆಧ್ಯಾತ್ಮಪ್ರಗತಿಯೂ ಹೌದು.

ಆದರೆ ಪಾಶ್ಚಾತ್ಯರು ಈ ಅಭಿಪ್ರಾಯವನ್ನು ಒಪ್ಪದೆ ನಿರಾಶಾವಾದಿಗಳಾಗಿ ಮನುಷ್ಯನು ತನ್ನ ಪಾಶವೀ ವೃತ್ತಿಯ ಪ್ರಕೃತಿಸ್ವಭಾವಕ್ಕೆ ಬಲಿಯಾಗಿರುವುದರಿಂದ ಅವನು ತನ್ನ ವಿಷಯ ಸುಖಗಳ ಮತ್ತು ಭೋಗಲಾಲಸೆಗಳ ಅಡಿಯಾಳಾಗಿ ಅವುಗಳ ಅನುಚರನಾಗುವುದು ಸಹಜ ಎಂದು ಈಗಿನ ದುಸ್ಥಿತಿಯನ್ನು ಸಮರ್ಥಿಸುತ್ತಾರೆ. ಈ ರೀತಿಯ ಮನುಷ್ಯನ ಕೀಳುಪ್ರವೃತ್ತಿಗಳ ಅನುಸರಣೆಯನ್ನು ನಮ್ಮ ತಾತ್ತ್ವಿಕರು ಎಂದಿಗೂ ಒಪ್ಪುವುದಿಲ್ಲ.

ಹಿಂದೂ ತತ್ತ್ವಶಾಸ್ತ್ರದ ಹೆಚ್ಚುಗಾರಿಕೆಯು ಇದರಲ್ಲಿ ನೆಲೆಸಿದೆ. 'ಮನುಷ್ಯನು ತನ್ನ ಸಹಜ ಪ್ರವೃತ್ತಿಗಳ ದಾಸನಲ್ಲ, ಅವುಗಳ ಒಡೆಯ' ಎಂದು ಅದು ಘೋಷಿಸುತ್ತದೆ. ಮನುಷ್ಯನು ತನ್ನ ಸಹಜ ಪ್ರವೃತ್ತಿಗಳನ್ನು ಹತೋಟಿಯಲ್ಲಿಡಲಾರನೆನ್ನುವುದಾದರೆ ಅವನು ವಿಲಾಸೀಜೀವನದಲ್ಲಿ ಮಗ್ನನಾಗಿ ಅಧಃಪತನ ಹೊಂದುವನು. ಆದರೆ ಆ ಪಾಶವೀಪ್ರವೃತ್ತಿಗಳನ್ನು ಮೆಟ್ಟಿ, ತನ್ನ ಅಧೀನದಲ್ಲಿಟ್ಟುಕೊಳ್ಳುವುದಾದರೆ ಅವನು ದೈವತ್ವದ ಮಟ್ಟಕ್ಕೆ ಏರಬಹುದು. ಇಂತಹ ಸಾಹಸ ಜೀವನವನ್ನೇ ನಮ್ಮ ಋಷಿಗಳೂ, ಸಾಧುಸಂತರೂ ನಡೆಸಿ ನಮಗೆಲ್ಲ ಆದರ್ಶರಾಗಿದ್ದಾರೆ.

ಈ ರೀತಿ ನಮ್ಮ ದೋಷಗಳನ್ನೂ, ದುಶ್ಚಟಗಳನ್ನೂ ತ್ಯಜಿಸುತ್ತಾ ಹೋದಷ್ಟೂ ನಮ್ಮ ಮನಸ್ಸು ಬುದ್ಧಿಗಳು ಪರಿಶುದ್ಧವಾಗುತ್ತಾ ಬರುತ್ತವೆ. ಆದರಿಂದ ನಮ್ಮ ಮನಸ್ಸು ಹೆಚ್ಚುಹೆಚ್ಚಾಗಿ ದೈವತ್ವದ ಕಡೆ ವಾಲುತ್ತದೆ. ಬುದ್ಧಿಯು ದೈವತ್ವವನ್ನು ಪ್ರತಿಬಿಂಬಿಸುತ್ತದೆ. ಇದನ್ನೇ ಶ್ರುತಿಯಲ್ಲಿ 'ಜ್ಞಾನಪ್ರಸಾದ' ಎಂದು ಕರೆದಿರುವುದು. ಕೆಲವರು ಇದನ್ನು 'ಪರಮಾತ್ಮನ ಅನುಗ್ರಹ' ಎಂದೂ ಅರ್ಥಮಾಡುತ್ತಾರೆ.

'ಜ್ಞಾನಪ್ರಸಾದ', 'ಆತ್ಮಪ್ರಸಾದ', 'ಸತ್ತ್ವಪ್ರಸಾದ' ಮೊದಲಾದ ಶಬ್ದಗಳು ಉಪನಿಷತ್ ಋಷಿಗಳ ಪ್ರಕಾರ ಮನಸ್ಸುಬುದ್ಧಿಗಳ ಪರಿಶುದ್ಧತೆಯನ್ನು ನಿರೂಪಿಸುತ್ತವೆ. ಖೋಟಾ ಮೌಲ್ಯಗಳು, ದುಷ್ಟಸಹವಾಸ, ಡಂಭಾಚಾರ, ಪಾಶವೀ ಮನೋವೃತ್ತಿಗಳನ್ನು ಅಂತಃಕರಣದಿಂದ ಹೊರದೂಡಿ ಅಂತಃಕರಣ ಶುದ್ಧಿಯನ್ನು ಪಡೆದುಕೊಳ್ಳುವುದೇ ಸಾಧಕನ ಗುರಿ. ಮನಸ್ಸು ಅಡ್ಡದಾರಿಯನ್ನು ಬಿಟ್ಟು ಸದಾಚಾರ ಸಂಪನ್ನವಾದರೆ ಅದು ಪರಿಶುದ್ಧವೂ ಮತ್ತು ಸೂಕ್ಷ್ಮವೂ ಆಗುವುದು. ಆಗ ಮನಸ್ಸು

ಪ್ರಶಾಂತವಾಗುವುದು. ಆ ನಿಶ್ಚಲವಾದ ಪರಿಶುದ್ಧ ಮನಸ್ಸಿನಲ್ಲಿ ಆತ್ಮವು ತಾನಾಗಿ ಪ್ರತಿಬಿಂಬಿತವಾಗುವುದು. ಆ ಕ್ಷಣದಲ್ಲೇ ಆತ್ಮಸಾಕ್ಷಾತ್ಕಾರ.

**ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ**
**ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ ।**
**ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ**
**ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ ॥** ೯

**ಯಸ್ಮಿನ್** – ಯಾವ ಶರೀರದಲ್ಲಿ, **ಪ್ರಾಣಃ** – ಪ್ರಾಣವು, **ಪಂಚಧಾ** – ಐದು ಪ್ರಕಾರವಾಗಿ, **ಸಂವಿವೇಶ** – ಒಳಹೊಕ್ಕಿರುವುದೋ (ಅಲ್ಲಿಯೇ), **ಏಷಃ** – ಈ, **ಅಣುಃ** – ಅಣುವಾದ, **ಆತ್ಮಾ** – ಆತ್ಮನು, **ಚೇತಸಾ** – ಶುದ್ಧಜ್ಞಾನದಿಂದ, **ವೇದಿತವ್ಯಃ** – ತಿಳಿಯಲ್ಪಡತಕ್ಕವನು, **ಪ್ರಜಾನಾಂ** – ಜನರ, **ಸರ್ವಂ ಚಿತ್ತಂ** – ಅಂತಃಕರಣವೆಲ್ಲವೂ, **ಪ್ರಾಣೈಃ ಸಹ** – ಪ್ರಾಣಗಳೊಡನೆ, **ಓತಂ** – ವ್ಯಾಪ್ತವಾಗಿದೆ, **ಯಸ್ಮಿನ್ ವಿಶುದ್ಧೇ** – ಯಾವ ಆ ಅಂತಃಕರಣವು ಶುದ್ಧಹೊಂದಿದರೆ, **ಏಷಃ** – ಈ, **ಆತ್ಮಾ** – ಆತ್ಮನು, **ವಿಭವತಿ** – ಸ್ಪಷ್ಟವಾಗಿ ಪ್ರಕಾಶಿಸುತ್ತಾನೆ.

(೯) ಯಾವ ಶರೀರದಲ್ಲಿ ಪ್ರಾಣವು ಐದು ಪ್ರಕಾರವಾಗಿ (ಪ್ರಾಣಾಪಾನಾದಿ ಭೇದಗಳಿಂದ) ವಿಶೇಷ ರೂಪಗಳಲ್ಲಿ ಪ್ರವೇಶಿಸಿರುವುದೋ, ಅಲ್ಲಿಯೇ ಈ ಅಣುವಾದ ಆತ್ಮನನ್ನು (ಸಾಧಕನು) ಶುದ್ಧ ಅಂತಃಕರಣದಿಂದ ತಿಳಿಯತಕ್ಕವನಾಗುತ್ತಾನೆ ಜನರ ಅಂತಃಕರಣವೆಲ್ಲವೂ ಪ್ರಾಣಗಳೊಡನೆ ವ್ಯಾಪ್ತವಾಗಿದೆ. ಆ ಅಂತಃಕರಣವು ಶುದ್ಧವಾದರೆ (ಕ್ಲೇಶಾದಿ ಕಶ್ಮಲಗಳೂ ದೂರವಾದರೆ) ಆತ್ಮನು ಪ್ರಕಾಶಿಸುತ್ತಾನೆ (ತನ್ನ ಸ್ವರೂಪವನ್ನು ತೋರಿಸಿಕೊಳ್ಳುವನು)

ಯಾವ ಚಿತ್ತವು ಕ್ಲೇಶವೇ ಮುಂತಾದ ಮಲಗಳಿಂದ ರಹಿತವಾಗಿ ಶುದ್ಧವಾದರೆ (ಅದರಲ್ಲಿ) ಆತ್ಮನು 'ವಿಭವತಿ' ಎಂದರೆ ವಿಶೇಷವಾದ ತನ್ನ ರೂಪದಿಂದ ತೋರಿಕೊಳ್ಳುವನು, ಎಂದರ್ಥ.

ಅಣುವೂ ಅತ್ಯಂತ ಸೂಕ್ಷ್ಮವೂ ಆದ ಆತ್ಮನನ್ನು ಗುರುತಿಸಬಲ್ಲ ಸಮರ್ಥ ಸಾಧನವೆಂದರೆ ನಮ್ಮೊಳಗಿರುವ ಪರಿಶುದ್ಧ ಬುದ್ಧಿ. ಬುದ್ಧಿಯನ್ನು ಬೆಳಗುವ ಸ್ವಯಂಜ್ಯೋತಿಯಾದ ವಸ್ತು 'ಚೇತಸ್ಸು'. ಚೇತಸ್ಸೇ ಬುದ್ಧಿಗೆ ತಿಳಿವನ್ನು ಕೊಡುವ ಚಿಚ್ಛಕ್ತಿ. ಆತ್ಮನು ಹೃದಯದಲ್ಲಿ ಆ ಚೇತಸ್ಸಿನಿಂದ ತಿಳಿಯಲ್ಪಡತಕ್ಕವನು. ಈ ಮಾತುಗಳ ಅರ್ಥವನ್ನು ನಾವು ಬಹಳ ಸೂಕ್ಷ್ಮವಾದ ವಿಶ್ಲೇಷಣೆಯಿಂದ ಅರಿಯಬೇಕು. ಇಲ್ಲವಾದರೆ ಈ ಮಂತ್ರವು ಹಿಂದೆ ಬಂದಿರುವ ಮಂತ್ರಕ್ಕೆ* ವಿರೋಧಾರ್ಥವನ್ನು ಕೊಡುವಂತೆ ತೋರುತ್ತದೆ. ಆ ಮಂತ್ರದಲ್ಲಿ ಆತ್ಮನು ಅಚಿಂತ್ಯನು, ಮನಸ್ಸಿನಿಂದ ಗ್ರಹಿಸಲ್ಪಡಲಾರದವನು ಎಂದು ಹೇಳಿದೆ. ಬಹಳ ಕಾಲದಿಂದ ಅನೇಕ ಸಾಧಕರು ಕೇಳುತ್ತಿರುವ ಪ್ರಶ್ನೆ ಇದೇ: ಪರಿಮಿತಿಗೊಳಪಟ್ಟ

---

*ಇದೇ ಗ್ರಂಥದ ಮುಂ. ೩-ಖಂ.೧ - ಮಂ.೭ 'ಅಚಿಂತ್ಯರೂಪಮ್' - ಎಂಬ ಶಬ್ದದ ವ್ಯಾಖ್ಯಾನವನ್ನು ನೋಡಿ.

ನಮ್ಮ ಮನಸ್ಸು ಬುದ್ಧಿಗಳು ಸಾಧನೆ ಮತ್ತು ಧ್ಯಾನೋಪಾಸನೆಗಳಿಂದ ಸೀಮಾರಹಿತನಾದ, ಅಪರಿಮಿತನಾದ ಆತ್ಮವನ್ನು ಅರಿಯಬಲ್ಲವೇ, ಎಂದು.

ಈ ಶಂಕೆಯು ನಮ್ಮ ಮನಸ್ಸಿನ ಗೋಜು, ಗೊಂದಲಗಳಿಂದ ಉದ್ಭವವಾಗಿರುವುದು. ನಮ್ಮ ಮನಸ್ಸು ಬುದ್ಧಿಗಳು ಏನನ್ನು ಅನ್ವೇಷಿಸಬೇಕೆಂಬುದನ್ನು ಗ್ರಹಿಸಿದರೆ. ಮಂತ್ರಾರ್ಥವು ಸ್ಪಷ್ಟವಾಗುತ್ತದೆ. ಪರಿಶುದ್ಧವಾದ. ಬುದ್ಧಿಯು ವಿವೇಕದಿಂದ ಅನಾತ್ಮವಸ್ತುಗಳಾದ ನಮ್ಮ ಉಪಾಧಿಗಳನ್ನು ಪ್ರತ್ಯೇಕಿಸಿ, ಅವುಗಳೊಡನೆ ತಾದಾತ್ಮ್ಯವನ್ನು ತ್ಯಜಿಸಿ, ತನ್ನ ನಿಜಸ್ವರೂಪವನ್ನು ಅರಿತಾಗ ಬುದ್ಧಿಯ ಉಪಕರಣದೊಡನೆ ನಮ್ಮ ಸಂಬಂಧವೂ ತೀರಿಕೊಳ್ಳುವುದು. ಅಲ್ಲಿಗೆ ನಾವು ಬುದ್ಧಿಯ ಮೂಲಕ ಮಾಡುವ ಉಪಾಸನೆಯೂ ಕೊನೆಗೊಳ್ಳುವುದು. ಆಗ ಬುದ್ಧಿಯನ್ನೂ ಬೆಳಗುವ ಆತ್ಮಜ್ಯೋತಿಯ ಸಂಪರ್ಕವೇರ್ಪಡುವುದು. ನಮ್ಮೊಳಗಿರುವ ಅನಾತ್ಮವಸ್ತುಗಳ ಸಂಬಂಧವೆಲ್ಲವೂ ಸಂಪೂರ್ಣವಾಗಿ ಕಳಚಿಕೊಂಡಾಗ ನಮ್ಮಲ್ಲಿ ಉಳಿಯುವುದು ಒಂದೇ. ಅದು ಸ್ವಪ್ರಕಾಶದಿಂದ ಬೆಳಗುವ ದಿವ್ಯ ಆತ್ಮಜ್ಯೋತಿ. ಆತ್ಮಜ್ಯೋತಿಯನ್ನರಿಯುವ ಈ ಸಾಧನವೇ ಬುದ್ಧಿಯನ್ನೂ ಬೆಳಗುವ ಮೂಲಜ್ಯೋತಿ ಎಂದು ಶ್ರುತಿಯು ಹೇಳಿರುವುದರ ಅರ್ಥ.

ಆತ್ಮವನ್ನರಿಯುವುದು ನಮ್ಮ ಬುದ್ಧಿಯಿಂದಲ್ಲ. ಬುದ್ಧಿಗೂ ಬೆಳಕನ್ನು ನೀಡುವ ಪ್ರಜ್ಞೆಯಿಂದ. ಅದು ಆತ್ಮನ ಬೆಳಕೇ. ಈ ರೀತಿ ವಿಮರ್ಶೆ ವಿವೇಚನೆಗಳಿಂದ ನಮ್ಮ ಅಸ್ತಿತ್ವದಲ್ಲಿ ಹುದುಗಿರುವ ಅನಾತ್ಮ ವಸ್ತುಗಳ ಭಾವನೆಗಳನ್ನು ನಿವಾರಣೆ ಮಾಡುತ್ತಾ ಬಂದಾಗ ಕೊನೆಗೆ ಉಳಿಯುವ ಆತ್ಮತತ್ತ್ವವು ತಾನಾಗಿ ಗೋಚರಕ್ಕೆ ಬರುವುದು.

ನಾವು ಬುದ್ಧಿವಂತರೆನಿಸಿಕೊಂಡಿದ್ದರೂ ಸಾಮಾನ್ಯವಾಗಿ ನಮ್ಮ ಗಮನವೆಲ್ಲ ಇಂದ್ರಿಯುಗಳ ಮೂಲಕ ಇಂದ್ರಿಯ ವಿಷಯುಗಳಲ್ಲಿ ನೆಲೆಸಿರುತ್ತದೆ. ನಮಗೆ ನಮ್ಮ ನಿಜ ಸ್ವರೂಪದ ಅರಿವುಂಟಾಗುವ ಸಂಭವವಿರುವುದಿಲ್ಲ. ನಮಗೆ ನಾವೇ ಅಪರಿಚಿತರಂತಾಗಿರುತ್ತೇವೆ. ನಮ್ಮ ಮನಸ್ಸನ್ನು ಬಾಹ್ಯವಿಷಯುಗಳಿಂದ ಹಿಂದೆಗೆದು ನಮ್ಮ ನಿಜಸ್ವರೂಪದ ಕಡೆಗೆ ಗಮನ ಹರಿಸಿದರೆ, ಮೋಡಗಳ ಹಿಂದೆ ಮರೆಯಾಗಿದ್ದ ಸೂರ್ಯನು ಪ್ರಕಾಶಮಾನವಾಗಿ ತೋರಿಕೊಳ್ಳುವಂತೆ ಆತ್ಮವು ನಮ್ಮ ಗೋಚರಕ್ಕೆ ಬರುವುದು.

# ಆತ್ಮಜ್ಞಾನದ ಮಹಿಮೆ

**ಯಂ ಯಂ ಲೋಕಂ ಮನಸಾ ಸಂವಿಭಾತಿ**
**ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।**
**ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂ**
**ಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿಕಾಮಃ ॥** ೧೦

**ವಿಶುದ್ಧಸತ್ತ್ವಃ** – ದೋಷಗಳನ್ನು ತೊಲಗಿಸಿಕೊಂಡಿರುವ ಆತ್ಮಜ್ಞಾನಿಯು, **ಯಂ ಯಂ** – ಯಾವ ಯಾವ, **ಲೋಕಂ** – ಲೋಕವನ್ನು, **ಮನಸಾ** – ಮನಸ್ಸಿನಿಂದ, **ಸಂವಿಭಾತಿ** – ಸಂಕಲ್ಪಿಸುವನೋ, **ಚ** – ಮತ್ತು, **ಯಾನ್ ಕಾಮಾನ್** – ಯಾವ ಕಾಮನೆಗಳನ್ನು, **ಕಾಮಯತೇ** – ಬಯಸುತ್ತಾನೋ, **ತಂ ತಂ ಲೋಕಂ** – ಆಯಾಯಾ ಲೋಕವನ್ನು, **ಚ** – ಮತ್ತು, **ತಾನ್ ಕಾಮಾನ್** – ಆ ಕಾಮನೆಗಳನ್ನು, **ಜಯತೇ** – ಗೆದ್ದುಕೊಳ್ಳುತ್ತಾನೆ, **ತಸ್ಮಾತ್** – ಆದ್ದರಿಂದ, **ಭೂತಿಕಾಮಃ** – ವಿಭೂತಿಯನ್ನು ಬಯಸುವವನು (ತನಗೆ ಒಳ್ಳೆಯದಾಗಬೇಕೆಂದು ಬಯಸುವವನು), **ಆತ್ಮಜ್ಞಂ** – ಆತ್ಮಜ್ಞಾನಿಯನ್ನು, **ಅರ್ಚಯೇತ್** – ಪೂಜಿಸಬೇಕು.

(೧೦) ಪರಿಶುದ್ಧನಾದ ಆತ್ಮವಿದನು ಯಾವ ಯಾವ ಲೋಕವನ್ನು ಹೊಂದಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿಕೊಳ್ಳುವನೋ ಮತ್ತು ಯಾವ ಯಾವ ಕಾಮನೆಗಳನ್ನು ಬಯಸುವನೋ, ಆಯಾ ಲೋಕವನ್ನೂ, ಕಾಮನೆಗಳನ್ನೂ ಪಡೆಯುತ್ತಾನೆ. ಆದ್ದರಿಂದ ಸದ್ಗತಿಯನ್ನು ಇಚ್ಛಿಸುವವನು ಆತ್ಮಜ್ಞಾನಿಯನ್ನು ಪೂಜಿಸಬೇಕು.

ಈ ಮಂತ್ರದಲ್ಲಿ ಮನುಷ್ಯನು ತನ್ನ ಕಾಮಿತ ಫಲಗಳನ್ನು ಜಯಿಸಿಕೊಳ್ಳಲು ಅಗತ್ಯವಾದ ರಹಸ್ಯ ತಂತ್ರವನ್ನು ಚರ್ಚಿಸಿದೆ. ಇದೇ ನಮ್ಮ ಹಿಂದಿನ ಋಷಿಗಳ ಯಶಸ್ವೀ ಜೀವನಕ್ಕೆ ಕಾರಣವಾಗಿದ್ದ ಉಪಾಯವೆಂದು ತೋರುತ್ತದೆ. 'ಮನಸ್ಸಿನಂತೆ ಮಾನವ' ಎಂಬುದು ಪಾಶ್ಚಾತ್ಯರೂ ಒಪ್ಪಿರುವ ತತ್ತ್ವವೇ. ಆದರೆ ಹಿಂದೂ ತತ್ತ್ವಜ್ಞರು ಇನ್ನೂ ಮುಂದೆ ಹೋಗಿ 'ಮನಸ್ಸು ಹೇಗೋ ಮಾನವನು ಹಾಗೆ' ಎಂಬುದನ್ನು ತಮ್ಮ ಜೀವನದಲ್ಲಿ ಅನುಸರಿಸಿ ತೋರಿಸಿದರು. ಈ ಅನುಭವದ ಜ್ಞಾನವೇ ಶ್ರುತಿಯ ಮಂತ್ರ ರೂಪದಲ್ಲಿ ಇಲ್ಲಿ ಉಕ್ತವಾಗಿದೆ.

ಮನಸ್ಸನ್ನು ಏಕಾಗ್ರಮಾಡಿ, ಅದರ ಸಮಸ್ತ ಶಕ್ತಿಯನ್ನೂ ಕ್ರೋಡೀಕರಿಸಿ ಯಾವುದಾದರೂ ಒಂದು ಘಟನೆ ನಮ್ಮ ಜೀವನದಲ್ಲಿ ನಡೆಯಲೇಬೇಕೆಂದು ದೃಢವಾಗಿ ನಿರಂತರವಾಗಿ ನಾವು ಇಚ್ಛಿಸಿದರೆ ಅದು ಸಂಭವಿಸಿಯೇ ಸಂಭವಿಸುತ್ತದೆ. ಇದು ಜೀವನದ ಒಂದು ನಿಯಮ. ನಮ್ಮ ಸಂಕಲ್ಪದಲ್ಲಿ ಸಾಕಾದಷ್ಟು ಬಲವಿದ್ದರೆ ನಾವು ಸತ್ಯಸಂಕಲ್ಪರಾಗಬಹುದು. ಆದರೆ ದುರದೃಷ್ಟದಿಂದ ನಮ್ಮ ಸಂಕಲ್ಪವು ಅಷ್ಟು ಬಲವತ್ತರವಾಗಿರುವುದಿಲ್ಲ. ಒಂದನ್ನು ಇಚ್ಛಿಸುತ್ತಿರುವಾಗಲೇ ನೂರಾರು ಅನ್ಯ ಬಯಕೆಗಳು ನಮ್ಮನ್ನು ಕಾಡಿ ನಮ್ಮ ಸಂಕಲ್ಪ ಶಕ್ತಿಯನ್ನು ಚದುರಿಸಿಬಿಡುತ್ತವೆ. ಆ ರೀತಿಯಲ್ಲಿ ನಾವು ಮಾನಸಿಕವಾಗಿ ದುರ್ಬಲರಾಗುತ್ತೇವೆ. ಆದರಿಂದ ಪ್ರಬಲವಾದ ಪ್ರಚೋದನೆ ಮಾಡುವ ಸಾಮರ್ಥ್ಯವನ್ನು ಕಳೆದುಕೊಂಡು ದೃಢಮನಸ್ಸಿಲ್ಲದ ನಾವು

ಯಾವ ಯೋಜನೆಯನ್ನೂ ಹಮ್ಮಿಕೊಳ್ಳುವುದಕ್ಕಾಗಲಿ, ಅದನ್ನು ಜಯಪ್ರದವಾಗಿ ನಿರ್ವಹಿಸುವುದಕ್ಕಾಗಲೀ ಶಕ್ತರಾಗಿರುವುದಿಲ್ಲ. ಈ ಮಂತ್ರದಲ್ಲಿ ವಿಜಯ ಸಾಧಿಸುವ ಅಪಾರ ಮಾನಸಿಕ ಶಕ್ತಿಯ ಸಂಪಾದನೆಗೆ ಸಾಧನೆಯನ್ನು ವಿವರಿಸಿದೆ.

ಆಧ್ಯಾತ್ಮಿಕ ಸಾಧನೆಯಿಂದ ಸಾಧಕನು ಉಳಿದೆಲ್ಲವನ್ನೂ ತೊರೆದು ಒಂದು ವಿಷಯವನ್ನು ಮಾತ್ರ ಮನಸ್ಸು, ಹೃದಯ, ಅಂತಃಕರಣ ಪೂರ್ವಕವಾಗಿ ಹಂಬಲಿಸುವ ಅಥವಾ ಸಂಕಲ್ಪಿಸುವ ಶಕ್ತಿ ಪಡೆಯುತ್ತಾನೆ. ಉಳಿದ ಚಿಂತನೆಗಳೆಲ್ಲ ಅವನ ಮನಸ್ಸಿನಿಂದ ಬಿದ್ದುಹೋಗುತ್ತವೆ. ತಾನು ಸದಾ ಚಿಂತಿಸುತ್ತಿರುವ ಚಿಂತನೆಯೊಂದೇ ಮನಸ್ಸನ್ನು ಸಂಪೂರ್ಣವಾಗಿ ಆಕ್ರಮಿಸಿರುತ್ತದೆ. ಅದು ಅವನ ಜೀವನದ ಉಸಿರಾಗುತ್ತದೆ, ಧ್ಯೇಯವಾಗುತ್ತದೆ. ಅದನ್ನೇ ಯೋಗಾಭ್ಯಾಸವನ್ನಾಗಿ ಪರಿವರ್ತಿಸಿದರೆ, ಅಶಕ್ತನಾಗಿದ್ದವನೂ ಸಿಂಹಬಲವುಳ್ಳವನಾಗುತ್ತಾನೆ. ದೈವಭಕ್ತರು ಇದನ್ನು 'ಈಶ್ವರ ಕೃಪೆ' ಎನ್ನುತ್ತಾರೆ – ವೇದಾಂತಿಗಳು 'ಆತ್ಮಶಕ್ತಿ' ಎನ್ನುತ್ತಾರೆ. ಯೋಗಿಗಳು 'ಕುಂಡಲಿನೀಶಕ್ತಿ' ಎಂದು ಶ್ಲಾಘಿಸುತ್ತಾರೆ. ಏನೆಂದರೂ ಎಲ್ಲವೂ ಒಂದೇ. ಸಾಧಕನು ಶಾರೀರಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ ತನ್ನ ಶಕ್ತಿಯೆಲ್ಲವನ್ನೂ ಸಂಗ್ರಹಿಸಿ ವ್ಯಕ್ತಿತ್ವದ ಸಮಗ್ರತೆಯನ್ನು ಸ್ಥಾಪಿಸಿಕೊಳ್ಳುವುದಾದರೆ ಅವನು ಅತ್ಯಂತ ಸಮರ್ಥನಾಗುತ್ತಾನೆ. ಈ ರೀತಿಯ ಸಿದ್ಧಿಯನ್ನು ಯೋಗದಿಂದ ಪಡೆಯುವುದು ಸಾಧ್ಯ. ಮಹಾ ಯೋಗಿಗಳೂ, ಸಿದ್ಧಪುರುಷರೂ ಇದನ್ನು ಸಾಧಿಸಿ ತೋರಿಸಿದ್ದಾರೆ.

ಜ್ಞಾನಿಯು ವ್ಯಕ್ತಿತ್ವದ ಪೂರ್ಣ ವಿಕಾಸವನ್ನು ಹೊಂದಿರುತ್ತಾನೆ. ಪ್ರಪಂಚದಲ್ಲಿ ಅಭ್ಯುದಯವನ್ನು ಬಯಸುವವರು ಅಂತಹ ಸತ್ಯಸಂಕಲ್ಪರಾದ ಆತ್ಮಜ್ಞಾನಿಗಳನ್ನು ಗೌರವದಿಂದ ಆದರಿಸಿ, ಪೂಜಿಸಿ, ನಮಸ್ಕರಿಸಿ ಅವರಿಗೆ ಮನ್ನಣೆ ಸಲ್ಲಿಸಬೇಕು. ಅವರ ಅನುಗ್ರಹದಿಂದ ನಾವು ಈ ಲೋಕದಲ್ಲಿ ಅಭ್ಯುದಯವನ್ನು ಗಳಿಸಬಹುದು. ಪರಲೋಕದಲ್ಲಿ ನಿಃಶ್ರೇಯಸ್ಸನ್ನೂ ಗಳಿಸಬಹುದು. ಅಂತಹ ಜ್ಞಾನಿಗಳೂ ಎಲ್ಲರಿಗೂ ಒಳ್ಳೆಯದನ್ನೇ ಬಯಸುತ್ತಾರೆ. ಅವರು ಸರ್ವರಲ್ಲಿಯೂ ಪರಮಾತ್ಮನನ್ನು, ಪರಮಾತ್ಮನಲ್ಲಿಯೇ ಸರ್ವರನ್ನೂ ಕಾಣುತ್ತಾರೆ. ಅವರು ಬಯಸುವುದು ಮತ್ತೇನನ್ನೂ ಅಲ್ಲ. ಸರ್ವರ ಕಲ್ಯಾಣ, ಶ್ರೇಯಸ್ಸು ಹಾಗೂ ಆಧ್ಯಾತ್ಮಿಕ ವರ್ಚಸ್ಸು. ಈ ರೀತಿಯಾಗಿ ಸರ್ವರಲ್ಲಿಯೂ ತಾದಾತ್ಮ್ಯವನ್ನು ತಾಳುವುದೇ ಜ್ಞಾನಿಯ ನಿತ್ಯವೈಭವ. ಜ್ಞಾನಿಯು ತನ್ನ ಆಶ್ರಮವನ್ನು ಉದ್ಧರಿಸುವುದಕ್ಕಾಗಲಿ, ವೈಭವೀಕರಿಸುವುದಕ್ಕಾಗಲಿ ಬಯಸುವುದಿಲ್ಲ. ಅವನು ಮತ್ತೇನನ್ನೂ ಬಯಸುವುದಿಲ್ಲ. ಅವನು ಬಯಸುವುದು ಒಂದೇ. ತನ್ನ ಬಳಿ ಬರುವ ಸಾಧಕನ ಮಾನಸಿಕ ಮತ್ತು ಬೌದ್ಧಿಕ ಶುದ್ಧೀಕರಣ ಮತ್ತು ಆಧ್ಯಾತ್ಮಿಕ ಉನ್ನತಿ.

ಪರಮಾತ್ಮನ ನಿರಂತರ ಸ್ಮರಣೆಯಲ್ಲಿ ಬದುಕಿರಿ. ವಿಷಯ ಲಂಪಟತ್ವ, ಭೋಗ ಲಾಲಸೆಗಳನ್ನು ತೊರೆಯಿರಿ. ಸಂಯಮ, ಸಮಾಧಾನ, ತೃಪ್ತಿ ಇವುಗಳಿಂದ ಹರ್ಷಚಿತ್ತರಾಗಿ ಬಾಳಿ. ಧ್ಯಾನ, ಯೋಗಗಳಲ್ಲಿ ನಿರತರಾಗಿರಿ. ನಿಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡುತ್ತ ಧರ್ಮದಿಂದ ಬದುಕಿರಿ. ಇದು ನಿಜವಾಗಿಯೂ

ಜ್ಞಾನಸಿದ್ಧಿಯನ್ನು ಪಡೆದ ಮಹಾಯೋಗಿಯನ್ನು ಸೇವಿಸುವ ಕ್ರಮ. ಇದನ್ನು ಬಿಟ್ಟು ಹೂಮಾಲೆಗಳನ್ನು ಅವರಿಗೆ ಅರ್ಪಿಸುವುದು ವ್ಯರ್ಥ. ಪಾದಪೂಜೆ, ದಂಡ ನಮಸ್ಕಾರಗಳು ಅವನ ಪಾಲಿಗೆ ಹಿಂಸೆ. ಹೊಗಳುತ್ತಾ ಉಪಚರಿಸುತ್ತಾ ಅವನನ್ನು ಸುತ್ತುವರಿದು ಕಾಡಿ ಬೇಡುವುದು ಅವನಿಗೆ ಅಸಹನೀಯ ವೇದನೆ.

**ಮೂರನೆಯ ಮುಂಡಕದ ಒಂದನೆಯ ಖಂಡ ಸಮಾಪ್ತಿ**

---

## ಮೂರನೆಯ ಮುಂಡಕ–ಎರಡನೆಯ ಖಂಡ

### ಆತ್ಮವಿದನನ್ನು ಪೂಜಿಸುವುದರಿಂದ ಬರುವ ಫಲ

**ಸ ವೇದೈತತ್ ಪರಮಂ ಬ್ರಹ್ಮ ಧಾಮ**
**ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಮ್ ।**
**ಉಪಾಸತೇ ಪುರುಷಂ ಯೇ ಹ್ಯಕಾಮಾ –**
**ಸ್ತೇ ಶುಕ್ರಮೇತದತಿವರ್ತಂತಿ ಧೀರಾಃ॥** ೧

**ಸಃ** – ಆ ಆತ್ಮಜ್ಞನು, **ಯತ್ರ** – ಯಾವ ಬ್ರಹ್ಮದಲ್ಲಿ, **ವಿಶ್ವಂ** – ಸಮಸ್ತ ಜಗತ್ತು, **ನಿಹಿತಂ** – ಇಡಲ್ಪಟ್ಟಿದೆಯೋ, **ಶುಭ್ರಂ ಭಾತಿ** – ಶುದ್ಧವಾಗಿ ಪ್ರಕಾಶಿಸುತ್ತಿರುವುದೋ, **ಏತತ್** – ಈ, **ಪರಮಂ** – ಪವಿತ್ರವಾದ, **ಬ್ರಹ್ಮಧಾಮ** – ಬ್ರಹ್ಮವೆಂಬ ಸ್ಥಾನವನ್ನು, **ವೇದ** – ತಿಳಿದಿರುವವನು, **ಯೇ ಅಕಾಮಾಃ** – ನಿಷ್ಕಾಮರಾದ ಯಾರು, **ಪುರುಷಂ** – ಆತ್ಮಜ್ಞನನ್ನು, **ಉಪಾಸತೇ** – ಉಪಾಸಿಸುವವರೋ, **ತೇ ಧೀರಾಃ** – ಆ ಧೀರರು, **ಏತತ್ ಶುಕ್ರಂ** – ಈ ಪುನರ್ಜನ್ಮವನ್ನು, **ಅತಿವರ್ತಂತಿ** – ದಾಟುವರು.

(೧) ಯಾವ ಬ್ರಹ್ಮದಲ್ಲಿ ಸಮಸ್ತ ಜಗತ್ತೂ ಇಡಲ್ಪಟ್ಟಿರುವುದೋ, ಯಾವುದು ತನ್ನ ಬೆಳಕಿನಿಂದ ಶುದ್ಧವಾಗಿ ಬೆಳಗುತ್ತಿರುವುದೋ ಅಂತಹ ಈ ಪರಮ ಪವಿತ್ರವಾದ ಬ್ರಹ್ಮವೆಂಬ ಸ್ಥಾನವನ್ನು ಆತ್ಮಜ್ಞಾನಿಯು ತಿಳಿದಿರುವನು. ನಿಷ್ಕಾಮರಾದ ಯಾರು ಈ ಆತ್ಮಜ್ಞಾನಿಯನ್ನು ಉಪಾಸಿಸುವರೋ ಆ ಧೀರರು ಪುನರ್ಜನ್ಮವನ್ನು ಅತಿಕ್ರಮಿಸುವರು.*

ಭೂತಿಕಾಮನು ಅಂದರೆ ಶ್ರೇಯಸ್ಸನ್ನು ಇಚ್ಛಿಸುವವನು ಆತ್ಮಜ್ಞಾನಿಯನ್ನು ಪೂಜೆ ಪುರಸ್ಕಾರ ನಮಸ್ಕಾರಗಳಿಂದ ಸೇವಿಸಬೇಕು ಎಂದು ಹಿಂದಿನ ಮಂತ್ರದಲ್ಲಿ ಹೇಳಿದೆ. ಈ ರೀತಿ ಸೇವಿಸುವುದರಿಂದ ಅಂತಹ ಜ್ಞಾನಿಯ ಅನುಗ್ರಹವಾಗಿ ಸಾಧಕನು ಇಹಲೋಕದ ಕಾಮನೆಗಳನ್ನು ಪೂರಯಿಸಿಕೊಳ್ಳುವನು ಎಂದೂ ಶ್ರುತಿಯಲ್ಲಿ ಹೇಳಿದೆ.

ಇಹಲೋಕದ ಐಶ್ವರ್ಯವನ್ನು ಗಣನೆಗೇ ತಾರದ ವಿರಕ್ತನಿಗೆ ಆತ್ಮಜ್ಞಾನಿಯನ್ನು ಸೇವಿಸಿ ಆಗಬೇಕಾದದ್ದೇನು ಎಂಬ ಶಂಕೆ ಯಾರಿಗಾದರೂ ಮೂಡಬಹುದು.

ಈ ಮಂತ್ರವು ಆ ಶಂಕೆಯನ್ನು ಪರಿಹರಿಸುತ್ತದೆ. ಯಾರು ಯಾವ

*ಕಠೋಪನಿಷತ್ತಿನ ಎರಡನೆಯ ಅಧ್ಯಾಯ - ಮೂರನೆ ವಲ್ಲಿ, ಒಂದನೆಯ ಮಂತ್ರವನ್ನು ಇದಕ್ಕೆ ಹೋಲಿಸಿ.

ಪ್ರತಿಫಲವನ್ನೂ ಅಪೇಕ್ಷಿಸದೆ ಮಹಾತ್ಮರಾದ ಆತ್ಮಜ್ಞಾನಿಗಳನ್ನು ಮನಃಪೂರ್ವಕವಾಗಿ ಸತ್ಕರಿಸಿ ಅವರಿಗೆ ಸೇವೆ ಸಲ್ಲಿಸುತ್ತಾರೋ ಅಂತಹ ವಿವೇಕಿಗಳು ಅಂತಃಕರಣ ಶುದ್ಧಿಯನ್ನು ಪಡೆಯುವರು. ಅಂತಃಕರಣ ಶುದ್ಧಿಯಿಲ್ಲದೆ ಶಾಸ್ತ್ರಗ್ರಂಥಗಳ ಗೂಢಾರ್ಥವು ಗ್ರಹಿಕೆಗೆ ಬರುವುದಿಲ್ಲ. ಅಲ್ಲದೆ ಧ್ಯಾನ, ತಪಸ್ಸು ಮುಂತಾದ ಮೇಲಿನ ಹಂತಗಳನ್ನು ಏರುವುದಕ್ಕೂ ಸಾಧ್ಯವಾಗುವುದಿಲ್ಲ. ಆದ್ದರಿಂದ ಅಂತಹ ಆತ್ಮಜ್ಞಾನಿಯನ್ನು ಸೇವಿಸುವುದರಿಂದ ಸಾಧಕನು ಅಮೃತವೂ ಶಾಶ್ವತವೂ ಆದ ಬ್ರಹ್ಮಧಾಮವನ್ನು ಸೇರಲು ಸಮರ್ಥನಾಗುತ್ತಾನೆ, ಎಂದು ಶ್ರುತಿಮಂತ್ರವು ಹೇಳುತ್ತಿದೆ.

ಹೀಗೆ ಹೇಳುವುದು ಹಿಂದೆ ಹೇಳಿರುವ ಶ್ರುತಿಯ ವಾಕ್ಯಗಳಿಗೆ ವಿರೋಧವಲ್ಲವೇ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸಬಹುದು. ಆತ್ಮಜ್ಞಾನವಲ್ಲದೆ ಬೇರಾವುದರಿಂದಲೂ ಸಂಸಾರದಿಂದ ಮುಕ್ತಿ ದೊರಕದೆಂದು ಹಿಂದೆಲ್ಲಾ ಶ್ರುತಿಯು ಮುಕ್ತಕಂಠದಿಂದ ಹೇಳಿದೆ. ಈಗ ಆತ್ಮಸಾಕ್ಷಾತ್ಕಾರ ಪಡೆದಿರುವ ಪೂರ್ಣ ಜ್ಞಾನಿಗಳ ಸೇವೆ ಮಾಡುವುದರಿಂದ ಇಹಲೋಕದ ಆಸೆಗಳನ್ನು ತ್ಯಜಿಸಿರುವ ವಿವೇಕಿಯು ಅರಿಷಡ್ವರ್ಗಗಳಿಂದ ದುಃಖಿತಪ್ತವಾದ ಸಂಸಾರ ಸಾಗರವನ್ನು ದಾಟಬಹುದು ಎಂದು ಹೇಳುವುದು ಸರಿಯೇ, ಎಂಬ ಶಂಕೆ ಬರಬಹುದು.

ಆದರೆ ಆಳವಾಗಿ ಯೋಚಿಸಿದರೆ ಇಲ್ಲಿ ಹೇಳಿರುವುದೇನೂ ತಪ್ಪಲ್ಲ ಎಂಬುದು ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಆಡುಮಾತಿನಲ್ಲಿ ನಾವು ಪ್ರಸ್ತುತವಾಗಿ ಮಾಡುತ್ತಿರುವ ಕೆಲಸಕ್ಕೆ ಬದಲಾಗಿ ಅದರ ಅಂತಿಮ ಗುರಿಯನ್ನೇ ಹೇಳುವುದಿಲ್ಲವೇ ? 'ನೀವು ಎಲ್ಲಿಗೆ ಹೋಗುತ್ತಿದ್ದೀರಿ ?' ಎಂದು ಯಾರನ್ನಾದರೂ ಪ್ರಶ್ನಿಸಿದಾಗ ಅವರು 'ಆಫೀಸಿಗೆ' ಎಂದು ಉತ್ತರ ಕೊಡಬಹುದು. ಸ್ವಲ್ಪ ಹೊತ್ತಿನಲ್ಲಿಯೇ ಅವರು ಬಸ್ ನಿಲ್ದಾಣದಲ್ಲಿ ನಿಂತಿರುವುದನ್ನು ನೀವು ಕಾಣಬಹುದು. 'ನಾನು ಬಸ್ ನಿಲ್ದಾಣಕ್ಕೆ ಹೋಗುತ್ತಿದ್ದೇನೆ' ಎನ್ನುವ ಬದಲು 'ನಾನು ಆಫೀಸಿಗೆ ಹೋಗುತ್ತಿದ್ದೇನೆ' ಎಂದು ಅವರು ಹೇಳಿದ್ದು ಸುಳ್ಳೇ ? ಅಲ್ಲ. ಕೊನೆಗೆ ಮುಟ್ಟಬೇಕಾದ ಸ್ಥಾನವನ್ನು ಅವರು ನಿರ್ದೇಶಿಸಿದರು, ಅಷ್ಟೇ. ಅವರಿಗೆ ಬಸ್ ನಿಲ್ದಾಣಕ್ಕೆ ಹೋಗುವುದು ಪ್ರಕೃತವಲ್ಲ. ಅವರ ಉದ್ದೇಶ ಆಫೀಸನ್ನು ತಲುಪುವುದು. ಇದೂ ಹಾಗೆಯೇ. ಗುರುಸೇವೆಯಿಂದ ಸಾಧಕನು ಹೆಚ್ಚು ಹೆಚ್ಚು ಪರಿಶುದ್ಧನೂ, ಸಾತ್ವಿಕನೂ ಆಗಿ ಆತ್ಮಸಾಕ್ಷಾತ್ಕಾರಕ್ಕೆ ಅಧಿಕಾರಿಯಾಗುತ್ತಾನೆ, ಎಂಬುದು ಅದರ ಧ್ವನಿ. ಆತ್ಮಜ್ಞಾನಿಯಾದ ಮೇಲೆ ಅವನು ಸಂಸಾರದಿಂದ ಮುಕ್ತನಾಗುತ್ತಾನೆಯಷ್ಟೆ ! ಆದರಿಂದಲೇ ಶಾಸ್ತ್ರಗಳಲ್ಲಿ ಸಾಧುಸಂತರ, ಜ್ಞಾನಿಗಳ ಹಾಗೂ ಗುರುಗಳ ಸೇವೆಯಿಂದ ಭಕ್ತರು ಧ್ಯಾನ ತಪಸ್ಸುಗಳ ಮಟ್ಟಕ್ಕೆ ಏರಲು ಸಮರ್ಥರಾಗುವರೆಂದು ಪ್ರಶಂಸಿಸಿರುವುದು.

ಯಾವ ಪರಬ್ರಹ್ಮನಲ್ಲಿ ಸಕಲ ವಸ್ತುಗಳೂ ಕಲ್ಪಿತವಾಗಿವೆಯೋ, ಯಾವ ಬ್ರಹ್ಮನು ತನ್ನ ಪ್ರಕಾಶದಿಂದ ಎಲ್ಲವನ್ನೂ ಬೆಳಗುತ್ತಿರುವನೋ ಆ ಬ್ರಹ್ಮವನ್ನು ತಿಳಿದ ಜ್ಞಾನಿಯು ನಿಜವಾಗಿಯೂ ಪೂಜಾರ್ಹ, ಗೌರವಾನ್ವಿತ. ಅಂತಹ ಜ್ಞಾನಿಯ

ಶುಶ್ರೂಷೆಯನ್ನು ಮಾಡುವ ವಿವೇಕಿಯು ಅವನ ಅನುಗ್ರಹದಿಂದ ತಾನೂ ಜ್ಞಾನಿಯಾಗುವನು! ಇದರಲ್ಲಿ ಯಾವ ಸಂದೇಹವೂ ಇಲ್ಲ.

## ಆತ್ಮಜ್ಞಾನಿಗೆ ಪುನರ್ಜನ್ಮವಿಲ್ಲ

**ಕಾಮಾನ್ ಯಃ ಕಾಮಯತೇ ಮನ್ಯಮಾನಃ**
**ಸ ಕಾಮಭಿರ್ಜಾಯತೇ ತತ್ರ ತತ್ರ ।**
**ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು**
**ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥** ೨

**ಯಃ** – ಯಾವನು, **ಕಾಮಾನ್** – ಭೋಗವಿಷಯಗಳನ್ನು ಕುರಿತು, **ಮನ್ಯಮಾನಃ** – ಯೋಚಿಸುತ್ತ, **ಕಾಮಯತೇ** – ಹಂಬಲಿಸುತ್ತಿರುವನೋ, **ಸಃ** – ಅವನು, **ಕಾಮಭಿಃ** – ಭೋಗವಿಷಯಗಳೊಡನೆ, **ತತ್ರ ತತ್ರ** – ಅಲ್ಲಲ್ಲಿ, **ಜಾಯತೇ** – ಹುಟ್ಟುತ್ತಾನೆ, **ತು** – ಆದರೆ, **ಪರ್ಯಾಪ್ತಕಾಮಸ್ಯ** – ಪೂರ್ಣಕಾಮನಾದ, **ಕೃತಾತ್ಮನಃ** – ಪರಿಶುದ್ಧನಾದ ಜ್ಞಾನಿಗೆ, **ಸರ್ವೇಕಾಮಾಃ** – ಎಲ್ಲಾ ಕಾಮಗಳೂ, **ಇಹ ಏವ** – ಇಲ್ಲಿಯೇ, **ಪ್ರವಿಲೀಯಂತಿ** – ನಾಶವಾಗುವುವು.

(೨) ಯಾವನು ಕಾಮಗಳ ಬಗ್ಗೆ ಯೋಚಿಸುತ್ತಾ ಹಂಬಲಿಸುವನೋ ಅವನು ಕಾಮಗಳೊಂದಿಗೆ ಅಲ್ಲಲ್ಲಿ ಹುಟ್ಟುತ್ತಾನೆ ಪೂರ್ಣಕಾಮನಾದ ಕೃತಾತ್ಮನಿಗಾದರೋ ಎಲ್ಲಾ ಕಾಮಗಳೂ ಇಲ್ಲಿಯೇ ಅಡಗಿಹೋಗುವುವು

ಈ ಮಂತ್ರದಲ್ಲಿ ಮನುಷ್ಯನ ಪುನರ್ಜನ್ಮವನ್ನು ನಿಯಂತ್ರಿಸುವ ನಿಯಮವನ್ನು ತಿಳಿಸಿದೆ. ಭಾರತದಲ್ಲಿ ಸಕಲ ತಾತ್ತ್ವಿಕರೂ ಒಪ್ಪುವ ಸಿದ್ಧಾಂತವೆಂದರೆ – 'ಏನು ಯೋಚಿಸುತ್ತೀಯೋ ನೀನು ಅದೇ ಆಗುವೆ', ಎಂಬುದು. ಯೋಚನೆಯು ನಮ್ಮೊಳಗಿರುವ ಕ್ರಿಯಾತ್ಮಕವಾದ ಬಲವತ್ತರ ಪ್ರಚೋದನೆಯ ಪ್ರಕಟರೂಪ. ನಮ್ಮ ಕ್ರಿಯೆಯು ನಮ್ಮ ಮನಸ್ಸಿನ ಆಸೆ ಆಕಾಂಕ್ಷೆಗಳ ಗುಣ, ಶಕ್ತಿ, ರೀತಿ ನೀತಿಗಳನ್ನು ಅವಲಂಬಿಸಿರುತ್ತದೆ.

ಸಾಮಾನ್ಯವಾಗಿ ಲೋಕದಲ್ಲಿ ನಮ್ಮ ಚಟುವಟಿಕೆಗಳಿಗೆ ಕಾರಣವನ್ನು ಹಿಂದಾಗಲೇ ಚರ್ಚಿಸಿದ್ದೇವೆ. ನಮ್ಮ ಸಹಜ ಸ್ವರೂಪವನ್ನು ತಿಳಿಯದೇ ಇರುವುದೇ ನಮ್ಮ ಆಸೆ ಆಕಾಂಕ್ಷೆಗಳ ಹುಟ್ಟಿಗೆ ಕಾರಣ. ನಾನು ಪರಿಪೂರ್ಣ, ಆನಂದಸ್ವರೂಪ ಎಂಬುದನ್ನು ತಿಳಿಯದೆ ಸುಖಸಂತೋಷಗಳನ್ನು ಹೊಂದಲು ಹೊರಗಿನ ವಿಷಯಗಳನ್ನು ಬಯಸಿ ಅವುಗಳ ಹಿಂದೆ ಓಡುತ್ತೇವೆ. ಆ ಸನ್ನಿವೇಶದಲ್ಲಿ ನಮ್ಮ ಸಹಜ ಸ್ವಭಾವವನ್ನು ತಿಳಿಯಲು ಪ್ರಯತ್ನಪಡುವುದೂ ಕೂಡ ಹುಚ್ಚುತನವೆನಿಸುತ್ತದೆ. ನಮ್ಮ ತೀವ್ರ ಬಯಕೆಗಳು ನಮ್ಮ ಮನಸ್ಸಿನಲ್ಲಿ ಕ್ಷೋಭೆಯುಂಟುಮಾಡಿ ಅನೇಕ ಯೋಚನೆಗಳನ್ನು ಹರಿಯಬಿಡುತ್ತವೆ. ಯೋಚನೆಗಳು ಪ್ರಬಲವಾದಾಗ ಅವು ಇಂದ್ರಿಯ ವಿಷಯಗಳ ಸಂಪರ್ಕಪಡೆದು ಕಾರ್ಯದಲ್ಲಿ ನಮ್ಮನ್ನು ತೊಡಗಿಸುತ್ತವೆ. ಆಗ ನಾವು ಕಾರ್ಯತತ್ಪರರಾಗುತ್ತೇವೆ.

ಒಟ್ಟಾರೆ ಅನೇಕಾನೇಕ ವ್ಯಕ್ತಿಗಳು ಕಾರ್ಯ ನಡೆಸುತ್ತಿರುವ ಕಾರ್ಯರಂಗವೇ ಪ್ರಪಂಚ ಅಥವಾ ಲೋಕ. ಸಂಸ್ಕೃತದಲ್ಲಿ ಲೋಕ ಎಂದರೆ ಕಾರ್ಯಕ್ಷೇತ್ರ ಅಥವಾ ಅನುಭವ ಕ್ಷೇತ್ರ, ಎಂದೇ ಅರ್ಥ.

ಆತ್ಮಜ್ಞಾನದಿಂದಲೇ ನಮ್ಮ ಅವಿದ್ಯೆಯ ಅಂತ್ಯ. ಆತ್ಮಜ್ಞಾನಿಗೆ ತನ್ನ ಸ್ವರೂಪದ ಅರಿವು ಸಂಪೂರ್ಣವಾಗಿ, ಸತತವಾಗಿ ಇರುವುದರಿಂದ, ಅವನಿಗೆ ಯಾವ ಬಯಕೆ, ಕಾಮನೆಗಳೂ ಇರುವುದಿಲ್ಲ. ಅವನನ್ನು ಕುರಿತೇ ಶ್ರುತಿಯು 'ಪರ್ಯಾಪ್ತಕಾಮಿ' ಎಂದು ಹೇಳಿರುವುದು. ಆತ್ಮಕಾಮನೇ ಆಪ್ತಕಾಮನು. ಆತ್ಮತುಷ್ಟನು ಸುಖವನ್ನು ಬಯಸಿ ಅದನ್ನು ಪಡೆಯುವುದಕ್ಕೋಸ್ಕರ ಎಲ್ಲಿಯೂ ಹೋಗಬೇಕಾದದ್ದಿಲ್ಲ, ಯಾವ ಕರ್ಮವನ್ನೂ ಮಾಡಬೇಕಾದದ್ದಿಲ್ಲ.

ಆಸೆ ಆಕಾಂಕ್ಷೆಗಳನ್ನು ಅದುಮಿ, ಅವುಗಳ ಹುಟ್ಟಡಗಿಸುವುದನ್ನು ನಮ್ಮ ಶಾಸ್ತ್ರಗಳಲ್ಲಿ ವೈಭವೀಕರಿಸಿರುವುದೇ ನಮ್ಮ ದೇಶವು ಹಿಂದುಳಿಯುವುದಕ್ಕೆ ಕಾರಣ, ಎಂದು ಕೆಲವು ನಾಸ್ತಿಕರು ವಾದ ಮಾಡುತ್ತಾರೆ. ಅವರ ವಾದಗಳೂ ವಿಚಿತ್ರವಾಗಿವೆ. ಅವರ ದೃಷ್ಟಿಯಲ್ಲಿ ವೈರಾಗ್ಯವೆಂದರೆ ಒಂದು ವಿಧವಾದ ನಿರಾಶಾಭಾವ. ತನಗೆ ಸಿಗದ ಫಲ ಅಥವಾ ತಾನು ಬಯಸಿದ್ದನ್ನು ಪಡೆಯಲು ಅಸಮರ್ಥನಾದಾಗ ಬರುವ ಮಾನಸಿಕ ಪ್ರತಿಕ್ರಿಯೆ. ನಿಜವಾಗಿಯೂ ವೈರಾಗ್ಯವು ಬಯಸಿದ ವಸ್ತುಗಳಿಂದ ವಂಚಿತವಾದಾಗ ಉಂಟಾಗುವ ನಿರಾಶಾತ್ಮಕ ಮನೋಭಾವವಲ್ಲ. ಅಂತಹದನ್ನು ನಮ್ಮ ಋಷಿವರ್ಯರುಗಳು ಎಂದಿಗೂ ಮೆಚ್ಚುತ್ತಲೂ ಇರಲಿಲ್ಲ, ಅದನ್ನು ಸಾಧನೆಯ ಮಾರ್ಗವೆಂದು ಹೇಳುತ್ತಲೂ ಇರಲಿಲ್ಲ. ನೀತಿ ಕತೆಯ ನರಿಯು ಹತಾಶೆಯಿಂದ 'ದ್ರಾಕ್ಷಿಹಣ್ಣು ಹುಳಿ' ಎಂದು ಹಳಿದು ಹೋದದ್ದಕ್ಕೂ, ರೋಮ್‌ನಗರದ ದೊರೆ ನೀರೋ ಚಿನ್ನದ ತಟ್ಟೆಯಲ್ಲಿಟ್ಟಿದ್ದ ದ್ರಾಕ್ಷಿ ಗೊಂಚಲುಗಳನ್ನು 'ಅಷ್ಟು ರುಚಿಯಿಲ್ಲ' ಎಂದು ಪಕ್ಕಕ್ಕೆ ತಳ್ಳಿಹಾಕಿದ್ದಕ್ಕೂ ಬಹಳ ವ್ಯತ್ಯಾಸವಿದೆ. ಆತ್ಮಸಾಕ್ಷಾತ್ಕಾರದಿಂದ ಪರಮಾನಂದದ ಉತ್ತುಂಗ ಶಿಖರದಲ್ಲಿರುವ ಮಹಾಯೋಗಿಗೆ ಇಹಲೋಕದ ವಿಷಯ ಸುಖಗಳು ತುಚ್ಛವಾಗಿ ಕಾಣುವುದೇನೂ ಅತಿಶಯವಲ್ಲ. ಹೊಟ್ಟೆ ಬಿರಿಯುವಷ್ಟು ಉಂಡವನಿಗೆ ಮತ್ತೆ ತಿಂಡಿ ತಿನಿಸು ಕೊಟ್ಟರೆ ಅವನಿಗೆ ಅದರಲ್ಲಿ ಆಸೆ ಹುಟ್ಟೀತೇ ? ಆಗಿನ ಸ್ಥಿತಿಯಲ್ಲಿ ಆಹಾರದ ವಿಚಾರವಾಗಿ ಅವನು ಸಂಪೂರ್ಣ ತೃಪ್ತ. ಹಾಗೆಯೇ ಜ್ಞಾನಿಯು ಅತ್ಯುತ್ತಮ ಆನಂದವನ್ನನುಭವಿಸಿದ ಮೇಲೆ ಅವನ ಪಾಲಿಗೆ ಇವೆಲ್ಲವೂ ನೀರಸ. ಕೋಟ್ಯಾಧೀಶ್ವರನು ಭೋಜ್ಯ ಖಾದ್ಯ ಪದಾರ್ಥಗಳನ್ನು ತಿಂದು ತೇಗಲು ಬಯಸಿ ಬಡಬಗ್ಗರಿಗೆ ಅನ್ನದಾನ ಮಾಡುತ್ತಿರುವಲ್ಲಿಗೆ ಎಂದಿಗೂ ಹೋಗಲಾರ. ಇಹಲೋಕದ ಭೋಗಸುಖಗಳ ಸಂತೃಪ್ತಿ ಪರಿಮಿತ ಕಾಲದವರೆಗೆ ಇದ್ದೀತು. ಆದರೆ ಆತ್ಮಾನಂದವನ್ನು ಅನುಭವಿಸಿದ ಜ್ಞಾನಿಗೆ ಆನಂದವು ನಿರಂತರ, ಏಕೆಂದರೆ ಆತ್ಮಜ್ಞಾನವು ಒಂದು ಸಲ ಗೋಚರಿಸಿದರೆ ಅದು ಸರ್ವದಾ ಇರುವಂತಹದು.

ಈ ಶಾಶ್ವತ ಪರಮಸುಖವನ್ನು ಪಡೆಯುವ ಮಾರ್ಗವೆಂದರೆ ಇಹಲೋಕದ ಕ್ಷಣಿಕ ಸುಖವನ್ನು ಕೊಡುವ ಭೋಗಲಾಲಸೆಗಳ ತ್ಯಾಗ, ಎಂದು ನಮ್ಮ ಹಿಂದೂ

ತಾತ್ತ್ವಿಕರು ಹೇಳಿರುವುದು. ಅವರು ಪ್ರಶಂಸಿಸಿರುವುದು ಆಶಾರಾಹಿತ್ಯವನ್ನೇ ಹೊರತು ನಿರಾಶೆಯನ್ನಲ್ಲ. ಹೆಚ್ಚಿನ ಸುಖ, ಪರಮಾನಂದವನ್ನು ನಿರಂತರವಾಗಿ ಪಡೆಯಬೇಕಾದರೆ ಅಲ್ಪ ಮತ್ತು ಕ್ಷಣಿಕ ಸುಖಗಳನ್ನು ತ್ಯಜಿಸಲೇಬೇಕಾಗುತ್ತದೆ. ಆತ್ಯಂತಿಕವಾದ ಆ ಸುಖವು ದೊರೆತ ಮೇಲೆ ಇಹಲೋಕದ ಭೋಗ ಭಾಗ್ಯಗಳು ತುಚ್ಛವಾಗಿ ಕಾಣುವುದು ಸಹಜ. ಹುಚ್ಚೆದ್ದು ಕುಣಿಯುವ ಲೋಕದ ಆಸೆಗಳಿಗೆ ಕೊನೆ ಎಲ್ಲಿ? ಅವು ಒಂದಾದ ಮೇಲೊಂದು ಬರುತ್ತಲೇ ಇರುತ್ತವೆ. ಅದರ ಬದಲಿಗೆ ನನಗೆ ಬೇಕಾದದ್ದೆಲ್ಲವೂ ನನ್ನಲ್ಲಿ ಇದ್ದೇ ಇದೆ ಎಂಬ ಸಂತೃಪ್ತಿಯನ್ನು ಪಡೆಯುವುದು ಸಾವಿರ ಪಾಲಿಗೆ ಲೇಸು, ಅಲ್ಲವೇ ? ಆ ಸಂತೃಪ್ತಿಯೇ ವೈರಾಗ್ಯದ ಮೂಲ.

ಮಹಾತ್ಮರಾದ ಋಷಿಗಳು ಈ ಶ್ರುತಿಯಲ್ಲಿ ಹೇಳಿರುವುದೂ ಈ ಸಂತೃಪ್ತಿಯ ಮಾನಸಿಕ ಸ್ಥಿತಿಯನ್ನೇ. ಆತ್ಮಾನುಭವದ ಆನಂದದ ರುಚಿ ಕಂಡವನಿಗೆ ಇತರ ಭೋಗಗಳ ಅಲ್ಪ ಸುಖವು ತಪ್ಪಿಹೋಯಿತೆನ್ನುವ ಯಾವ ಸಂತಾಪವೂ ಇರದು. ಅಲ್ಲದೆ ಆತ್ಮದರ್ಶನದಿಂದ ಅವನ ಅವಿದ್ಯೆಯೂ ತೊಲಗಿರುತ್ತದೆ. ಅವಿದ್ಯೆ ಇಲ್ಲದವರಿಗೆ ಆಸೆಗಳೆಲ್ಲಿ ಬಂದಾವು ?

ಒಟ್ಟಿನಲ್ಲಿ ನಮ್ಮ ಆಸೆಗಳಿದ್ದಂತೆ ನಾವು ಯೋಚಿಸುತ್ತೇವೆ. ಯೋಚಿಸಿದಂತೆ ಕರ್ಮಗಳನ್ನು ಮಾಡುತ್ತೇವೆ. ನಮ್ಮ ಕರ್ಮಗಳನ್ನು ಅನುಸರಿಸಿ ಫಲ. ಕರ್ಮಫಲವನ್ನನುಭವಿಸಲು ತಕ್ಕಂತೆ ನಮ್ಮ ಹುಟ್ಟು ಹಾಗೂ ರೂಪ. ಪುನಃ ಕರ್ಮ. ಇದೇ ಒಂದು ವಿಷಚಕ್ರ. ಈ ವಿಷಚಕ್ರದಿಂದ ಪಾರಾಗಬೇಕಾದರೆ ನಾವು ದೇಹ, ಮನಸ್ಸು, ಬುದ್ಧಿಗಳೊಡನೆ ಮಾಡಿಕೊಂಡಿರುವ ತಾದಾತ್ಮ್ಯವನ್ನು ಬಿಟ್ಟು ನಮ್ಮ ನಿಜಸ್ವರೂಪವನ್ನರಿಯುವುದು. ಆಗ ನಮ್ಮ ಆಸೆಗಳೆಲ್ಲಾ ತಾವಾಗಿ ತೊಲಗಿ ಹೋಗುವುವು. ಆಸೆಗಳಿಲ್ಲದ ಮೇಲೆ ಕರ್ಮವಿಲ್ಲ, ಪುನರ್ಜನ್ಮವಿಲ್ಲ.

## ಆತ್ಮಜ್ಞಾನವು ಯಾರಿಗೆ ಲಭ್ಯ

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯ-**
**ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥** ೩

**ಅಯಂ ಆತ್ಮಾ** – ಈ ಆತ್ಮನು, **ಪ್ರವಚನೇನ** – ವೇದಶಾಸ್ತ್ರಗಳ ವಿವರಣೆಯಿಂದ, **ನ ಲಭ್ಯಃ** – ಲಭ್ಯನಲ್ಲ, **ಮೇಧಯಾ** – ಶಾಸ್ತ್ರಗ್ರಂಥಗಳ ಅರ್ಥವನ್ನು ನೆನಪಿಟ್ಟುಕೊಳ್ಳುವ ಶಕ್ತಿಯಿಂದಲೂ, **ನ** – ಲಭ್ಯನಲ್ಲ, **ನ ಬಹುನಾ ಶ್ರುತೇನ** – ಬಹಳವಾಗಿ ಶ್ರವಣ ಮಾಡುವುದರಿಂದಲೂ ಲಭ್ಯನಲ್ಲ, **ಏಷಃ** – ಈ ಸಾಧಕನು, **ಯಂ ಏವ** – ಯಾವ ಪರಮಾತ್ಮನನ್ನೇ, **ವೃಣುತೇ** – ಪಡೆಯಲಿಚ್ಛಿಸುವನೋ, **ತೇನ** – ಆ ಬಯಕೆಯಿಂದ, **ಲಭ್ಯಃ** – ಲಭಿಸುವನು, **ಏಷಃ ಆತ್ಮಾ** – ಈ ಆತ್ಮನು,

(ಅವನಿಗೆ) **ಸ್ವಾಂ** – ತನ್ನ, **ತನುಂ** – ಶರೀರವನ್ನು, **ವಿವೃಣುತೇ** – ಪ್ರಕಾಶಪಡಿಸುತ್ತಾನೆ.

(೩) ಈ ಆತ್ಮನು ಪ್ರವಚನದಿಂದಾಗಲಿ, ಮೇಧಾಶಕ್ತಿಯಿಂದಾಗಲಿ, ಬಹುವಾಗಿ ಶ್ರವಣ ಮಾಡುವುದರಿಂದಾಗಲಿ ಸಿಕ್ಕುವವನಲ್ಲ. ಯಾವನು ಆ ಪರಮಾತ್ಮನನ್ನೇ ಪಡೆಯಬೇಕೆಂದು ಬಯಸುವನೋ ಅಂತಹ ತೀವ್ರ ಬಯಕೆಯಿಂದ ಅವನು ಲಭ್ಯನು. ಅಂತಹವನಿಗೆ ಆತ್ಮನು ತನ್ನ ನಿಜಸ್ವರೂಪವನ್ನು ಪ್ರಕಾಶಪಡಿಸುವನು.

ಹುಟ್ಟುಸಾವುಗಳ ಕಪಿಮುಷ್ಟಿಯಿಂದ ಮುಕ್ತನಾಗುವುದಕ್ಕೆ ಆತ್ಮಸಾಕ್ಷಾತ್ಕಾರವೇ ಏಕೈಕ ಉಪಾಯವೆಂದಮೇಲೆ ಅದನ್ನು ಪಡೆಯುವ ಬಗೆ ಹೇಗೆಂಬ ಯೋಚನೆ ಸಾಧಕನಿಗೆ ಬರುವುದು ಸಹಜ. ಅವನಿಗೆ ಪ್ರಥಮತಃ ತೋರುವುದು ಶಾಸ್ತ್ರಾಧ್ಯಯನ. ಬುದ್ಧಿ ಮತ್ತು ಅದರ ಸಹಜ ಪ್ರವೃತ್ತಿಗಳಿಂದ ಲಭ್ಯವಾಗುವ ಯಾವ ಮಾರ್ಗದಿಂದಲೂ ಆತ್ಮಜ್ಞಾನ ಉಂಟಾಗುವುದಿಲ್ಲವೆಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ. ಶಾಸ್ತ್ರಗಳನ್ನು ಆಳವಾಗಿ ಅಧ್ಯಯನ ಮಾಡಿ ಪ್ರವಚನಗಳನ್ನು ನೀಡಬಲ್ಲ ಯಾವ ಪಂಡಿತನೂ ತಾನು ಆತ್ಮಜ್ಞಾನಿಯೆಂದು ಹೆಮ್ಮೆಪಡುವಂತಿಲ್ಲ.

ಹಾಗಿಲ್ಲದಿದ್ದರೆ ವೇದಗಳನ್ನು ಕಂಠಪಾಠಮಾಡಿ ನಿರರ್ಗಳವಾಗಿ ಪುನರುಚ್ಚರಿಸುವ ಸಾಮರ್ಥ್ಯವನ್ನು ಕರಗತ ಮಾಡಿಕೊಂಡರೆ ಆತ್ಮಪ್ರಾಪ್ತಿ ಆಗಬಹುದೇ ಎಂದರೆ, ಅದೂ ಇಲ್ಲ ಎನ್ನುತ್ತದೆ ಶ್ರುತಿ. ಹಿಂದಿನ ಕಾಲದಲ್ಲಿ ಮೂರು ವೇದಗಳನ್ನು ಕಂಠಪಾಠಮಾಡಿ ತಪ್ಪಿಲ್ಲದೆ ಒಪ್ಪಿಸುತ್ತಿದ್ದ 'ತ್ರಿವೇದಿ'ಗಳೆಂದು ಬಿರುದಾಂಕಿತರಾದವರೂ, ನಾಲ್ಕು ವೇದಗಳಲ್ಲೂ ಪ್ರವೀಣರಾಗಿದ್ದು 'ಚತುರ್ವೇದಿ'ಗಳೆಂದು ಹೆಸರು ಪಡೆದವರೂ ಇರುತ್ತಿದ್ದರು. ಈಗ ಅಂತಹವರು ಅಪರೂಪ. 'ತ್ರಿವೇದಿ', 'ಚತುರ್ವೇದಿ' ಎಂಬ ಮಾತುಗಳು ಮನೆತನದ ಸಂಕೇತವಾಗಿ ಮಾತ್ರ ಉಳಿದಿವೆ. ಆದರೆ ಈ ರೀತಿಯ ಮೇಧಾಶಕ್ತಿಯಿಂದಲೂ ಆತ್ಮನನ್ನು ಅರಿಯುವಂತಿಲ್ಲ.

ಕೆಲವು ಸಾಧಕರು ಶಾಸ್ತ್ರಪ್ರವಚನಗಳು ನಡೆಯುವ ಕಡೆಗಳಿಗೆಲ್ಲಾ ಬೇಸರ ಪಡದೆ ಹೋಗಿ ಅವನ್ನು ಕೇಳುತ್ತಲೇ ಇರುತ್ತಾರೆ. ಪ್ರವಚನಗಳನ್ನು ಶ್ರವಣಮಾಡುವುದರಿಂದಲೇ ಆತ್ಮಜ್ಞಾನವಾಗುತ್ತದೆ ಎಂದು ಅವರು ನಂಬಿರುತ್ತಾರೆ. ಅದು ಅಸಾಧ್ಯವೆಂದು ಶ್ರುತಿಯು ಇಲ್ಲಿ ಹೇಳುತ್ತಿದೆ.

ಶಾಸ್ತ್ರಗಳ ಅಧ್ಯಯನ, ಕಂಠಪಾಠ, ಶ್ರವಣ – ಇವುಗಳಾವುದರಿಂದಲೂ ಆತ್ಮಪ್ರಾಪ್ತಿಯಾಗದು, ಎಂದ ಮೇಲೆ ಅದನ್ನು ಅರಿಯುವ ಬಗೆಯೇ ಇಲ್ಲವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆ ಪ್ರಶ್ನೆಗೆ ಈ ಮಂತ್ರದ ಉತ್ತರಾರ್ಧವು ಉತ್ತರ ಕೊಡುತ್ತದೆ.

ಯಾರು ಆತ್ಮಜ್ಞಾನಕ್ಕಾಗಿ ಸದಾ ಹಂಬಲಿಸುತ್ತಾರೋ, ಯಾರು ಹೃದಯಪೂರ್ವಕವಾಗಿ ತಮ್ಮ ಜೀವನದ ಸರ್ವಸ್ವವನ್ನೂ ಮುಡಿಪಾಗಿಟ್ಟು ಆತ್ಮಪ್ರಾಪ್ತಿಯೊಂದನ್ನೇ ತೀವ್ರವಾಗಿ ಬಯಸುತ್ತಾರೋ ಅಂತಹವರಿಗೆ ಮಾತ್ರ ಆತ್ಮವು ತನ್ನನ್ನು ತಾನೇ ತೋರಿಕೊಳ್ಳುತ್ತದೆ, ಎಂದು ಶ್ರುತಿಯು ವಿವರಿಸುತ್ತದೆ.

ಈ ಮಂತ್ರದ ಉತ್ತರಾರ್ಧವನ್ನು ಎರಡು ರೀತಿಯಾಗಿ ಅರ್ಥೈಸಬಹುದು. ಅದ್ವೈತ ಮತ್ತು ದ್ವೈತ ವಾದಗಳನ್ನು ಮಂಡಿಸಿರುವ ಇಬ್ಬರು ಆಚಾರ್ಯರೂ ಒಂದೊಂದು ರೀತಿಯ ಅರ್ಥವನ್ನು ಮಾಡಿದ್ದಾರೆ. ಇಲ್ಲಿ ಬಂದಿರುವ 'ಯಂ' ಮತ್ತು 'ಏಷ' ಎಂಬ ಎರಡು ಪದಗಳನ್ನು ಮೇಲ್ನೋಟಕ್ಕೆ ಪರಸ್ಪರ ವಿರೋಧಾರ್ಥಗಳನ್ನು ಕೊಡುವಂತೆ ಅರ್ಥೈಸಬಹುದು.

ಅದ್ವೈತವಾದದ ಪ್ರಕಾರ 'ಯಮೇವೈಷ' ಎನ್ನುವುದಕ್ಕೆ ಯಾವ ಆತ್ಮ (ಪರಮಾತ್ಮ) ನನ್ನೇ ಈತನು (ಸಾಧಕನು) ಬಯಸುವನೋ ಅವನಿಗೆ, ಎಂದು ಅರ್ಥ ಮಾಡುತ್ತಾರೆ. ದ್ವೈತವಾದದ ಪ್ರಕಾರ ಯಾವ ಈತನನ್ನೇ (ಸಾಧಕನನ್ನೇ) ಪರಮಾತ್ಮನು ಬಯಸುವನೋ (ಆಯ್ದುಕೊಳ್ಳುವನೋ) ಅವನಿಗೆ, ಎಂದು ಅರ್ಥಮಾಡುತ್ತಾರೆ. ಅಂತಹವನಿಗೆ ಆತ್ಮನು ತಾನಾಗಿ ತನ್ನ ಸ್ವರೂಪವನ್ನು ತೋರಿಸಿಕೊಳ್ಳುವನು, ಎಂದು ಅಭಿಪ್ರಾಯ. ದ್ವೈತವಾದದಲ್ಲಿ ಪರಮಾತ್ಮನ ಅನುಗ್ರಹಕ್ಕೆ ಮಹತ್ವ ಕೊಟ್ಟಿರುವುದರಿಂದ ಪರಮಾತ್ಮನೇ ಅವನನ್ನು ಆರಿಸಿಕೊಳ್ಳುತ್ತಾನೆ ಎಂಬ ಅರ್ಥ ಹೊರಡಿಸಿದ್ದಾರೆ. ಆ ವಾದಗಳು ಏನಾದರೂ ಇರಲಿ. ಒಟ್ಟಿನಲ್ಲಿ ಶುದ್ಧಮನಸ್ಸಿನಿಂದ, ಹೃದಯಪೂರ್ವಕವಾಗಿ ಯಾರು ಪರಮಾತ್ಮನನ್ನು ತದೇಕಚಿತ್ತದಿಂದ ಬಯಸುತ್ತಾರೋ ಅಂತಹವರನ್ನು ಪರಮಾತ್ಮನೂ ಅನುಗ್ರಹಿಸುತ್ತಾನೆ. ಅವನಿಗೆ ಆತ್ಮಪ್ರಾಪ್ತಿ ಆಗೇ ಆಗುವುದು.

ಶ್ರೀ ಶಂಕರರ ಸಿದ್ಧಾಂತದಲ್ಲಿ ಮನುಷ್ಯನೇ ತನ್ನ ಸ್ವಂತ ಸಾಧನೆಯಿಂದ ದೈವತ್ವದ ಮಟ್ಟಕ್ಕೆ ಏರಿ ಪರಮಾತ್ಮನಲ್ಲಿ ಒಂದಾಗುತ್ತಾನೆ. ಶ್ರೀ ರಾಮಾನುಜ ಮತ್ತು ಶ್ರೀ ಮಧ್ವಾಚಾರ್ಯರುಗಳ ಸಿದ್ಧಾಂತಗಳ ಪ್ರಕಾರ ಪರಮಾತ್ಮನೇ ಮಾನವನ ಮಟ್ಟಕ್ಕೆ ಇಳಿದು ಬಂದು ಅವನ ಭಕ್ತರನ್ನು ಅನುಗ್ರಹಿಸಿ ಉದ್ಧಾರಮಾಡುತ್ತಾನೆ. ಈ ಎರಡು ಸಿದ್ಧಾಂತಗಳಲ್ಲೂ ಸಾಧನಾಕ್ರಮವೇ ಒಂದೇ.

ವಿಚಾರ ಮಾಡಿ ನೋಡಿದರೆ, ನದಿಯೇ ಸಮುದ್ರಕ್ಕೆ ಹೋಗಿ ಸೇರಿದರೇನು ಅಥವಾ ಸಮುದ್ರವೇ ನದಿಯನ್ನು ತನ್ನ ಬಳಿಗೆ ಬರಮಾಡಿಕೊಂಡರೇನು ? ಪರಿಣಾಮದಲ್ಲಿ ಎರಡೂ ಒಂದೇ. ಸಮುದ್ರವನ್ನು ಸೇರಿದ ಬಳಿಕ ನದಿಯು ತನ್ನ ಪೃಥಕ್ತ್ವವನ್ನು ಕಳೆದುಕೊಂಡು ಸಮುದ್ರದಲ್ಲಿ ಒಂದಾಗುತ್ತದೆ. ಈ ಉಪಮೆಯನ್ನು ಶ್ರುತಿಯೇ ಮುಂದೆ ಹೇಳಿದೆ.

**ನಾಯಮಾತ್ಮಾ ಬಲಹೀನೇನ ಲಭ್ಯೋ**
**ನ ಚ ಪ್ರಮಾದಾತ್ತಪಸೋ ವಾಪ್ಯಲಿಂಗಾತ್ ।**
**ಏತೈರುಪಾಯೈರ್ಯತತೇ ಯಸ್ತು ವಿದ್ವಾಂ—**
**ಸ್ತಸ್ಯೈಷ ಆತ್ಮಾ ವಿಶತೇ ಬ್ರಹ್ಮ ಧಾಮ ॥** ೪

**ಅಯಂ ಆತ್ಮಾ** — ಈ ಆತ್ಮನು, **ಬಲಹೀನೇನ** — ಬಲವಿಲ್ಲದವನಿಗೆ, **ನ ಲಭ್ಯಃ** — ಸಿಕ್ಕುವವನಲ್ಲ, **ಪ್ರಮಾದಾತ್** — ವಿಷಯಾಸಕ್ತಿಯಿಂದುಂಟಾಗುವ ಪ್ರಮಾದದಿಂದಾಗಲಿ, **ವಾ** — ಅಥವಾ, **ಅಲಿಂಗಾತ್** — ಸನ್ಯಾಸರಹಿತವಾದ, **ತಪಸಃ**

**ಅಪಿ** – ತಪಸ್ಸಿನಿಂದಾಗಲಿ, **ನ** – ಲಭ್ಯನಲ್ಲ, **ತು** – ಆದರೆ, **ಏತೈಃ ಉಪಾಯೈಃ** – ಈ ಸಾಧನೆಗಳಿಂದ, **ಯಃ** – ಯಾವ, **ವಿದ್ವಾನ್** – ವಿದ್ವಾಂಸನು, **ಯತತೇ** – ಪ್ರಯತ್ನಪಡುವನೋ, **ತಸ್ಯ** – ಅವನ, **ಏಷಃ ಆತ್ಮಾ** – ಈ ಆತ್ಮನು, **ಬ್ರಹ್ಮಧಾಮ** – ಬ್ರಹ್ಮಧಾಮವನ್ನು, **ವಿಶತೇ** – ಪ್ರವೇಶಿಸುತ್ತಾನೆ.

(೪) ಈ ಆತ್ಮನು ಪ್ರಬಲವಾದ ಆತ್ಮನಿಷ್ಠೆ ಇಲ್ಲದವನಿಗೂ ಲಭ್ಯನಲ್ಲ. ವಿಷಯಾಸಕ್ತಿಗಳಿಂದುಂಟಾಗುವ ಪ್ರಮಾದದಿಂದಾಗಲಿ, ವೈರಾಗ್ಯವಿಲ್ಲದ ತಪಸ್ಸಿನಿಂದಾಗಲಿ ಲಭ್ಯನಲ್ಲ. ಆದರೆ ಬಲ, ಅಪ್ರಮಾದ, ಸನ್ಯಾಸ, ಜ್ಞಾನ – ಈ ಉಪಾಯಗಳಿಂದ ಪ್ರಯತ್ನಿಸುವ ವಿವೇಕಿಯ ಶುದ್ಧ ಆತ್ಮನು ಬ್ರಹ್ಮಧಾಮವನ್ನು ಪ್ರವೇಶಿಸುವನು.

ಯಾವ ಯಾವ ಪ್ರಯತ್ನಗಳಿಂದ ಆತ್ಮವು ಸಿಗುವುದಿಲ್ಲ ಎಂದು ಹೇಳುವ ನಿಷೇಧರೂಪದ ಧಾಟಿಯಲ್ಲೇ ಶ್ರುತಿಯು ಇನ್ನೂ ಮುಂದುವರಿಸಿದೆ. ಹಿಂದಿನ ಮಂತ್ರದಲ್ಲಿ ಸಾಮಾನ್ಯವಾಗಿ ಆತ್ಮಪ್ರಾಪ್ತಿಯ ಸಾಧನಾಮಾರ್ಗಗಳೆಂದು ನಂಬಿರುವ ಪ್ರವಚನ, ಶಾಸ್ತ್ರಪಾಂಡಿತ್ಯ ಮತ್ತು ಶ್ರವಣಾದಿಗಳಿಂದ ಅದು ದೊರೆಯದು ಎಂದು ತಿಳಿಸಿದ್ದಾಯಿತು. ಈಗ ಈ ಮಂತ್ರದಲ್ಲಿ ಆತ್ಮನು ಲಭ್ಯವಾಗುವನೆಂದು ನಂಬಿರುವ ಇನ್ನೂ ಕೆಲವು ತಪ್ಪುಗ್ರಹಿಕೆಗಳನ್ನು ಅಲ್ಲಗಳೆದಿದೆ.

ಆತ್ಮನಿಷ್ಠೆಯ ಬಲವಿಲ್ಲದೆ ಇರುವವನಿಗೆ ಆತ್ಮವು ದೊರಕದು. ಸಮಾಜದಲ್ಲಿ ಅಪ್ರಯೋಜಕನಾಗಿ, ಜೀವನದಲ್ಲಿ ಯಾವ ಪ್ರಗತಿಯನ್ನೂ ಕಾಣದೆ, ನಿರಾಶೆಯಿಂದ ತುಂಬಿರುವ ಹುಂಬನೇ ಸಂನ್ಯಾಸ ತಪಸ್ಸುಗಳನ್ನು ಕೈಕೊಳ್ಳುತ್ತಾನೆಂಬ ತಪ್ಪುಭಾವನೆ ಕೆಲವರಲ್ಲಿದೆ. ಅಂತಹ ಸತ್ವಹೀನರಿಗೆ ಆತ್ಮಜ್ಞಾನದ ಸುಳಿವು ಕೂಡ ಸಿಗದು. ಹಾಗೆಯೇ ಲೋಕದ ವಿಷಯಗಳಲ್ಲಿ ಹೆಚ್ಚು ಆಸಕ್ತಿ ಇರುವವನಿಗೂ ಆತ್ಮಜ್ಞಾನವು ಅಪ್ರಾಪ್ಯ. ವೈರಾಗ್ಯ, ಸಂನ್ಯಾಸಗಳಿಲ್ಲದೆ ಶಾಸ್ತ್ರಗಳಲ್ಲಿ ಮಾತ್ರ ಜ್ಞಾನ ಸಂಪಾದಿಸಿರುವ ಪಂಡಿತನಿಗೂ ಆತ್ಮವು ಲಭ್ಯವಲ್ಲ. ಅರ್ಥವಿಲ್ಲದ ದೇಹದಂಡನೆ, ಕಠಿಣ ತಪಸ್ಸುಗಳಿಂದಲೂ ಆತ್ಮಜ್ಞಾನವು ಸಿದ್ಧಿಸದು. ಹೊರಗಿನ ಆಡಂಬರ, ವೇಷಭೂಷಣಗಳಿದ್ದ ಮಾತ್ರಕ್ಕೆ ಯಾವನೂ ಸಂನ್ಯಾಸಿಯಾಗಲಾರ.

'ಬಲಹೀನ' ಎಂದರೆ ಇಲ್ಲಿ ಆತ್ಮನಿಷ್ಠೆಯ ಧೈರ್ಯ, ಸ್ಥೈರ್ಯ ಇಲ್ಲದವನು, ಎಂದು. ಸಾಕಾದಷ್ಟು ಶ್ರದ್ಧೆ ಹಾಗೂ ಚಿತ್ತಸ್ಥೈರ್ಯ ಇಲ್ಲದವನು ಮನಸ್ಸು ಬುದ್ಧಿಗಳಲ್ಲೂ ಬಲಹೀನನಾಗಿಯೇ ಇರುತ್ತಾನೆ. ಅಂತಹವನಿಗೆ ಆಧ್ಯಾತ್ಮಿಕ ಸಿದ್ಧಿಯು ಅಸಾಧ್ಯ. ಹಾಗೆಯೇ ಜ್ಞಾನವೈರಾಗ್ಯಗಳಿಲ್ಲದೆ ಕೇವಲ ದೇಹ ದಂಡನೆ ಮಾಡುವ ತಪಶ್ಚರ್ಯೆಯಿಂದಲೂ ಆತ್ಮಪ್ರಾಪ್ತಿಯಾಗದು.

**ನ ಚ ಪ್ರಮಾದಾತ್ತಪಸೋ ವಾಪ್ಯಲಿಂಗಾತ್ –**

ಒಬ್ಬ ಮಹಾತ್ಮನನ್ನಾಗಲಿ, ಶಾಸ್ತ್ರಪಾರಂಗತನಾದ ಗುರುವನ್ನಾಗಲಿ ಭೇಟಿ ಮಾಡಿದ ಕೂಡಲೇ ಅಥವಾ ಒಂದು ಅದ್ಭುತವಾದ ಪ್ರವಚನವನ್ನು ಕೇಳಿದ ಕೂಡಲೇ ಯಾರೊಬ್ಬನಿಗಾದರೂ ಹುಮ್ಮಸ್ಸು, ಉತ್ಸಾಹಗಳು ಉಕ್ಕಿ, ಆ ಆವೇಶದಲ್ಲಿ ಅವನು ಸಂನ್ಯಾಸ ಸ್ವೀಕಾರ ಮಾಡುವ ನಿರ್ಧಾರವನ್ನು ತಕ್ಷಣ ಕೈಕೊಳ್ಳಬಹುದು. ಆದರೆ ಈ

ರೀತಿಯ ಆಧ್ಯಾತ್ಮಿಕ ಉತ್ಸಾಹವು ಕೇವಲ ತಾತ್ಕಾಲಿಕವಾದದ್ದು. ಅದು ಬಹಳ ಕಾಲ ನಿಲ್ಲಲಾರದು. ಸ್ವಲ್ಪಕಾಲದಲ್ಲೇ ಅವನ ಉತ್ಸಾಹದ ಕಾವು ಆರಿ ತಣ್ಣಗಾಗಿ ಆಶಾಭಂಗವಾಗುವುದು. ಸತಿ, ಸುತ, ಆಲಯ ಮುಂತಾದವುಗಳಲ್ಲಿ ತೀವ್ರ ಲೋಕಾಸಕ್ತಿ ಇರುವವರೂ ಒಂದಲ್ಲ ಒಂದು ಪ್ರಮಾದಕ್ಕೆ ಸಿಕ್ಕಿಕೊಂಡು ಆತ್ಮಜ್ಞಾನಕ್ಕೆ ಇರಬೇಕಾದ ಅರ್ಹತೆಯನ್ನು ಕಳೆದುಕೊಳ್ಳುವರು.

ಕೆಲವರು ದಿನಗಟ್ಟಲೆ ಕಟ್ಟುನಿಟ್ಟಿನ ಉಪವಾಸ ವ್ರತಗಳನ್ನೂ, ಜಾಗರಣೆಗಳನ್ನೂ ಮಾಡುವರು. ಮತ್ತೆ ಕೆಲವು ಮಂದಿ ಪುಣ್ಯಕ್ಷೇತ್ರಗಳಿಗೆ ಬಹಳ ಪ್ರಯಾಸದಿಂದ ಪ್ರಯಾಣ ಮಾಡಿ ದೀರ್ಘಕಾಲದ ತೀರ್ಥಯಾತ್ರೆಗಳನ್ನು ಮಾಡುವರು. ಇನ್ನು ಕೆಲವರು ಮುಳ್ಳಿನ ಹಾಸಿಗೆಯ ಮೇಲೆ ಮಲಗುವುದು, ಪೂಜಾ ಕೊಠಡಿಯಲ್ಲಿ ಪ್ರಾಣಸ್ತಂಭನ ಮಾಡುವುದು ಮುಂತಾದ ಕಠಿಣ ದೇಹದಂಡನಾ ಕ್ರಿಯೆಗಳಲ್ಲಿ ತೊಡಗುವರು. ಇವುಗಳಿಂದ ಬಹುಬೇಗ ಆಧ್ಯಾತ್ಮಿಕ ಸಾಧನೆ, ಪ್ರಗತಿಗಳು ದೊರಕುವುವೆಂದು ಅವರು ನಂಬಿರುತ್ತಾರೆ. ಇಂತಹ ತಂತ್ರಗಳಿಂದ ಆಧ್ಯಾತ್ಮ ಪ್ರಗತಿಯು ಖಂಡಿತ ಸಾಧ್ಯವಾಗುವುದಿಲ್ಲವೆಂದು ಶ್ರುತಿಯು ಹೇಳುತ್ತಿದೆ. ಪರಮಾರ್ಥವನ್ನು ಪಡೆಯಲು ಅಡ್ಡದಾರಿಗಳಾಗಲಿ, ಕ್ಷಿಪ್ರ ತಂತ್ರವಿಧಾನಗಳಾಗಲಿ ಇಲ್ಲವೇ ಇಲ್ಲ.

**ಅಲಿಂಗಾತ್ –**

'ಲಿಂಗ' ವೆಂದರೆ ಸಂನ್ಯಾಸ. ವೈರಾಗ್ಯವಿಲ್ಲದ ಜ್ಞಾನದಿಂದಲೂ ಆತ್ಮನು ಸಿಗುವವನಲ್ಲ ಎಂದರ್ಥ. 'ಲಿಂಗ' ಎನ್ನುವುದಕ್ಕೆ ಸಂಕೇತ, ಲಾಂಛನ ಎಂಬ ಅರ್ಥವೂ ಇದೆ. ಯಾವುದನ್ನು ನೋಡಿದರೆ ಸುಸಂಸ್ಕೃತವಾದ ಬುದ್ಧಿಗೆ ಮತ್ತೊಂದು ವಸ್ತುವಿನ ನೆನಪು ಉಂಟಾಗುತ್ತದೆಯೋ ಅದು. ಉದಾಹರಣೆಗೆ, ದೂರದಲ್ಲಿ ಬೆಟ್ಟದ ಮೇಲೆ ಹೊಗೆ ಕಂಡರೆ, ಅಲ್ಲಿ ಬೆಂಕಿ ಇರಬೇಕೆಂಬ ಅರಿವು ನಮ್ಮಲ್ಲಿ ಮೂಡುತ್ತದೆ. ಇಲ್ಲಿ ಹೊಗೆಯು ಬೆಂಕಿಯ ಇರುವಿಕೆಗೆ 'ಲಿಂಗ'. ಅದೇ ರೀತಿ 'ಶಿವಲಿಂಗ' ಎಂದರೆ ಯಾವ ಒಂದು ಸಂಕೇತವನ್ನು ನೋಡಿದಾಗ ನಮ್ಮ ಮನಸ್ಸಿಗೆ ಆ ಕೈಲಾಸಪತಿಯ ಸ್ಮರಣೆಯು ಮೂಡಿಬರುವುದೋ ಅದು, ಎಂದರ್ಥ. ಶ್ರುತಿಯು 'ಲಿಂಗ' ಎಂಬ ಶಬ್ದಕ್ಕೆ ಅತ್ಯಂತ ವಿಶಾಲವಾದ ಅರ್ಥವನ್ನು ಕೊಟ್ಟಿದೆ. ಇಲ್ಲವಾದರೆ, ಕಾವಿಬಟ್ಟೆ ಇಲ್ಲದ, ಕೇಶಮುಂಡನವಿಲ್ಲದ, ದಂಡಕಮಂಡಲುಗಳನ್ನು ಹಿಡಿಯದ ತಪಶ್ಚರ್ಯೆಯಿಂದಲೂ ಬ್ರಹ್ಮವು ಸಿಗುವುದಿಲ್ಲ ಎಂಬ ಅಪಾರ್ಥ ಮಾಡಬೇಕಾಗುತ್ತದೆ. ಕೇವಲ ಕಾವಿಬಟ್ಟೆಯನ್ನು ಧರಿಸುವುದರಿಂದಾಗಲಿ, ಕೇಶ ಮುಂಡನದಿಂದಾಗಲಿ ಯಾರೂ ಸಂನ್ಯಾಸತ್ವದ ಪಟ್ಟವನ್ನು ಕೇಳುವಂತಿಲ್ಲ.

ಆದ್ದರಿಂದ ಇಲ್ಲಿ 'ಲಿಂಗ'ವೆಂದರೆ ಸಂನ್ಯಾಸಿಯು ಧರಿಸುವಂತಹ ಬಟ್ಟೆಯ ಬಣ್ಣವಲ್ಲ, ಮುಂಡನವಾದ ಅವನ ಮಂಡೆಯಲ್ಲ, ಕೈಯಲ್ಲಿ ಹಿಡಿಯುವ ದಂಡ ಕಮಂಡಲುಗಳ ಲಾಂಛನವಲ್ಲ. ಅನೇಕರು ತಿಳಿದಿರುವಂತೆ ಅವೇ ಸಂನ್ಯಾಸಿಯ ಲಕ್ಷಣಗಳಲ್ಲ. ನಮ್ಮ ಆರ್ಷೇಯ ಋಷಿಗಳು ಸಾಧಕನಿಗಿರಬೇಕಾಗಿದ್ದ ಮನಸ್ಸು

ಬುದ್ಧಿಗಳ ಸ್ಥಿತಿ, ಗುಣಮಟ್ಟ – ಇವುಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿದ್ದರೇ ವಿನಹ ಅವನ ಬಾಹ್ಯ ವೇಷ ಭೂಷಣಗಳಿಗಲ್ಲ. ಅವನಲ್ಲಿರಬೇಕಾದದ್ದು ಮನಸ್ಸಿನ ವೈರಾಗ್ಯ ಭಾವವೇ ಹೊರತು ತಾನು ಸುಲಭವಾಗಿ ಧರಿಸಬಹುದಾಗಿದ್ದ ಉಡುಪು ಅಥವಾ ಬಾಹ್ಯಚಿಹ್ನೆಗಳಲ್ಲ.

ಈಗಿನ ಕಾಲದಲ್ಲಿ ಕೆಲವು ಯುವಕರಾದರೂ ಸೂಕ್ಷ್ಮಮತಿಗಳು, ವಿವೇಚನಾಶಾಲಿಗಳು ಮತ್ತು ವಿಚಾರಪರರು ಆಗಿರುತ್ತಾರೆ. ಅವರಿಗೆ ಸಂಯಮ ಮತ್ತು ಶಿಸ್ತುಗಳಿಂದ ನಡೆಸುವ ಜೀವನಕ್ರಮವು ಅಭ್ಯಾಸವಾಗಿರುತ್ತದೆ. ಉದಾತ್ತ ಧ್ಯೇಯಗಳ ಕಡೆಗೆ ಸಾಗುವ ಮನೋದಾರ್ಢ್ಯ ಮೂಡಿರುತ್ತದೆ. ಅಂತಹ ಜಾಗೃತರಾದ ವಿವೇಕಿಗಳು ಮತ್ತೂ ಹೆಚ್ಚಿನ ಸ್ವಾರ್ಥತ್ಯಾಗಬುದ್ಧಿ, ಮನಶ್ಶುದ್ಧಿ ಮತ್ತು ಇಂದ್ರಿಯ ಸಂಯಮಗಳನ್ನು ಪಡೆಯಲು ಸಂನ್ಯಾಸವನ್ನು ಸ್ವೀಕರಿಸಿದರೆ ಆಗ ಅವರು ಆತ್ಮಜ್ಞಾನಿಗಳಾಗಲು ಸಮರ್ಥರಾಗುವರು. ಅಂತಹವರಿಗೆ ಸಂನ್ಯಾಸತ್ವದ ಪೂರ್ಣಲಾಭ ದೊರೆಯುವುದು.

ಆದ್ದರಿಂದ ಇಲ್ಲಿ 'ಲಿಂಗ' ಎನ್ನುವುದಕ್ಕೆ ಬಾಹ್ಯದಲ್ಲಿ ಕಾಣುವ ಲಾಂಛನವೆಂದು ಅರ್ಥ ಮಾಡುವಂತಿಲ್ಲ. ಏಕೆಂದರೆ ಈಗಿನ ಕಾಲದಲ್ಲಿ ಸಂನ್ಯಾಸಿಯ ಹಾಗೆ ಆಡಂಬರದ ವೇಷಭೂಷಣ ಧರಿಸಿರುವ ಎಷ್ಟೋ ಮಂದಿ ಮರೆಯಲ್ಲಿ ಪ್ರಾಣಿಗಳಿಗಿಂತ ಕೀಳಾಗಿ ವರ್ತಿಸುವವರಿದ್ದಾರೆ.

ಹಿಂದಿನ ಮಂತ್ರದಂತೆ ಇದರಲ್ಲಿಯೂ ಅರ್ಥವಿಲ್ಲದ ಪದ್ಧತಿಗಳನ್ನೂ, ಅಡ್ಡದಾರಿಗಳನ್ನೂ ಅಲ್ಲಗಳೆಯುವುದಲ್ಲದೆ, ಆತ್ಮಜ್ಞಾನಕ್ಕೆ ಯೋಗ್ಯವಾದ ಮಾರ್ಗ ಯಾವುದೆಂದು ಶ್ರುತಿಯು ಅತ್ಯಂತ ಕಾರುಣ್ಯದಿಂದ ನಮಗೆ ತಿಳಿಸುತ್ತಿದೆ. ಅಲ್ಲದೆ ದೇಹ ಮನಸ್ಸು ಬುದ್ಧಿಗಳನ್ನು ಸುಸ್ಥಿತಿಯಲ್ಲಿಟ್ಟುಕೊಂಡು ವಿವೇಚನೆಯಿಂದ ಸತ್ಯಾಸತ್ಯಗಳನ್ನು ಗುರುತಿಸಿ, ಅಸತ್ಯದ ಆಕರ್ಷಣೆಗಳಿಂದ ಬಿಡಿಸಿಕೊಂಡು, ಭೋಗಲಾಲಸೆಗಳನ್ನು ತ್ಯಜಿಸಿ, ಭ್ರಾಂತಿ ಭಾವನೆಗಳನ್ನು ನೀಗಿ ದೈವಿಕ ಜೀವನ ನಡೆಸುವವರಿಗೆ ಬ್ರಹ್ಮಧಾಮವು ಸಿಕ್ಕೇ ಸಿಗುವುದೆಂಬ ಆಶ್ವಾಸನೆಯನ್ನು ಶ್ರುತಿಯು ಕೊಡುತ್ತಿದೆ. ಪ್ರಬಲವಾದ ನಿಷ್ಠೆ, ವಿಷಯ ವ್ಯವಹಾರಗಳಲ್ಲಿ ಅನಾಸಕ್ತಿ, ಸಂನ್ಯಾಸ, ಜ್ಞಾನ ಮೊದಲಾದ ಉಪಾಯಗಳಿಂದ ಕೂಡಿದ ವಿವೇಕಿಯ ಪ್ರಯತ್ನವು ಸಫಲವಾಗಿ ಅವನು ಬ್ರಹ್ಮನನ್ನು ಸೇರುವನು ಎಂದು ಶ್ರುತಿಯು ವಿಶದಪಡಿಸುತ್ತಿದೆ.

## ಮುಕ್ತನು ಬ್ರಹ್ಮಸ್ವರೂಪವನ್ನು ಪಡೆಯುವನು

**ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ**
**ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ ।**
**ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ**
**ಯುಕ್ತಾತ್ಮಾನಃ ಸರ್ವಮೇವಾವಿಶಂತಿ ॥** ೫

**ಏನಂ** – ಈ ಆತ್ಮನನ್ನು, **ಸಂಪ್ರಾಪ್ಯ** – ಪಡೆದುಕೊಂಡು, **ಋಷಯಃ** – ಋಷಿಗಳು, **ಜ್ಞಾನತೃಪ್ತಾಃ** – ಜ್ಞಾನದಿಂದಲೇ ತೃಪ್ತರೂ, **ಕೃತಾತ್ಮಾನಃ** – ಕೃತಾತ್ಮರೂ, **ವೀತರಾಗಾಃ** – ರಾಗದ್ವೇಷಾದಿ ದೋಷರಹಿತರೂ, **ಪ್ರಶಾಂತಾಃ** – ಪ್ರಶಾಂತರೂ (ಆಗುವರು), **ತೇ ಧೀರಾಃ** – ಅಂತಹ ವಿವೇಕಿಗಳು, **ಯುಕ್ತಾತ್ಮಾನಃ** – ಸಮಾಧಾನ ಚಿತ್ತವುಳ್ಳವರಾಗಿ, **ಸರ್ವಗಂ** – ಸರ್ವವ್ಯಾಪಿಯಾದ (ಬ್ರಹ್ಮವನ್ನು), **ಸರ್ವತಃ** – ಎಲ್ಲೆಲ್ಲಿಯೂ, **ಪ್ರಾಪ್ಯ** – ಪಡೆದುಕೊಂಡು, **ಸರ್ವಂ ಏವ** – ಎಲ್ಲವನ್ನೂ, **ಆವಿಶಂತಿ** – ಪ್ರವೇಶಿಸುವರು (ಬ್ರಹ್ಮಸ್ವರೂಪವನ್ನು ಪಡೆಯುವರು).

**(೫) ಈ ಆತ್ಮನನ್ನು ಅರಿತುಕೊಂಡು ಋಷಿಗಳು ಜ್ಞಾನತೃಪ್ತರೂ, ಕೃತಾತ್ಮರೂ, ರಾಗಾದಿ ದೋಷರಹಿತರೂ, ಪ್ರಶಾಂತರೂ ಆಗುವರು. ಈ ವಿವೇಕಿಗಳು ಯಾವಾಗಲೂ ಸಮಾಧಾನ ಚಿತ್ತವುಳ್ಳವರಾಗಿ ಸರ್ವವ್ಯಾಪಿಯಾಗಿರುವ ಬ್ರಹ್ಮವನ್ನು ಪಡೆದುಕೊಂಡು ಬ್ರಹ್ಮಧಾಮವನ್ನು ಪ್ರವೇಶಿಸುವರು.**

ಹಿಂದಿನ ಎರಡು ಮಂತ್ರಗಳಲ್ಲಿ ಆತ್ಮಪ್ರಾಪ್ತಿ ಲಭಿಸುವುದು ಎಷ್ಟು ಕಷ್ಟಕರ ಎಂದು ತಿಳಿಸಿದ ಮೇಲೆ ಒಂದು ಸಂದೇಹ ಯಾರಿಗಾದರೂ ಬರಬಹುದು. ಅಷ್ಟು ಶ್ರಮ, ಕಷ್ಟಗಳನ್ನನುಭವಿಸಿ ಅದರಿಂದ ಪಡೆಯುವ ಲಾಭವೇನು ಎನಿಸಬಹುದು. ಆ ಪ್ರಶ್ನೆಗೆ ಈ ಮಂತ್ರದಲ್ಲಿ ಉತ್ತರವಿದೆ.

ಆತ್ಮಜ್ಞಾನ ಪಡೆದ ಮಹಾತ್ಮನು ಸಂಪೂರ್ಣ ತೃಪ್ತನಾಗುತ್ತಾನೆ. ಅವನಿಗೆ ಸಕಲ ಸುಖ, ಶಾಂತಿ, ಆನಂದವು ದೊರಕಿದಂತಾಗಿ, ಬೇರಾವುದನ್ನೂ ಅವನು ಬಯಸುವುದಿಲ್ಲ, ಕಣ್ಣೆತ್ತಿ ಕೂಡ ನೋಡುವುದಿಲ್ಲ. ಯಾವನಾದರೂ ಒಬ್ಬ ಭಿಕ್ಷುಕನಿಗೆ ತಾನು ಅತ್ಯಂತ ಸಂಪದ್ಯುಕ್ತವಾದ ಐಶ್ವರ್ಯಕ್ಕೆ ಉತ್ತರಾಧಿಕಾರಿ ಎಂದು ಖಚಿತವಾಗಿ ತಿಳಿದಾಗ ಅವನು ಎಷ್ಟು ಆನಂದಪಡುತ್ತಾನೆ! ತಾನು ಭಿಕ್ಷುಕನಲ್ಲ, ಆಗರ್ಭ ಶ್ರೀಮಂತ ಎಂಬ ತಿಳಿವು ಮೂಡಿದ ಕೂಡಲೇ ಅವನ ಮನಸ್ಸಿನ ಸ್ಥಿತಿಯೇ ಬದಲಾಗಿ ಹೋಗುತ್ತದೆ. ಹಾಗೆಯೇ ಅವಿದ್ಯೆಯಿಂದ ನಿಶ್ಶಕ್ತನೂ, ನಿರರ್ಥಕನೂ ಆಗಿದ್ದೇನೆಂದು ತಿಳಿದಿದ್ದ ಅವನು ಸರ್ವಶಕ್ತನಾದ ಪರಮಾತ್ಮನ ಸ್ವರೂಪವೇ ತಾನು ಎಂದು ತಿಳಿದಾಗ ಅವನಲ್ಲಿ ಆನಂದದ ಬುಗ್ಗೆಯೇ ಚಿಮ್ಮುವುದು. ಅವನಲ್ಲಿ ಸುಖ, ಶಾಂತಿಗಳು ನೆಲೆಸುವುವು.

**ಕೃತಾತ್ಮಾನಃ –**

ಕೃತಾತ್ಮಾನಃ ಎಂದರೆ ಜ್ಞಾನದಿಂದ ತನ್ನ ನಿಜವಾದ ಸ್ವರೂಪವನ್ನು ತಿಳಿದವನು, ಎಂದರ್ಥ.

ಜೀವನವು ಒಂದು ಜಂಜಾಟ. ಒಂದಲ್ಲ ಒಂದು ವ್ಯಥೆ, ತಳಮಳ. ಯಾವುದೋ ಆಸೆಯನ್ನು ಪೂರೈಸಲು ಹೋರಾಟ. ಆ ಆಸೆಗಳಿಗೆ ಕೊನೆಯೇ ಇಲ್ಲ. ಯಾವಾಗಲೂ ಯಾವುದೋ ಚಿಂತೆ, ಕೊನೆಯಿಲ್ಲದ ತಿಕ್ಕಾಟ, ಸಂಕಟ. ನಮಗೆ ನೆಮ್ಮದಿ ಸಿಗುವುದು ಯಾವಾಗ? ನಮ್ಮ ಆಸೆಗಳು, ಅವುಗಳನ್ನು ಪೂರೈಸುವ ಹಂಬಲ ತೀರಿದಾಗ! ಮಾಡಬೇಕಾದದ್ದನ್ನೆಲ್ಲಾ ಮಾಡಿ ಮುಗಿಸಿದ್ದೇನೆ,

ಪಡೆಯಬೇಕಾದದ್ದೆಲ್ಲವನ್ನೂ ಪಡೆದುಕೊಂಡಿದ್ದೇನೆ, ತಿಳಿಯಬೇಕಾದದ್ದನ್ನೆಲ್ಲಾ ತಿಳಿದಿದ್ದೇನೆ, ನೋಡಬೇಕಾದದ್ದನ್ನೆಲ್ಲಾ ನೋಡಿದ್ದೇನೆ ಎಂಬ ತಿಳಿವು ಮೂಡಿದಾಗ ಅವನು ಕೃತಕೃತ್ಯ. ಆಗ ಅವನಿಗೆ ಆತ್ಮತೃಪ್ತಿ. ಮತ್ತಾವ ಬಯಕೆಯೂ ಅವನನ್ನು ಪೀಡಿಸಲಾರದು. ಈ ರೀತಿಯ ಕೃತಕೃತ್ಯತಾ ಭಾವವು ಬರುವುದು ಯಾವಾಗ ಎಂದರೆ ವ್ಯಕ್ತಿಯು ನಿಜವಾದ ತನ್ನ ದೈವ ಸ್ವರೂಪವನ್ನು ಅರಿತಾಗ ಎಂದು ಶ್ರುತಿಯು ಹೇಳುತ್ತದೆ. ಆತ್ಮವನ್ನು ಕಂಡುಕೊಂಡ ಜ್ಞಾನಿಯು ಕೃತಕೃತ್ಯ ಹಾಗೂ ಕೃತಾತ್ಮಾ ಎಂದು ಈ ಮಂತ್ರದಲ್ಲಿ ಹೇಳಿದೆ.

ಕೃತಾತ್ಮನಿಗೆ ಸಕಲ ಆಸೆಗಳೂ ಪೂರೈಸಿರುವುದರಿಂದ, ಅವನಿಗೆ ಮತ್ತೆ ಯಾವ ಆಸೆಯೂ ಇರದು. ಆಸೆ ಇಲ್ಲದವನ ಮನಸ್ಸು ಪ್ರಕ್ಷುಬ್ಧವಾಗುವುದಕ್ಕೆ ಕಾರಣವೇ ಇರುವುದಿಲ್ಲ. ಶಾಂತಿಯು ಅವನ ಹೃದಯದಲ್ಲಿ ಸದಾ ನೆಲೆಸಿರುವುದು.

ಜೀವವು ತಾನು ದೇಹ, ಮನಸ್ಸು ಬುದ್ಧಿಗಳೆಂದು ಭ್ರಮಿಸಿ ಅವುಗಳೊಡನೆ ಒಂದಾಗಿ, ಅವುಗಳ ಆಸೆ, ಆಕಾಂಕ್ಷೆಗಳನ್ನು ತನ್ನದೆಂದುಕೊಂಡು ಅದರಿಂದ ಜಯ, ಅಪಜಯ, ಕಷ್ಟ, ಸುಖಗಳನ್ನು ಅನುಭವಿಸುತ್ತದೆ. ಇದರಿಂದ ತಾನು ಕರ್ತೃ, ಭೋಕ್ತೃ ಎಂಬ ಅಹಂಕಾರ. ಈ ಅಹಂಕಾರ ಇರುವವರೆಗೂ ಜೀವವು ತಾನು ಅಲ್ಪ, ಅಶಕ್ತ ಎಂಬ ಭಾವನೆಗಳು ಅಳಿಯವು. ತಾನು ಪರಮಾತ್ಮ ಸ್ವರೂಪ ಎಂಬ ನಿಜವಾದ ಜ್ಞಾನವು ಮನಸ್ಸು ಬುದ್ಧಿಗಳಲ್ಲಿ ಸ್ಫುರಿಸಿದಾಗ ಜೀವವು ಆನಂದ ಸ್ವರೂಪದ ಆತ್ಮವೇ ಆಗುತ್ತದೆ. ಆಗ ಅದಕ್ಕೆ ಸರ್ವವ್ಯಾಪಿಯಾದ ಚೈತನ್ಯ ಶಕ್ತಿಯು ಮೂಡುತ್ತದೆ. ಇದನ್ನು ವೇದಾಂತವು ಘಟಾಕಾಶ ಮತ್ತು ಬಾಹ್ಯಾಕಾಶದ ಉಪಮೆಯ ಮೂಲಕ ವಿವರಿಸುತ್ತದೆ. ಮಡಕೆಯಲ್ಲಿರುವ ಖಾಲಿ ಜಾಗವು (ಆಕಾಶವು) ತಾನು ತನ್ನ ಉಪಾಧಿಗಷ್ಟೇ ಸೀಮಿತವಾದ ಅಲ್ಪವಸ್ತು ಎಂದುಕೊಂಡಿರುತ್ತದೆ. ಆದರೆ ಮಡಕೆಯು ಒಡೆದಾಗ ಅದರೊಳಗಿನ ಆಕಾಶವು ಬಾಹ್ಯಾಕಾಶದಲ್ಲಿ ಸೇರಿ ಒಂದಾಗುತ್ತದೆ. ಮುಂಚೆಯೂ ಮಡಕೆಯೊಳಗಿನ ಆಕಾಶದ ಲಕ್ಷಣವೇನೂ ಬದಲಾಗಿರಲಿಲ್ಲ. ಆದರೆ ಮಡಕೆಯೆಂಬ ಉಪಾಧಿಯಿಂದ ಅದರ ವ್ಯಾಪ್ತಿಯು ಅಲ್ಪವಾಗಿದ್ದಂತೆ ತೋರುತ್ತಿತ್ತು, ಅಷ್ಟೆ. ಮಡಕೆಯೊಡೆದು ಅದರೊಳಗಿದ್ದ ಆಕಾಶವು ಬಾಹ್ಯಾಕಾಶದೊಳಗೆ ಸೇರಿಹೋದಾಗ ಅದಕ್ಕೆ ಹೊಸ ಗುಣಗಳೇನೂ ಬರಲಿಲ್ಲ. ತನ್ನ ನಿಜ ಸ್ವರೂಪವೇನೆಂಬುದು ಬಯಲಾಯಿತು. ತಾನು ಸರ್ವವ್ಯಾಪಿಯಾದ ಆಕಾಶವೇ ಎಂಬ ಜ್ಞಾನವು ಉಂಟಾಯಿತು.

ಅದೇ ರೀತಿ, ಸಾಧಕನು ತಾನು ದೇಹ, ಬುದ್ಧಿ ಮನಸ್ಸುಗಳಲ್ಲ, ತನ್ನ ನಿಜವಾದ ಸ್ವರೂಪವು ಆತ್ಮಸ್ವರೂಪವೇ ಎಂಬುದನ್ನು ಅರಿತಾಗ ಅವನ ಅಲ್ಪತೆಯ ಅವಿದ್ಯಾ ಭ್ರಾಂತಿಯು ಹರಿದು, ಸಕಲ ನಾಮರೂಪಾತ್ಮಕ ಜಗತ್ತಿಗೆ ಮಹಾಪ್ರಭುವಾದ ಪರಮೇಶ್ವರನು ತನ್ನಿಂದ ಬೇರೆಯಲ್ಲ ಎಂಬುದು ಅವನ ಗೋಚರಕ್ಕೆ ಬರುತ್ತದೆ. ಆ ಕ್ಷಣದಲ್ಲಿ ಆ ಜ್ಞಾನಿಯು ಬ್ರಹ್ಮಧಾಮವನ್ನೇ ಸೇರಿರುತ್ತಾನೆ.

**ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ**
**ಸಂನ್ಯಾಸಯೋಗಾದ್ ಯತಯಃ ಶುದ್ಧಸತ್ತ್ವಾಃ ।**
**ತೇ ಬ್ರಹ್ಮಲೋಕೇಷು ಪರಾಂತಕಾಲೇ**
**ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥** ೬

**ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ** – ಉಪನಿಷತ್ತುಗಳ ಅರ್ಥವನ್ನು ಚೆನ್ನಾಗಿ ನಿಶ್ಚಯ ಮಾಡಿಕೊಂಡವರಾಗಿ, **ಸಂನ್ಯಾಸಯೋಗಾತ್** – ಸಂನ್ಯಾಸಯೋಗದಿಂದ (ಕರ್ಮಫಲ ತ್ಯಾಗದಿಂದ), **ಶುದ್ಧಸತ್ತ್ವಾಃ** – ಪರಿಶುದ್ಧ ಮನಸ್ಸುಳ್ಳವರಾಗಿ, **ತೇ ಸರ್ವೇ ಯತಯಃ** – ಆ ಎಲ್ಲ ಯತಿಗಳು, **ಪರಾಂತಕಾಲೇ** – ದೇಹ ಪರಿತ್ಯಾಗ ಕಾಲದಲ್ಲಿ, **ಬ್ರಹ್ಮಲೋಕೇಷು** – ಬ್ರಹ್ಮಲೋಕಗಳಲ್ಲಿ, **ಪರಾಮೃತಾಃ** – ಬ್ರಹ್ಮಸ್ವರೂಪರಾಗಿ, **ಪರಿಮುಚ್ಯಂತಿ** – ಮುಕ್ತರಾಗುವರು.

(೬) ಉಪನಿಷತ್ತುಗಳ ಅರ್ಥವನ್ನು ಚೆನ್ನಾಗಿ ನಿಶ್ಚಯ ಮಾಡಿಕೊಂಡವರಾಗಿ ಸಂನ್ಯಾಸ ಯೋಗದಿಂದ ಪರಿಶುದ್ಧ ಮನಸ್ಸುಳ್ಳವರಾಗಿ ಎಲ್ಲ ಯತಿಗಳೂ ದೇಹ ಪರಿತ್ಯಾಗ ಕಾಲದಲ್ಲಿ ಬ್ರಹ್ಮಸ್ವರೂಪರಾಗಿ ಮುಕ್ತರಾಗುವರು.

**ಸುನಿಶ್ಚಿತಾರ್ಥಾಃ –**

ವೇದಾಂತ ಶಾಸ್ತ್ರ ಗ್ರಂಥಗಳ ಪೂರ್ಣ ಪಾಂಡಿತ್ಯವನ್ನು ಪಡೆಯುವುದು ದುಷ್ಕರ. ಶ್ರುತಿಯ ಮಂತ್ರಗಳ ಅರ್ಥವನ್ನು ನಿರ್ದುಷ್ಟವಾಗಿ ತಿಳಿಯುವುದು ಬಹು ಕಷ್ಟ. ಅವುಗಳ ಇಂಗಿತ ಬಹು ಗಾಢ. ಅರ್ಥವು ರಹಸ್ಯಪೂರ್ಣ. ಇದಕ್ಕೆ ಕಾರಣ, ಪರಿಪೂರ್ಣವೂ, ಅನಂತವೂ ಅಪರಿಮಿತವೂ ಆದ ಬ್ರಹ್ಮವಸ್ತುವನ್ನು ಅಪೂರ್ಣವೂ, ಪರಿಮಿತವೂ, ದೋಷಪೂರಿತವೂ ಆದ ನಮ್ಮ ಮಾತುಗಳಿಂದ ಹೇಳ ಹೊರಟಿರುವುದು; ಅನಿರ್ವಾಚ್ಯವಾದದ್ದನ್ನು ವಾಕ್ಕಿನ ಮೂಲಕ ನಿರ್ದೇಶಿಸಲು ಯತ್ನ ಮಾಡಿರುವುದು. ಈ ಸನ್ನಿವೇಶದಲ್ಲಿ ಉದ್ದಿಷ್ಟ ಅರ್ಥವನ್ನು ಸ್ಪಷ್ಟವಾಗಿ ಸ್ಫುರಿಸಲು ಶಬ್ದಗಳು ಅಸಮರ್ಥವಾಗುತ್ತವೆ. ಕೇವಲ ಸೂಚ್ಯಾರ್ಥದಿಂದಲೋ, ಧ್ವನಿ ಅರ್ಥದಿಂದಲೋ ಅಲ್ಪಸ್ವಲ್ಪ ಮಾತ್ರ ಗ್ರಹಿಸಲು ಸಾಧ್ಯ. ಅಲೌಕಿಕವಾದ ಅನುಭವವನ್ನು ಲೌಕಿಕೋಕ್ತಿಗಳಿಂದ ತಿಳಿಸುವುದೂ, ತಿಳಿಯುವುದೂ ಅಸಾಧ್ಯ. ಆದರೂ ಉಪನಿಷತ್ತುಗಳು ಅತ್ಯುತ್ತಮ ರೀತಿಯಲ್ಲಿ ಈ ಪ್ರಯತ್ನ ನಡೆಸಿವೆ. ಆದ್ದರಿಂದಲೇ ಅವು ಜಗತ್ಪ್ರಸಿದ್ಧವಾದ ಪವಿತ್ರ ಗ್ರಂಥಗಳೆನಿಸಿವೆ.

ಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ಮಂತ್ರಗಳ ಮೇಲ್ನೋಟದ ಅರ್ಥವನ್ನು ತಿಳಿದ ಮಾತ್ರಕ್ಕೆ ಸಾಧಕನು ಅವುಗಳನ್ನು ಪೂರ್ಣವಾಗಿ ತಿಳಿದೆನೆಂದುಕೊಳ್ಳುವಂತಿಲ್ಲ. ಮಂತ್ರಗಳ ಅರ್ಥವನ್ನು ಮನನ ಮಾಡಿ ಆ ಶಬ್ದಗಳು ತಮ್ಮ ಮಿತಿಯನ್ನು ಮೀರಿ ಸೂಚಿಸುವ ಗೂಢಾರ್ಥವನ್ನು ಗ್ರಹಿಸುವತನಕ ಅವನ ಅರಿವು ಅಪೂರ್ಣ. ಈ ಜ್ಞಾನವನ್ನು ಪಡೆಯಬೇಕಾದರೆ ಅವನಿಗೆ ಬ್ರಹ್ಮನಿಷ್ಠನೂ, ಜ್ಞಾನಿಯೂ ಆದ ಗುರುವಿನ ಉಪದೇಶ, ಮಾರ್ಗದರ್ಶನಗಳು ಅಗತ್ಯ. ಅದಕ್ಕಾಗಿಯೇ ಸಾಧಕನು ಎಷ್ಟೇ ಪ್ರಗಲ್ಭನಾಗಿದ್ದರೂ ಶಾಸ್ತ್ರಗ್ರಂಥಗಳನ್ನು ಯೋಗ್ಯನಾದ ಸದ್ಗುರುವಿನ

ಮಾರ್ಗದರ್ಶನವಿಲ್ಲದೆ ಸ್ವತಂತ್ರವಾಗಿ ಅಧ್ಯಯನ ಮಾಡಬಾರದೆಂದು ಅವುಗಳಲ್ಲೇ ಹೇಳಿರುವುದು. 'ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ' ಎಂದರೆ ವೇದಾಂತದ ಯಥಾರ್ಥವಾದ ವಿಶೇಷ ಜ್ಞಾನವನ್ನು ಯಾವ ಶಂಕೆಯೂ ಉಳಿಯದಂತೆ ಸ್ಪಷ್ಟವಾಗಿ ಗುರುಮುಖೇನ ನಿಶ್ಚಯಿಸಿಕೊಂಡು ಎಂದೇ ಅಭಿಪ್ರಾಯ. ಅಜ್ಞಾನ, ಅನ್ಯಥಾಜ್ಞಾನ, ವಿಪರೀತಜ್ಞಾನಗಳೆಂಬ ದೋಷಗಳು ಶಾಸ್ತ್ರಗ್ರಂಥಗಳ ಯಥಾರ್ಥ ಜ್ಞಾನಕ್ಕೆ ಪ್ರತಿಬಂಧಕಗಳು. ಆದ್ದರಿಂದ ಅವುಗಳಿಗೆ ಅವಕಾಶ ಕೊಡದೆ ಸಾಧಕನು ಶ್ರುತಿಯ ಅರ್ಥವನ್ನು ಸ್ಪಷ್ಟವಾಗಿಯೂ, ನಿರ್ದುಷ್ಟವಾಗಿಯೂ ಗುರುವಿನ ಬೋಧನೆಯ ಮೂಲಕ ತಿಳಿದುಕೊಳ್ಳಬೇಕು.

**ಸಂನ್ಯಾಸ ಯೋಗಾತ್ –**

ಆತ್ಮಾನ್ವೇಷಕನಾದ ಸಾಧಕನು ಶ್ರುತಿಯ ಅರ್ಥವನ್ನು ಸ್ಪಷ್ಟವಾಗಿಯೂ, ನಿರ್ದುಷ್ಟವಾಗಿಯೂ ತಿಳಿದಿರುವುದಲ್ಲದೆ ಸಂನ್ಯಾಸ ಯೋಗದ ಮೂಲಕ ತನ್ನ ಅಂತಃಕರಣವನ್ನು ಪರಿಶುದ್ಧ ಮಾಡಿಕೊಂಡಿರಬೇಕು. ಸಂನ್ಯಾಸ ಯೋಗವೆಂದರೆ ಸಂನ್ಯಾಸ ಸ್ವೀಕರಿಸಬೇಕೆಂದಲ್ಲ. ಮಾನಸಿಕವಾಗಿ ಲೌಕಿಕ ಆಸೆಗಳನ್ನು ತೊರೆದು, ವೈರಾಗ್ಯ ಪಡೆದು ಶುದ್ಧಮನಸ್ಸುಳ್ಳವರಾಗಿರಬೇಕೆಂದು ಅರ್ಥ. ಕೇವಲ ಕಾಷಾಯ ವಸ್ತ್ರಗಳನ್ನು ಧರಿಸಿದ ಮಾತ್ರಕ್ಕೆ ಯಾರೂ ಸಂನ್ಯಾಸಿಗಳಾಗಲಾರರು. ಅವು ಹೊರಗಿನ ಲಕ್ಷಣಗಳಾಗಿರಬಹುದು, ಹೊಲಕ್ಕೆ ಬೇಲಿ ಇದ್ದಂತೆ. ಹೇಗೆ ಬೇಲಿಯೇ ಬೆಳೆಯನ್ನು ಕೊಡಲಾರದೋ ಹಾಗೆಯೇ ಹೊರಗಿನ ವೇಷ ಭೂಷಣಗಳೇ ಮಾನಸಿಕ ವೈರಾಗ್ಯವನ್ನು ತಂದುಕೊಡಲಾರವು.

ಮನಸ್ಸಿನ ಪರಿಶುದ್ಧತೆ, ಆಚಾರಾಚಿತ್ಯ, ಇವು ವೈರಾಗ್ಯದ ಲಕ್ಷಣಗಳು. ನಮ್ಮ ಪಾಶವೀ ಪ್ರವೃತ್ತಿಗಳಾದ ಕಾಮ, ಕ್ರೋಧ, ಲೋಭ, ಮದ, ಮಾತ್ಸರ್ಯ, ಅಹಂಕಾರ, ದ್ವೇಷ – ಇವುಗಳನ್ನು ಮಟ್ಟಿ ಹಾಕಿ ಅವುಗಳ ಜಾಗದಲ್ಲಿ ಪ್ರೇಮ, ದಯೆ, ಕರುಣೆ, ಸಹನೆ, ತಾಳ್ಮೆ, ಸಂಯಮ, ನಿಸ್ವಾರ್ಥತೆ, ಘನತೆ, ಗಾಂಭೀರ್ಯಗಳನ್ನು ಮುಟ್ಟಿ ಹಾಕಬೇಕು. ಇದು ನಿಜವಾದ ಸಂನ್ಯಾಸಯೋಗ.

ಶಾಸ್ತ್ರಗಳ ನಿಶ್ಚಿತವಾದ ಜ್ಞಾನ ಪಡೆದಿರುವ ಮತ್ತು ಸಂನ್ಯಾಸ ಯೋಗದಿಂದ ಶುದ್ಧಸತ್ತ್ವರಾಗಿರುವ ಸಾಧಕರು ಯಾವ ಅಡಚಣೆಯೂ ಇಲ್ಲದೆ ಶಾಸ್ತ್ರಗ್ರಂಥಗಳ ಮಂತ್ರಾರ್ಥವನ್ನು ಮನನ ಮಾಡಲು ಸಮರ್ಥರಾಗುತ್ತಾರೆ. ಬುದ್ಧಿ ಮನಸ್ಸುಗಳಲ್ಲಿ ಪರಿಶುದ್ಧರಾಗಿರುವವರೇ ಆತ್ಮ ಸಾಮ್ರಾಜ್ಯದಲ್ಲಿ ಹಾರಾಡಲು ಯೋಗ್ಯರಾಗುವರು. ಆ ರೀತಿಯ ಶುದ್ಧಸತ್ತ್ವವುಳ್ಳ ಸಾಧಕರೇ ಅಡ್ಡಿ ಆತಂಕಗಳಿಲ್ಲದೆ ತಮ್ಮ ಗುರಿಯನ್ನು ತಲುಪೇ ತಲುಪುವರೆಂದು ಶ್ರುತಿಯು ಇಲ್ಲಿ ಆಶ್ವಾಸನೆ ಕೊಡುತ್ತಿದೆ. ಆಂತರಿಕವಾಗಿಯಾಗಲಿ, ಬಾಹ್ಯವಾಗಿಯಾಗಲಿ ಸಾಧಕನಿಗೆ ಅಡ್ಡಿ ಆತಂಕಗಳು ಬಂದರೆ ಅಂತಹವನು ಸಂನ್ಯಾಸಯೋಗದಲ್ಲಿ ಸಾಕಾದಷ್ಟು ಪ್ರತಿಷ್ಠಿತನಾಗಿಲ್ಲವೆಂಬುದೇ ಕಾರಣವೆನ್ನಬಹುದು. ಪೂರ್ಣ ವೈರಾಗ್ಯವಿಲ್ಲದೆ ಯಾವ ಆಧ್ಯಾತ್ಮಿಕ ಪ್ರಗತಿಯೂ ಸಾಧ್ಯವಾಗದು. ಸತ್ಯಾನ್ವೇಷಣೆಯ ಯಾತ್ರೆಯಲ್ಲಿ ಗುರಿಯನ್ನು ಕ್ಷಿಪ್ರವಾಗಿ ಸೇರುವ

ಅಡ್ಡ ದಾರಿಗಳಿಲ್ಲ.

**ಬ್ರಹ್ಮಲೋಕೇಷು –**

'ಬ್ರಹ್ಮಲೋಕಗಳಲ್ಲಿ' ಎಂದು ಇದಕ್ಕೆ ಅರ್ಥ. ಬ್ರಹ್ಮನು ಏಕಮೇವಾದ್ವಿತೀಯ ಎಂದ ಮೇಲೆ ಬ್ರಹ್ಮಲೋಕಗಳಲ್ಲಿ ಎಂದು ಬಹುವಚನವೇಕೆ ಎಂಬ ಸಂಶಯ ಬರಬಹುದು. ಶ್ರೀ ಶಂಕರರು ಇದಕ್ಕೆ ಉತ್ತರ ಹೇಳಿದ್ದಾರೆ.

ಬ್ರಹ್ಮಜ್ಞಾನವುಂಟಾಗುವವರೆಗೂ ಪ್ರತಿಯೊಬ್ಬನಿಗೂ ಜಗತ್ತು ಸತ್ಯ. ಅವನ ಅನುಭವಗಳೂ ಅವನಿಗೆ ಸತ್ಯ. ಅವನು ಕಾಣುವ ನಾಮರೂಪಗಳಲ್ಲಿ ಅವನಿಗೆ ನಂಬಿಕೆ. ಪ್ರತಿಯೊಂದು ನಾಮರೂಪಗಳ ಹಿಂದೆಯೂ ಒಂದೊಂದು ಆಧ್ಯಾತ್ಮಿಕ ತತ್ತ್ವವು ಅಡಗಿದೆ ಎಂಬುದು ಅವನಿಗೆ ಅಧ್ಯಯನ ಮತ್ತು ಚರ್ಚೆಗಳ ಮೂಲಕ ಖಚಿತವಾಗಿದೆ. ಆದರೆ ಎಷ್ಟೇ ಬುದ್ಧಿವಂತನಾದ ಶಿಷ್ಯನಾಗಿದ್ದರೂ ಎಲ್ಲಾ ವಸ್ತುಗಳ ಹಿಂದೆ ಅಡಗಿರುವುದೂ ಒಂದೇ ಚೈತನ್ಯ ಸ್ವರೂಪ ಎಂಬುದು ಅವನ ಗೋಚರಕ್ಕೆ ಬರಲಾರದು. ಬ್ರಹ್ಮವು ಒಂದೇ ಆದರೂ ಒಬ್ಬೊಬ್ಬ ಸಾಧಕನೂ ತನ್ನ ಕಲ್ಪನೆಗನುಸಾರವಾಗಿ ಒಂದೊಂದು ಬ್ರಹ್ಮಲೋಕವನ್ನು ಊಹಿಸಿಕೊಂಡಿರುತ್ತಾನೆ. ಸಾಧಕರು ಅನೇಕರು ಇರುವುದರಿಂದ ಅವರವರ ಕಲ್ಪನೆಯಂತೆ ಬ್ರಹ್ಮಲೋಕಗಳು ಅವರಿಗೆ ಕಲ್ಪಿತವಾಗಿರುತ್ತವೆ. ಆದ್ದರಿಂದ 'ಬ್ರಹ್ಮಲೋಕಗಳು' ಎಂದು ಬಹುವಚನದ ಪ್ರಯೋಗವಾಗಿದೆ.

ಆದರೆ ಆತ್ಮಸಾಕ್ಷಾತ್ಕಾರ ಪಡೆದ ಮಹಾತ್ಮನಾದರೋ ಪ್ರತಿಯೊಂದು ನಾಮರೂಪಾತ್ಮಕವಾದ ವಸ್ತುವಿನ ಕೇಂದ್ರವಾಗಿರುವ ಒಂದೇ ಚೈತನ್ಯ ಶಕ್ತಿಯನ್ನು ತನ್ನ ಅಂತಃಚಕ್ಷುವಿನಿಂದ ಅರಿಯುತ್ತಾನೆ. ವಾಸ್ತವವಾಗಿ 'ಬ್ರಹ್ಮಲೋಕಗಳು' ಎಂದರೆ ಪ್ರತಿಯೊಂದು ವಸ್ತುವಿನಲ್ಲೂ, ಭಾವ ಭಾವನೆಗಳಲ್ಲೂ ಅಡಗಿರುವ ಚೈತನ್ಯ ಶಕ್ತಿಗಳೇ. ವಿವಿಧ ವ್ಯಕ್ತಿಗಳಿಗೆ ವೈಯಕ್ತಿಕವಾಗಿ ಆ ಅನುಭವವು ಬೇರೆ ಬೇರೆಯಾಗಿದ್ದರೂ, ಸಾಕ್ಷಾತ್ಕಾರ ಪಡೆದ ಪ್ರತಿಯೊಬ್ಬ ಜ್ಞಾನಿಗೂ ತಾನು ನಾನಾ ವಸ್ತುಗಳಲ್ಲಿ ಕಾಣುವ ಎಲ್ಲಾ ಚೈತನ್ಯ ಕೇಂದ್ರಗಳೂ ಒಂದೇ ಆಗಿದೆ ಎಂಬುದು ಅವನವನ ಅನುಭವಕ್ಕೆ ಬರುತ್ತದೆ. ಅವನ ಅನುಭವದಲ್ಲಿ ಅವೆಲ್ಲವೂ ಏಕಮೇವಾದ್ವಿತೀಯವಾದ ಒಂದೇ ಬ್ರಹ್ಮವೇ! 'ಇರುವುದು ಬ್ರಹ್ಮವೊಂದೇ' ಎಂಬುದು ಅವನ ಅರಿವು ಮತ್ತೂ ಅನುಭವ.

ಪರಮಾರ್ಥ ದೃಷ್ಟಿಯಿಂದ ಪ್ರಪಂಚವಿಲ್ಲ. ಪ್ರಪಂಚವು ಪರಮಾರ್ಥದ ಮೇಲೆ ಮಾಡಿರುವ ಅಧ್ಯಾರೋಪ. ಮೋಟುಮರದ ದೃಷ್ಟಿಯಿಂದ ಭೂತವು ಕೇವಲ ಭ್ರಾಂತಿ. ಭೂತಕ್ಕೆ ಅಸ್ತಿತ್ವವೇ ಇಲ್ಲ, ಇರಲು ಸಾಧ್ಯವೂ ಇಲ್ಲ. ಹಗ್ಗವನ್ನು ಯಥಾರ್ಥವಾಗಿ ತಿಳಿದವನಿಗೆ ಅದು ಹಾವೆಂಬ ಭ್ರಾಂತಿಯುಂಟಾಗದು. ಹಾವಿನ ಭಯವೂ ಇರದು.

**ಪರಾಂತಕಾಲೇ ಪರಾಮೃತಾಃ ಪರಿಮುಚ್ಯಂತಿ ಸರ್ವೇ–**

ಪರಾಂತಕಾಲ ಎಂದರೆ ತೀರ ಕೊನೆಯ ಕಾಲ. ಸಂಸಾರಿಗಳು ಪುನಃ ಹುಟ್ಟುವುದರಿಂದ ಅವರ ಸಾವು (ಅಂತಕಾಲವು) ಕೊನೆಯದಲ್ಲ. ಪುನರ್ಜನ್ಮವಿಲ್ಲದ ಜ್ಞಾನಿಗಳ ಕೊನೆಗಾಲವೇ ಪರಾಂತಕಾಲ ಎಂದು ಶ್ರೀಶಂಕರರು ಹೇಳುತ್ತಾರೆ.

ಜ್ಞಾನಿಗೆ ಬದುಕಿದ್ದಾಗಲೇ ಮುಕ್ತಿಯು ಪ್ರಾಪ್ತವಾಗುತ್ತದೆಯೋ ಅಥವಾ ಅವನು ಕೂಡ ದೇಹಾನಂತರವೇ ಮುಕ್ತಿ ಪಡೆಯುತ್ತಾನೋ ಎಂಬ ವಿಷಯ ಹಿಂದೆಯೇ ಚರ್ಚೆಯಾಗಿದೆ. ಕೆಲವು ದಾರ್ಶನಿಕರು ದೇಹಾಪಾತಾನಂತರವೇ ಮುಕ್ತಿ ಎನ್ನುತ್ತಾರೆ. ಅದನ್ನು ವಿದೇಹಮುಕ್ತಿ ಎಂದು ಹೇಳುತ್ತಾರೆ. ಇನ್ನು ಕೆಲವರು ದೇಹವಿರುವಾಗಲೇ ಜ್ಞಾನಿಗೆ ಮುಕ್ತಿ ದೊರೆಯುತ್ತದೆ; ಅವನಿಗೆ ದೇಹವಿದ್ದರೂ ಆತ್ಮಜ್ಞಾನವಾದ ಕೂಡಲೇ ಮುಕ್ತಿ ಎನ್ನುತ್ತಾರೆ. ಇದು ಜೀವನ್ಮುಕ್ತಿ.

ಶ್ರೀಶಂಕರರ ಪ್ರಕಾರ ಜೀವನ್ಮುಕ್ತಿಯೇ ಶ್ರುತಿಸಮ್ಮತ. ಅವರು ಬ್ರಹ್ಮಜ್ಞಾನೋದಯಕ್ಕೂ ಮುಕ್ತಿಗೂ ನಡುವೆ ಕಾಲಾಂತರವೇ ಇಲ್ಲವೆನ್ನುತ್ತಾರೆ. ಹಾಗಿಲ್ಲವಾಗಿದ್ದರೆ ಬ್ರಹ್ಮವಿದ್ಯೆಯನ್ನು ಉಪದೇಶಿಸುವ, ಶ್ರುತಿಯಲ್ಲಿ ಹೇಳಿರುವಂತಹ ಬ್ರಹ್ಮನಿಷ್ಠನಾದ, ಬ್ರಹ್ಮಾನುಭವ ಪಡೆದ ಗುರು ಇರಲು ಹೇಗೆ ಸಾಧ್ಯ ಎಂಬುದು ಅವರ ಪ್ರಶ್ನೆ. ಉಪನಿಷತ್ತುಗಳ ಪ್ರಕಾರವೇ "ಶಾಸ್ತ್ರಗ್ರಂಥಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದ ಹಾಗೂ ಬ್ರಹ್ಮಾನುಭವ ಪಡೆದ ಗುರುವೇ ಪರಿಪೂರ್ಣನಾದ ಸದ್ಗುರು" ಎಂದು ಹೇಳಿದೆ. ಶ್ರೀ ಶಂಕರರ ಪ್ರಕಾರ ಸಾವು ಎಂದು ಇಲ್ಲಿ ಹೇಳಿರುವುದು ಅಹಂಕಾರಕ್ಕೂ ಮತ್ತು ದೇಹವೇ 'ನಾನು' ಎಂಬ ಭಾವಕ್ಕೂ ಅನ್ವಯಿಸುತ್ತದೆ. ಆದ್ದರಿಂದ ಇಲ್ಲಿ 'ಸಾವು' ಎನ್ನುವುದು ವ್ಯವಹಾರ ದೃಷ್ಟಿಯಿಂದ. 'ನಾನು' ಎಂಬ ಅಹಂಕಾರದ ನಂತರ ಉಳಿಯುವುದು 'ಆತ್ಮ' ಮಾತ್ರವಲ್ಲವೇ ? ವೇದಾಂತವು ಪ್ರತಿ ತಲೆಮಾರಿಗೂ ಕೂಗಿ ಹೇಳುವ ಸಂದೇಶವೇನೆಂದರೆ, "ದೈವಿಕ ಬದುಕನ್ನು ನಡೆಸಲು 'ನಾನು' ಎಂಬ ಅಹಂಕಾರದ ಭ್ರಾಂತಿಭಾವವನ್ನು ಅಂತ್ಯಗೊಳಿಸಿ" ಎಂಬುದು. ಅಹಂಕಾರವು ಎಲ್ಲಿ ಕೊನೆಗೊಳ್ಳುತ್ತದೆಯೋ ಅಲ್ಲಿ ದೈವತ್ವವು ಪ್ರಾರಂಭವಾಗುತ್ತದೆ. ಅಹಂಕಾರದಿಂದ ತುಂಬಿದ 'ನಾನು' ಎಂಬ ಜೀವಭಾವವಿರುವವರೆಗೂ ಅವನು ಭ್ರಾಂತಿಯುತ ಮಾನವ. ಯಾವ ಮಾನವನಿಂದ ಅಹಂಕಾರದ ಮುಸುಕು ಕಳಚಿಹೋಗಿದೆಯೋ ಅಂತಹವನು ಶಾಶ್ವತ ದೈವತ್ವದ ಪ್ರಭೆಯಿಂದ ಬೆಳಗುವನು.

## ಮೋಕ್ಷ ಕಾಲದಲ್ಲಿ ಕಾರ್ಯಗಳು ಆಯಾಕಾರಣಗಳಲ್ಲಿ ಲಯವಾಗುತ್ತವೆ

**ಗತಾಃ ಕಲಾಃ ಪಂಚದಶ ಪ್ರತಿಷ್ಠಾ**
**ದೇವಾಶ್ಚ ಸರ್ವೇ ಪ್ರತಿದೇವತಾಸು ।**
**ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ**
**ಪರೇಽವ್ಯಯೇ ಸರ್ವ ಏಕೀ ಭವಂತಿ ॥** ೭

**ಪಂಚದಶ ಕಲಾಃ** – ಹದಿನೈದು ಕಲೆಗಳು, **ಪ್ರತಿಷ್ಠಾಃ** – ತಮ್ಮ ಕಾರಣಗಳೊಂದಿಗೆ, **ಗತಾಃ** – ಸೇರುತ್ತವೆ, **ಸರ್ವೇ ದೇವಾಃ** – ದೇವತೆಗಳೆಲ್ಲರೂ, **ಪ್ರತಿದೇವತಾಸು** – ಪ್ರತಿದೇವತೆಗಳಲ್ಲಿ (ಸೂರ್ಯಾದಿಗಳಲ್ಲಿ ಸೇರುತ್ತಾರೆ), **ಕರ್ಮಾಣಿ** – ಕರ್ಮಗಳು, **ಚ** – ಮತ್ತು, **ವಿಜ್ಞಾನಮಯಃ ಆತ್ಮಾ** – ವಿಜ್ಞಾನಮಯ ಆತ್ಮನೂ, **ಸರ್ವೇ** – ಎಲ್ಲವೂ, **ಪರೇ ಅವ್ಯಯೇ** – ಅವಿನಾಶಿಯಾದ ಪರಬ್ರಹ್ಮನಲ್ಲಿ, **ಏಕೀಭವಂತಿ** – ಒಂದಾಗುವುವು.

(೭) ಮೋಕ್ಷಕಾಲದಲ್ಲಿ ಪ್ರಾಣವೇ ಮೊದಲಾದ ಹದಿನೈದು ಕಲೆಗಳು ತಮ್ಮ ಕಾರಣಗಳೊಂದಿಗೆ ಸೇರುತ್ತವೆ ದೇವತೆಗಳೆಲ್ಲರೂ (ಕಣ್ಣು ಮೊದಲಾದ ಕರಣಗಳಲ್ಲಿರುವ ದೇವತೆಗಳು) ಸೂರ್ಯಾದಿ ತಮ್ಮ ಅಧಿಷ್ಠಾನಗಳನ್ನು ಸೇರುತ್ತಾರೆ. ಅವರ ಕರ್ಮಗಳೂ ಮತ್ತು ಉಪಾಧಿವಿಶಿಷ್ಟನಾದ ಜೀವಾತ್ಮನೂ ಎಲ್ಲವೂ ನಾಶರಹಿತನಾದ ಪರಬ್ರಹ್ಮನಲ್ಲಿ ಒಂದಾಗುವರು.

**ಕಲಾಃ ಪಂಚದಶ –**

ಪ್ರಶ್ನೋಪನಿಷತ್ತಿನಲ್ಲಿ* ಕಲೆಗಳನ್ನು ಕುರಿತ ಚರ್ಚೆ ಉಲ್ಲೇಖಿಸಿದೆ. ಸುಕೇಶ ಭಾರದ್ವಾಜನು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತಾ ಪಿಪ್ಪಲಾದ ಋಷಿಗಳು ಹದಿನಾರು ಕಲೆಗಳು ಯಾವುವೆಂದು ವಿವರಿಸಿದ್ದಾರೆ. ಪ್ರಾಣ, ಶ್ರದ್ಧೆ, ಆಕಾಶ, ವಾಯು, ಜ್ಯೋತಿ, ನೀರು, ಪೃಥ್ವಿ, ಇಂದ್ರಿಯಗಳು, ಮನಸ್ಸು, ಅನ್ನ, ವೀರ್ಯ, ತಪಸ್ಸು, ಮಂತ್ರಗಳು, ಕರ್ಮ, ಲೋಕಗಳು ಮತ್ತು ಲೋಕಗಳಲ್ಲಿನ ಸಮಸ್ತ ವಸ್ತುಗಳ ನಾಮಗಳು – ಇವೇ ಹದಿನಾರು ಕಲೆಗಳು.

ಮೇಲೆ ಪಟ್ಟಿ ಮಾಡಿರುವ ವಿಷಯಗಳು ಮೇಲ್ನೋಟಕ್ಕೆ ಹುಚ್ಚನ ಅಸಂಬದ್ಧವಾದ ಅಪಲಾಪದಂತೆ ತೋರುತ್ತವೆ. ಆದರೆ ಅವುಗಳ ಪರಸ್ಪರ ಸಂಬಂಧವನ್ನು ತಿಳಿದರೆ ಇಲ್ಲಿ ಹೇಳಿರುವ ತತ್ತ್ವಾರ್ಥದ ಅರಿವಾಗುತ್ತದೆ.

ಪುರುಷನು ಮೊದಲು ಪ್ರಾಣನನ್ನು ಸೃಷ್ಟಿಸಿದನು. ಪ್ರಾಣನು ಎಂದರೆ ಸರ್ವಪ್ರಾಣಿಗಳ ಅಂತರಾತ್ಮನಾದ ಸಮಷ್ಟಿ ಪ್ರಾಣ. ಇವನನ್ನು ವೇದಾಂತದಲ್ಲಿ ಸೂತ್ರಾತ್ಮಾ ಅಥವಾ ಹಿರಣ್ಯಗರ್ಭ ಎನ್ನುತ್ತಾರೆ. ಅವನೇ ಸೃಷ್ಟಿಕರ್ತನಾದ ಬ್ರಹ್ಮ

---

* ಹದಿನಾರು ಕಲೆಗಳ ವಿವರಣೆ ಪ್ರಶ್ನೋಪನಿಷತ್ತಿನ ಪ್ರಶ್ನೆ ೬ - ಮಂತ್ರ ೪ ರಲ್ಲಿ ಬರುತ್ತದೆ. ಪಿಂಡಾಂಡವು ಬ್ರಹ್ಮಾಂಡದಲ್ಲಿ ಐಕ್ಯವಾಗುವ ವಿವರಣೆಯನ್ನು - ಪ್ರಶ್ನೋಪನಿಷತ್ತಿನ ಮೇಲಿನ ಸ್ವಾಮಿಜೀಯವರ ಪ್ರವಚನವನ್ನು ನೋಡಿ - ಪ್ರಶ್ನೆ ೬ - ಮಂತ್ರ ೪, ೫

ವೈಯಕ್ತಿಕವಾಗಿ ಪ್ರಾಣವೆಂದರೆ ನಮ್ಮಲ್ಲಿರುವ ಸೃಜನಶೀಲ ಪ್ರಚೋದನೆ – ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಪ್ರಭಾವ.

ಶ್ರದ್ಧೆಯಿಲ್ಲದೆ ಪ್ರಪಂಚದಲ್ಲಿ ನಾವು ಯಾವ ಕೆಲಸವನ್ನೂ ಮಾಡಲಾರೆವು. ನಮ್ಮ ಶಕ್ತಿ ಸಾಮರ್ಥ್ಯಗಳಲ್ಲಿ ನಮಗೆ ಸಾಕಾದಷ್ಟು ನಂಬಿಕೆ ಇರಬೇಕು. ಇದನ್ನೇ ನಾವು ಆತ್ಮವಿಶ್ವಾಸ ಎನ್ನುವುದು. ಆತ್ಮವಿಶ್ವಾಸ ಇಲ್ಲದವನು ಹುಚ್ಚನೇ ಸರಿ. ಅಂತಹವನು ಒಂದು ವೇಳೆ ರಸ್ತೆಯಲ್ಲಿ ಹೋಗುತ್ತಿರುವಾಗ ಒಂದು ಸಣ್ಣ ಕಲ್ಲನ್ನೋ ಹಳ್ಳವನ್ನೋ ಕಂಡರೂ ಅಲ್ಲಿಯೇ ಕಂಗಾಲಾಗಿ ನಿಲ್ಲುವನು. ಏಕೆಂದರೆ ಅದನ್ನು ಎಡವದೇ ದಾಟಿ ಹೋಗುವಷ್ಟು ಕೂಡ ಅವನಿಗೆ ಆತ್ಮವಿಶ್ವಾಸವಿರದು. ಒಟ್ಟಿನಲ್ಲಿ ಸೃಜನಶೀಲ ಪ್ರಚೋದನೆಯು ನಮ್ಮಲ್ಲಿ ಮೊದಲು ಆತ್ಮವಿಶ್ವಾಸವನ್ನು ಸೃಜಿಸಬೇಕು. ಸೃಷ್ಟಿಕರ್ತನಲ್ಲಿ ಆತ್ಮವಿಶ್ವಾಸವು ಮೂಡಿದಾಗ ಸ್ಥೂಲ ಪಂಚಮಹಾಭೂತಗಳೆನಿಸಿದ ಆಕಾಶ, ವಾಯು, ತೇಜಸ್ಸು, ಅಪ್ಪು ಮತ್ತು ಭೂಮಿ ಇವುಗಳ ಉತ್ಪತ್ತಿ. ಈ ಪಂಚಭೂತಗಳಿಂದ ಪಂಚ ಜ್ಞಾನೇಂದ್ರಿಯಗಳ ಆವಿರ್ಭಾವ. ಆಕಾಶದ ಗುಣ (ಶಬ್ದ)ವನ್ನರಿಯಲು ಕಿವಿಗಳು, ವಾಯುವಿನ ಗುಣ (ಸ್ಪರ್ಶ)ವನ್ನು ಅರಿಯಲು ತ್ವಕ್ಕು, ತೇಜಸ್ಸಿನ ಗುಣ (ರೂಪ)ವನ್ನು ಅರಿಯಲು ಕಣ್ಣುಗಳು, ನೀರಿನ ಗುಣ (ರಸ)ವನ್ನು ಅರಿಯಲು ನಾಲಗೆ, ಭೂಮಿಯ ಗುಣ (ಗಂಧ) ವನ್ನು ಅರಿಯಲು ಮೂಗು – ಇವು ಉಂಟಾದವು.

ಈ ಐದು ಬೇರೆ ಬೇರೆ ಗುಣಗಳುಳ್ಳ ವಿವಿಧ ವಿಷಯಗಳನ್ನರಿಯಲು ಬೇರೆ ಬೇರೆ ಐದು ಇಂದ್ರಿಯಗಳು ಉಂಟಾದವು. ಈ ವಿವಿಧ ಅನುಭವಗಳನ್ನು ತರುವ ಇಂದ್ರಿಯಜ್ಞಾನವನ್ನು ಒಟ್ಟುಗೂಡಿಸಿ ಸುಸಂಗತವಾಗಿ ಸಂಯೋಜಿತವಾದ ಸಮನ್ವಯ ತಿಳಿವನ್ನು ಕೊಡುವ ಒಂದು ಕೇಂದ್ರೀಕರಣವು ಅಗತ್ಯವಾಯಿತು. ಈ ರೀತಿಯ ಸಮನ್ವಯ ಕೇಂದ್ರವೇ ಮನಸ್ಸು. ನಾವು ತೆಗೆದುಕೊಳ್ಳುವ ಆಹಾರದ ಸೂಕ್ಷ್ಮಾಂಶಗಳಿಂದ ಮನಸ್ಸು ರಚಿಸಲ್ಪಟ್ಟಿದೆ.

ನಾವು ತಿನ್ನುವ ಆಹಾರ (ಅನ್ನ) ದಿಂದ ನಮ್ಮ ದೇಹವು ಪೋಷಿತವಾಗಿದೆ. ಅನ್ನದಿಂದ ವೀರ್ಯಶಕ್ತಿ. ದೇಹವು ಆಹಾರದಿಂದ ಪುಷ್ಟಿಯಾದಾಗ ಮನಸ್ಸು ತನ್ನ ಚಿಂತನೆಗಳ ಮೂಲಕ ವ್ಯಕ್ತವಾಗುವುದು. ಮನಸ್ಸು ತನ್ನ ಯೋಚನಾಲಹರಿಯನ್ನು ಸಂಯಮದಿಂದ ಒಂದೇ ವಿಷಯದ ಕಡೆಗೆ ಕೇಂದ್ರೀಕರಿಸಿ ನಿರಂತರವಾಗಿ ಹರಿಯುವಂತೆ ಮಾಡುವುದು ತಪಸ್ಸು. ಈ ತಪಸ್ಸಿನ ಸಾಧನೆಯು ಸುಗಮವಾಗಿ ಮತ್ತು ಸಾಂಗವಾಗಿ ನಡೆಯುವುದಕ್ಕೋಸ್ಕರ ಆಯ್ದ ಪದಗುಚ್ಛಗಳನ್ನೊಳಗೊಂಡ ಸೂತ್ರ ಸಂಕೇತಗಳೇ ಮಂತ್ರಗಳು. ನಿಯಮಿತವಾದ ಅನುಕ್ರಮದಲ್ಲಿ ಮಂತ್ರಗಳನ್ನು ನಿಯೋಜಿತವಾದ ಧಾಟಿಯಲ್ಲಿ ಉಚ್ಚರಿಸುತ್ತಾ ವಿಧಿವತ್ತಾದ ಕ್ರಿಯೆಗಳನ್ನು ಮಾಡುವುದು ಕರ್ಮ. ಕರ್ಮದಿಂದ ಲೋಕಗಳ ಅಭಿವ್ಯಕ್ತ ಸ್ವರೂಪ. 'ಕರ್ಮವಿದ್ದಂತೆ ಲೋಕ' ಎಂಬುದು ಎಲ್ಲರಿಗೂ ತಿಳಿದ ವಿಷಯವೆ. ಲೋಕವಿದ್ದ ಮೇಲೆ ನಾಮರೂಪಗಳು. ನಾಮರೂಪಗಳಿಲ್ಲದ ವಸ್ತುಗಳಿಲ್ಲ. ವಸ್ತುಗಳಿಲ್ಲದೆ ಲೋಕವಿಲ್ಲ.

ಈ ಹದಿನಾರು ಕೊಂಡಿಗಳುಳ್ಳ ಸರಪಳಿಯಿಂದಲೇ ಸಂಸಾರಬಂಧ, ದುಃಖ. ನಮ್ಮ ಸೃಜನತೆಯ ಬಲವತ್ತರ ಪ್ರಚೋದನೆಯೇ ಈ ದುಃಖ ಪ್ರಪಂಚಕ್ಕೆ ಮೂಲ.

ಪಿಪ್ಪಲಾದ ಋಷಿಗಳ ಸೃಷ್ಟಿಯ ಈ ವಿವರಣೆಯು ಹಿಂದೂ ತತ್ತ್ವಶಾಸ್ತ್ರದಲ್ಲಿ ಪ್ರಸಿದ್ಧವಾದ ಸಾಂಪ್ರದಾಯಿಕ ನಿಲುವು. ಇದರಿಂದಲೇ ನಮ್ಮೊಳಗಿರುವ ಆಧ್ಯಾತ್ಮಿಕ ಚೇತನ ವಸ್ತುವನ್ನು 'ಹದಿನಾರು ಕಲೆಗಳುಳ್ಳ ಪುರುಷ' ಎಂದು ಸಾಮಾನ್ಯವಾಗಿ ನಿರ್ದೇಶಿಸುವುದು.

ಸಮಾಧಿಸ್ಥಿತಿಯಲ್ಲಿ ಯೋಗಿಯು ಪುರುಷನನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ ಈ ಕಲೆಗಳು ಏನಾಗುತ್ತವೆ ಎಂಬುದನ್ನು ಶ್ರುತಿಯು ಈ ಮಂತ್ರದಲ್ಲಿ ವಿವರಿಸಿ ಹೇಳುತ್ತಿದೆ. ಮೋಕ್ಷ ಕಾಲದಲ್ಲಿ ಕಲೆಗಳು ತಮ್ಮ ಹುಟ್ಟಿಗೆ ಕಾರಣವಾದ ಪಂಚಭೂತಗಳನ್ನು ಸೇರುತ್ತವೆ. ಹಗ್ಗದಲ್ಲಿ ಉಂಟಾಗಿದ್ದ ಹಾವಿನ ಭ್ರಾಂತಿಯು ನಿರಸನವಾದಾಗ, ಅವಿದ್ಯೆಯ ಹಾವು ಹಗ್ಗದಲ್ಲೇ ಸೇರಿಹೋದಂತೆ ಜ್ಞಾನೋದಯವಾದ ಬಳಿಕ ಈ ಕಲೆಗಳೂ ಯಾವ ಭೂತವಸ್ತುಗಳಿಂದ ಉಂಟಾಗಿದ್ದವೋ ಅವುಗಳೊಳಗೇ ಸೇರಿ ಮಾಯವಾಗುತ್ತವೆ.

**ದೇವಾಶ್ಚ ಸರ್ವೇ ಪ್ರತಿದೇವತಾಸು –**

'ದೇವತೆಗಳೆಲ್ಲರೂ ಪ್ರತಿದೇವತೆಗಳಲ್ಲಿ ಸೇರುತ್ತಾರೆ.' ಉಪನಿಷತ್ತಿನ ಪದಪ್ರಯೋಗದ ಧಾಟಿಯನ್ನು ಸ್ವಲ್ಪಮಟ್ಟಿಗೆ ನಾವಾಗಲೇ ತಿಳಿದಿದ್ದೇವೆ. ಇಲ್ಲಿ ದೇವತೆಗಳೆಂದರೆ ಅಧಿಷ್ಠಾನ ದೇವತೆಗಳು. ಒಂದೊಂದು ಇಂದ್ರಿಯಕ್ಕೂ ಒಬ್ಬೊಬ್ಬ ಅಧಿಷ್ಠಾನ ದೇವತೆ ಅಥವಾ ತತ್ತ್ವಾಭಿಮಾನಿ ದೇವತೆ ಕಲ್ಪಿತವಾಗಿದೆ. ಅಧಿಷ್ಠಾನ ಅಥವಾ ಅಧಿದೇವತೆಯೆಂದರೆ ಇಂದ್ರಿಯ ಶಕ್ತಿ. ಇಂದ್ರಿಯ ಗೋಲಕಗಳು ತಮಗೆ ಸಂಬಂಧಪಟ್ಟ ವಿಷಯಗಳಿಂದ ಬರುವ ಪ್ರಚೋದನಾ ಪ್ರಭಾವವನ್ನು ಗ್ರಹಿಸಿ ಅವುಗಳ ಸಂಗ್ರಹಣೆಯನ್ನು ಮನಸ್ಸಿಗೆ ವರದಿ ಮಾಡುವ ಶಕ್ತಿಯನ್ನು ಪಡೆದಿರುತ್ತವೆ. ಒಂದೊಂದು ಶಕ್ತಿಯನ್ನೂ ಒಂದೊಂದು ದೇವತೆಯೆಂದು ಭಾವಿಸುವುದು ನಮ್ಮ ತಾತ್ತ್ವಿಕ ಪದ್ಧತಿ. ಉದಾಹರಣೆಗೆ ವೇದಾಂತದ ಪ್ರಕಾರ ಕಣ್ಣಿನ ಅಧಿಷ್ಠಾನ ದೇವತೆ ಸೂರ್ಯ. ಹಾಗೆಂದರೆ ಬಣ್ಣ, ರೂಪಗಳನ್ನು ಕಾಣುವ ಶಕ್ತಿ ಕಣ್ಣಿಗೆ ಸಾಧ್ಯವಾಗುವುದು ಸೂರ್ಯನ ಬೆಳಕಿನಲ್ಲಿ ಮಾತ್ರ, ಎಂದು. ಆದ್ದರಿಂದ ಕಣ್ಣಿಗೆ ಅಧಿದೇವತೆ ಸೂರ್ಯ. ಕಣ್ಣು ಉಪಕರಣ. ಅದರ ಶಕ್ತಿಪ್ರದಾತ ಸೂರ್ಯ ಎಂಬುದು ಅರ್ಥ. ಇಲ್ಲಿ ಸೂರ್ಯನನ್ನು ಉಪಲಕ್ಷಣವಾಗಿ ಹೇಳಿದೆ. ಹಾಗೆಯೇ ಉಳಿದ ಇಂದ್ರಿಯಗಳೂ ಬೇರೆ ಬೇರೆ ದೇವತೆಗಳ ಆಧಿಪತ್ಯದಲ್ಲಿ ಕೆಲಸ ಮಾಡುವುದರಿಂದ ಆಯಾ ದೇವತೆಗಳು ಆ ಇಂದ್ರಿಯಗಳ ಅಧಿದೇವತೆಗಳು. ಆತ್ಮಜ್ಞಾನಿಯ ವಿಷಯದಲ್ಲಿ ಈ ಇಂದ್ರಿಯಗಳ ವಿಶಿಷ್ಟ ಶಕ್ತಿಗಳು ಯಾವುದರಿಂದ ತಾವು ಉಂಟಾದವೋ ಬ್ರಹ್ಮಾಂಡದ ಆ ಪಂಚಮಹಾಭೂತಗಳಿಗೆ ಹಿಂದಿರುಗಿ ಹೋಗುತ್ತವೆ ಎಂದು ಶ್ರುತಿಯು ಹೇಳುತ್ತಿದೆ.

**ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ –**

ಲೋಕದಲ್ಲಿ ಪ್ರತಿಯೊಬ್ಬನೂ ತನ್ನ ಕರ್ಮೇಂದ್ರಿಯಗಳ ಮೂಲಕ ಕೆಲಸ ಮಾಡುತ್ತಾನೆ. ತನ್ನ ಜ್ಞಾನೇಂದ್ರಿಯಗಳ ಮೂಲಕ ಅನುಭವ ಪಡೆಯುತ್ತಾನೆ. ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಸ್ವಸ್ವಸ್ಥಿತಿಯಲ್ಲಿರುವಾಗ ಮನುಷ್ಯನು ಕೆಲಸ ಮಾಡದೆ ಇರಲಾರ. ಆದರೆ ಕೆಲಸ ಮಾಡುವ ಕರ್ತೃವು ಅಹಂಭಾವದ ಜೀವ. ಜೀವಭಾವವೆನ್ನುವುದು ಆತ್ಮವು ಮನಸ್ಸು, ಬುದ್ಧಿಗಳ ಉಪಾಧಿದ್ವಾರಾ ಪ್ರಕಟವಾಗುವ ಅರಿವು ಎಂದು ಈಗಾಗಲೇ ನಾವು ತಿಳಿದಿದ್ದೇವೆ. ಆದ್ದರಿಂದ 'ವಿಜ್ಞಾನಮಯ ಆತ್ಮಾ' ಎಂಬುದು ನಮ್ಮ ಜೀವಭಾವಕ್ಕೆ ಅನ್ವಯಿಸುತ್ತದೆ.

ಆತ್ಮಜ್ಞಾನಿಗೆ ಹಿಂದಿನ ಕರ್ಮಗಳ ಫಲವು (ಫಲವನ್ನು ಕೊಡಲು ಇನ್ನೂ ಆರಂಭಿಸದೇ ಇರುವಂತಹವು) ಯಾವ ಪರಿಣಾಮವನ್ನೂ ಮಾಡಲಾರವು. ಆತ್ಮಜ್ಞಾನವಾದ ಮೇಲೆ ಉಪಾಧಿಗಳಾದ ಮನಸ್ಸು ಬುದ್ಧಿಗಳು ತಾನೇ ಎಂಬ ಅವಿದ್ಯೆಯು ತೊಲಗಿಹೋಗಿರುವುದರಿಂದ ಅವನು ಮಾಡುವ ಮುಂದಿನ ಕರ್ಮಗಳ ಫಲಗಳು ಬ್ರಹ್ಮದಲ್ಲೇ ಸೇರಿಹೋಗುವುವು.

ಹೀಗೆ ಕರ್ಮಗಳೂ, ಅವುಗಳ ಫಲಗಳೂ ಹಾಗೂ ಅವಿದ್ಯೆಯಿಂದುಂಟಾಗುವ ಅಹಂಭಾವದ ಜೀವವೂ – ಎಲ್ಲವೂ ಹುಟ್ಟಿಲ್ಲದ, ನಾಶವಿಲ್ಲದ, ತನಗೆರಡನೆಯದಿಲ್ಲದ ಬ್ರಹ್ಮದೊಡನೆ ಲಯವಾಗುವುವು, ಎಂದು ಶ್ರುತಿಯು ತಿಳಿಸುತ್ತಿದೆ.

## ಪರಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗುತ್ತಾನೆ

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ–**
**ಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।**
**ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ**
**ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥** ೮

**ಯಥಾ** – ಹೇಗೆ, **ಸ್ಯಂದಮಾನಾಃ** – ಹರಿಯುತ್ತಿರುವ, **ನದ್ಯಃ** – ನದಿಗಳು, **ನಾಮರೂಪೇ** – ಹೆಸರು ಮತ್ತು ಆಕಾರಗಳನ್ನು, **ವಿಹಾಯ** – ಬಿಟ್ಟು, **ಸಮುದ್ರೇ** – ಸಮುದ್ರದಲ್ಲಿ, **ಅಸ್ತಂ ಗಚ್ಛಂತಿ** – ಅದೃಶ್ಯವಾಗುವುವೋ, **ತಥಾ** – ಹಾಗೆಯೇ, **ವಿದ್ವಾನ್** – ವಿದ್ವಾಂಸನು, **ನಾಮ ರೂಪಾತ್** – ನಾಮ ರೂಪಗಳಿಂದ, **ವಿಮುಕ್ತಃ** – ಬಿಡುಗಡೆ ಹೊಂದಿ, **ಪರಾತ್ ಪರಂ** – ಅಕ್ಷರಕ್ಕಿಂತ ಹೆಚ್ಚಿನವನಾದ, **ದಿವ್ಯಂ ಪುರುಷಂ** – ಸರ್ವರ ಹೃದಯದಲ್ಲಿರುವ ದಿವ್ಯ ಪುರುಷನನ್ನು, **ಉಪೈತಿ** – ಹೊಂದುತ್ತಾನೆ.

**(೮) ಹೇಗೆ ನದಿಗಳು ಹರಿಯುತ್ತ ಹೋಗಿ ತಮ್ಮ ಹೆಸರು ಮತ್ತು ಆಕಾರಗಳನ್ನು ಬಿಟ್ಟು ಸಮುದ್ರದಲ್ಲಿ ಒಂದಾಗಿ ಕಾಣದೇ ಹೋಗುವುವೋ ಹಾಗೆಯೇ ವಿದ್ವಾಂಸನು ಅವಿದ್ಯೆಯಿಂದ ಉಂಟಾಗಿರುವ ನಾಮರೂಪಗಳಿಂದ ಬಿಡುಗಡೆ ಹೊಂದಿ ಪರಾತ್ಪರನೂ, ದಿವ್ಯನೂ ಆದ ಪುರುಷನನ್ನು**

ಸೇರಿಕೊಳ್ಳುವನು.

ಸಮುದ್ರ ಸಾಗರಗಳಲ್ಲಿನ ನೀರು ಆವಿಯಾಗಿ ಆಕಾಶದಲ್ಲಿ ಮೋಡಗಳಾಗಿ ಪರಿಣಮಿಸುವುದು. ಮೋಡವು ಹನಿಯ ರೂಪದಲ್ಲಿ ಕೆಳಗೆ ಬಿದ್ದು 'ಮಳೆ' ಎನಿಸಿಕೊಳ್ಳುವುದು. ಮಳೆಯ ನೀರು ಒಟ್ಟುಗೂಡಿ ಪ್ರವಹಿಸಿ 'ನದಿ' ಎಂದು ಕರೆಸಿಕೊಳ್ಳುವುದು. ನದಿಗಳು ಬೇರೆ ಬೇರೆ ಗುಣಗಳುಳ್ಳ ಮಣ್ಣಿನ ಪ್ರದೇಶಗಳಲ್ಲಿ ಹರಿದು ತಮ್ಮದೇ ಆದ ಸ್ವಂತ ವ್ಯಕ್ತಿತ್ವವನ್ನು ಹೊಂದಿ ವಿವಿಧ ಹೆಸರುಗಳನ್ನು ಪಡೆಯುವುವು. ಅವೆಲ್ಲವೂ ನದಿಗಳೇ ಆಗಿದ್ದರೂ ಅವು ಒಂದೇ ಅಲ್ಲ, ಪ್ರತ್ಯೇಕ. ಗಂಗಾನದಿ ಮಿಸ್ಸಿಸಿಪಿಯಲ್ಲ. ಯಮುನಾ ನದಿ ಗೋದಾವರಿಯಲ್ಲ. ಆದರೆ ಅವೆಲ್ಲವೂ ಸಮುದ್ರವನ್ನು ಸೇರಿದಾಗ ತಮ್ಮ ಪ್ರತ್ಯೇಕತೆ, ರೂಪ ಗುಣಗಳು ಹಾಗೂ ಹೆಸರುಗಳನ್ನು ಕಳೆದುಕೊಂಡು ಸಮುದ್ರದ ನೀರಿನಲ್ಲಿ ಒಂದಾಗುತ್ತವೆ.

ಪ್ರಕೃತಿಯಲ್ಲಿ ಸಂಭವಿಸುವ ಈ ಘಟನೆಯನ್ನು, ಸಾಧಕನು ತನ್ನ ಜೀವನದ ಪರಮಾರ್ಥ ಗುರಿಯನ್ನು ಸಾಧಿಸಿ ಕೊನೆಗೆ ಪರಬ್ರಹ್ಮನಲ್ಲಿ ಸೇರಿ ಲೀನವಾಗಿ ಹೋಗುವುದಕ್ಕೆ ಶ್ರುತಿಯು ಹೋಲಿಸಿದೆ. ಸಾಧಕನು ಎಲ್ಲಿಯವರೆಗೆ ತನ್ನನ್ನು ಸುತ್ತುವರಿದಿರುವ ಸ್ಥೂಲವಸ್ತುಗಳೊಂದಿಗೆ ತಾದಾತ್ಮ್ಯಹೊಂದಿ ತನ್ನ ಪ್ರತ್ಯೇಕತೆಯನ್ನು ಸ್ಥಾಪಿಸಿಕೊಂಡಿರುತ್ತಾನೋ ಅಲ್ಲಿಯವರೆಗೆ ಅವನು ಸಂಸಾರಿ ಹಾಗೂ ಅಹಂಭಾವದ ಜೀವಿ. ಈ ಜೀವಭಾವವೇ ಲೋಕದಲ್ಲಿ ನೋವು, ಸಂಕಟ, ಸಂಕೋಚತೆ ಮತ್ತು ಮೃತ್ಯುಭಯಗಳ ಮೂಲ. ಯಾವಾಗ ಸಾಧಕನು ಧ್ಯಾನ ತಪಸ್ಸುಗಳ ಮೂಲಕ ವಿವೇಕ ವೈರಾಗ್ಯಗಳನ್ನು ಪಡೆದು ತನ್ನ ನಿಜಸ್ವರೂಪವನ್ನು ತಿಳಿಯುತ್ತಾನೋ ಆಗ ಅವನು ಎಲ್ಲ ಬಂಧಗಳಿಂದಲೂ ಮುಕ್ತನಾಗುತ್ತಾನೆ. ಜ್ಞಾನೋದಯವಾದ ಮೇಲೆ, ಯಾವ ದೇಹ, ಮನಸ್ಸು ಬುದ್ಧಿಗಳಿಂದ ಹಿಂಸೆಗೆ ಒಳಗಾಗುತ್ತಿದ್ದನೋ ಅವೆಲ್ಲವೂ ಆತ್ಮನನ್ನು ಆಶ್ರಯಿಸಿಯೇ ತಮ್ಮ ಅಸ್ತಿತ್ವವನ್ನು ಹೊಂದಿವೆ ಎಂಬುದು ಅವನ ಅರಿವಿಗೆ ಬರುತ್ತದೆ. ಆ ಅದ್ಭುತ ಶಕ್ತಿಯುಳ್ಳ ಆತ್ಮವೇ ತಾನು ಎಂದಾಗ ಅವನ ಕಷ್ಟಗಳೂ ಕರಗಿ ಮಾಯವಾಗುವುವು. ಪ್ರತ್ಯೇಕತೆಗೆ ಕಾರಣವಾಗಿದ್ದ ಅಹಂಕಾರದ ಜೀವಭಾವವೂ ನಾಶವಾಗುವುದು. ಆಗ ಅವನು ದೈವತ್ವದ ಗಿರಿಶಿಖರವನ್ನೇರಿ ರಾರಾಜಿಸುತ್ತಿರುವನು; ಅಂದರೆ ಜ್ಯೋತಿಸ್ಸ್ವರೂಪನಾದ ಪರಮಾತ್ಮನನ್ನು ಸೇರಿ ಅವನಲ್ಲಿ ಲೀನವಾಗುವನು.

## ಪರಬ್ರಹ್ಮವನ್ನು ಅರಿತವನು ಅಮೃತನಾಗುವನು

**ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ**
**ಬ್ರಹ್ಮೈವ ಭವತಿ ನಾಸ್ಯಾಬ್ರಹ್ಮವಿತ್ ಕುಲೇ ಭವತಿ ।**
**ತರತಿ ಶೋಕಂ ತರತಿ ಪಾಪ್ಮಾನಂ**
**ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥ ೯**

**ಯಃ ಹ ವೈ** – ಯಾವಾತನಾದರೋ, **ತತ್** – ಆ, **ಪರಮಂ ಬ್ರಹ್ಮ** –

ಪರಬ್ರಹ್ಮವನ್ನು, **ವೇದ** – ತಿಳಿಯುವನೋ, **ಸಃ** – ಅವನು, **ಬ್ರಹ್ಮ ಏವ** – ಬ್ರಹ್ಮವೇ, **ಭವತಿ** – ಆಗುವನು, **ಅಸ್ಯ** – ಇವನ, **ಕುಲೇ** – ವಂಶದಲ್ಲಿ, **ಅಬ್ರಹ್ಮವಿತ್** – ಬ್ರಹ್ಮವನ್ನು ತಿಳಿಯದವನು, **ನ ಭವತಿ** – ಹುಟ್ಟುವುದಿಲ್ಲ, (ಇವನು) **ಶೋಕಂ ತರತಿ** – ಶೋಕವನ್ನು ದಾಟುತ್ತಾನೆ, **ಪಾಪ್ಮಾನಂ** – ಪಾಪವನ್ನು, **ತರತಿ** – ದಾಟುತ್ತಾನೆ, **ಗುಹಾಗ್ರಂಥಿಭ್ಯಃ** – ಹೃದಯದಲ್ಲಿ ಅವಿದ್ಯೆಯಿಂದುಂಟಾಗಿರುವ ಗಂಟುಗಳಿಂದ, **ವಿಮುಕ್ತಃ** – ಬಿಡುಗಡೆ ಹೊಂದಿದವನಾಗಿ, **ಅಮೃತಃ ಭವತಿ** – ಅಮೃತನಾಗುತ್ತಾನೆ.

(೯) ಯಾವಾತನು ಆ ಪರಬ್ರಹ್ಮವನ್ನು ತಿಳಿದುಕೊಳ್ಳುವನೋ ಅವನು ಬ್ರಹ್ಮವೇ ಆಗುವನು. ಇವನ ಕುಲದಲ್ಲಿ ಬ್ರಹ್ಮವನ್ನು ಅರಿಯದವನು ಹುಟ್ಟುವುದಿಲ್ಲ. ಇವನು ಶೋಕವನ್ನೂ, ಪಾಪವನ್ನೂ ದಾಟುವನು. ಹೃದಯದ ಅವಿದ್ಯೆಯ ಗಂಟುಗಳಿಂದ ಬಿಡುಗಡೆಹೊಂದಿ ಅವನು ಅಮೃತನಾಗುವನು.

ಇಲ್ಲಿ ಅರಿಯುವುದು (ವೇದ) ಎಂದರೆ ತನ್ನ ಅಂತರ್ಯದಲ್ಲಿ ಅನುಭವಕ್ಕೆ ತಂದುಕೊಳ್ಳುವುದು ಎಂದು. ವೇದಾಂತವಿಜ್ಞಾನ ಸಾಧಕನು ಅವಿದ್ಯೆಯಿಂದುಂಟಾದ ತನ್ನ ದುರ್ಗುಣಗಳನ್ನೂ, ಪಾಶವೀವೃತ್ತಿಗಳನ್ನೂ ದೂರಮಾಡಿ, ಧ್ಯಾನೋಪಾಸನೆಗಳಿಂದಲೂ, ವಿವೇಕವೈರಾಗ್ಯಗಳಿಂದಲೂ ಪರಮಾತ್ಮ ಸ್ವರೂಪವೇ ತನ್ನ ನಿಜಸ್ವರೂಪವೆಂಬುದನ್ನು ಅನುಭವಪೂರ್ವಕವಾಗಿ ತಿಳಿಯುತ್ತಾನೆ. ಆಗ ಅವನ ಅಹಂಭಾವದ ಜೀವಭ್ರಮೆಯು ನಿರಸನವಾಗುವುದು.

'ನಾನು ಪ್ರತ್ಯೇಕವಾದ ಸ್ವತಂತ್ರ ಜೀವ' ಎನ್ನುವ ಭ್ರಮೆಯನ್ನು ನಾಶಪಡಿಸುವುದೇ ವೇದಾಂತ ಸಾಧನೆಯ ಗುರಿ. ಈ ಭ್ರಮೆಯುಂಟಾಗುವುದು ಅವಿದ್ಯೆಯಿಂದ. ಅವಿದ್ಯೆಯು ನಾಶವಾಗಿ ಅಹಂಕಾರದ ಜೀವಭಾವವು ತೊಲಗಿದೊಡನೆಯೇ ಜ್ಞಾನೋದಯವಾಗಿ ಅದರ ಜಾಗದಲ್ಲಿ ಪರಮಾತ್ಮಭಾವವು ಮೂಡುವುದು.

ಪರಮಾತ್ಮಭಾವವು ನಮ್ಮಲ್ಲಿ ಮೂಡಿದೊಡನೆಯೇ ನಮಗೆ ಸರ್ವಾಂತರ್ಯಾಮಿಯಾಗಿ ಸರ್ವಗತನಾಗಿರುವ . ಪರಮಾತ್ಮಾನುಭವ ಉಂಟಾಗುವುದು. ಪ್ರಪಂಚದ ಯಾವ ಒಂದು ಭಾಗದಲ್ಲೋ ನಾವು ಒಂದು ಚೂರು ಬೆಲ್ಲವನ್ನು ಸವಿದು ಅದರ ಅನುಭವ ಗಳಿಸಿದರೆ ಸಾಕು, ಅದು ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ, ಯಾವ ಬೆಲ್ಲವನ್ನು ತಿಂದರೂ ಉಂಟಾಗುವ ಅನುಭವ ಹೇಗಿರುತ್ತದೆಂಬುದನ್ನು ತಿಳಿಸುತ್ತದೆ. ಪರಮಾತ್ಮಾನುಭವವೂ ಹಾಗೆಯೇ.

'ಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗುತ್ತಾನೆ' ಎಂದು ಶ್ರುತಿಯು ಹೇಳಿದೆ. ಸಮುದ್ರದ ನೀರಿನ ಒಂದು ತೊಟ್ಟು ನನ್ನ ಬೆರಳಿನ ತುದಿಯಲ್ಲಿ ನೇತಾಡುತ್ತಿರುವವರೆಗೆ ಅದು ಸಮುದ್ರಕ್ಕಿಂತ ಬೇರೆ. ಆ ತೊಟ್ಟು ಸಮುದ್ರದಲ್ಲಿ ಬಿದ್ದು ಅದರ ನೀರಿನೊಡನೆ ಒಂದಾದರೆ ಆಗ ಅದಕ್ಕೆ ಪ್ರತ್ಯೇಕ ಅಸ್ತಿತ್ವವು ಇರುವುದಿಲ್ಲ; ಪ್ರತ್ಯೇಕ ಹೆಸರೂ, ರೂಪವೂ ಇರುವುದಿಲ್ಲ. ಹಾಗೆಯೇ ತನ್ನನ್ನು ಬಳಸಿರುವ ದೇಹ, ಮನಸ್ಸು, ಬುದ್ಧ್ಯಾದಿ ಸ್ಥೂಲವಸ್ತುಗಳನ್ನೇ ಅವಿದ್ಯೆಯಿಂದ ಆತ್ಮನೆಂದುಕೊಂಡಾಗ ಉಪಾಧಿಗಳೇ ತಾನೆಂಬ ಭ್ರಾಂತಿಭಾವನೆ ನಮ್ಮ ಚಿತ್ತದಲ್ಲಿ

ಉಂಟಾಗುತ್ತದೆ. ಈ ಉಪಾಧಿಗಳಿಂದ ಸಂಕುಚಿತಭಾವವನ್ನು ಪಡೆದ ಆತ್ಮವು ಜೀವವೆನಿಸಿಕೊಂಡು ಕಷ್ಟಸುಖಗಳನ್ನೂ, ಅಲ್ಪತೆ, ಅಸಮರ್ಥತೆಗಳನ್ನೂ ಅನುಭವಿಸುತ್ತದೆ. ಈ ಸಂಕೋಚ, ಅಲ್ಪತೆ, ಅಸಮರ್ಥತೆಗಳು ಉಂಟಾಗಿರುವುದು ಉಪಾಧಿಗಳಿಂದ. ಉಪಾಧಿಗಳು ತಾನಲ್ಲ, ತನ್ನ ನಿಜವಾದ ಸ್ವರೂಪ ಪರಮಾತ್ಮ ಸ್ವರೂಪ ಎಂಬುದು ಚಿತ್ತದಲ್ಲಿ ಸ್ಫುರಿಸಿದ ಕೂಡಲೇ ಆತ್ಮವು ತನ್ನ ಸಂಕುಚಿತ ಭಾವವನ್ನು ಕಳೆದುಕೊಂಡು ಸರ್ವಾಂತರ್ಯಾಮಿಯೂ, ಸರ್ವವ್ಯಾಪಕವೂ ಆದ ಪರಮಾತ್ಮಭಾವವನ್ನು ತಳೆಯುತ್ತದೆ.

'ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ' ಎಂಬ ಋಷಿಪ್ರೋಕ್ತ ಘೋಷಣೆಯು ಅದ್ವೈತ ಸಿದ್ಧಾಂತಕ್ಕೆ ಅಡಿಗಲ್ಲು. ಈ ಸೂಕ್ತದ ಮಹತ್ವದಿಂದಲೇ ಮುಂಡಕೋಪನಿಷತ್ತನ್ನು ಪ್ರಸಿದ್ಧವೂ, ಪ್ರಧಾನವೂ ಆದ ದಶೋಪನಿಷತ್ತುಗಳಲ್ಲಿ ಒಂದಾಗಿ ಹಿಂದೂಶಾಸ್ತ್ರಜ್ಞರು ಪರಿಗಣಿಸಿದ್ದಾರೆ. ವೇದಾಂತದ ಮಹಾನ್ ಆಚಾರ್ಯರುಗಳು ಈ ಶ್ರುತಿವಾಕ್ಯದ ಮೇಲೆ ಬಹಳ ಗಂಭೀರ ಹಾಗೂ ಪ್ರಗಲ್ಭ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

**ನಾಸ್ಯಾಬ್ರಹ್ಮವಿತ್ ಕುಲೇ ಭವತಿ –**

ಬ್ರಹ್ಮಜ್ಞಾನಿಯ ಕುಲದಲ್ಲಿ ವೇದಾಂತ ಸಂಸ್ಕೃತಿಯನ್ನರಿಯದವನು ಮತ್ತು ಬ್ರಹ್ಮಜಿಜ್ಞಾಸೆ ಮಾಡದವನು ಹುಟ್ಟುವುದಿಲ್ಲ ಎಂದು ಶ್ರುತಿಯು ಹೇಳುತ್ತದೆ. ಸನಾತನಧರ್ಮದಲ್ಲಿನ ಈ ಗಾಢ ನಂಬಿಕೆಯೇ ಹಿಂದೂ ಋಷಿಗಳು ತಮ್ಮ ಮಕ್ಕಳನ್ನು ಆರ್ಯಸಂಸ್ಕೃತಿಯ ದಿವ್ಯ ಹೆದ್ದಾರಿಯಲ್ಲಿ ನಡೆಸಲು ಕೈದೀವಟಿಗೆಯಾಗಿತ್ತು. ವೇದಾಂತಜ್ಞಾನವು ತಂದೆಯಿಂದ ಮಗನಿಗೆ, ಮಗನಿಂದ ಅವನ ಮಗನಿಗೆ – ಹೀಗೆ ಆರ್ಯರಲ್ಲಿ ಪರಂಪರೆಯಾಗಿ ನಡೆದುಬರುತ್ತಿದ್ದುದು ಆಗಿನ ಸಂಪ್ರದಾಯ. ಈ ಸಂಸ್ಕೃತಿಯಲ್ಲೇ ಬೆಳೆದುಬಂದ ಕಿರಿಯರು ಅದನ್ನೇ ಮುಂದುವರಿಸುತ್ತಿದ್ದರು. ತಂದೆಯು ಬೋಧಿಸಿದ್ದು ಅಪೂರ್ಣವೆನಿಸಿದರೆ ಬೇರೆ ಶ್ರೇಷ್ಠ ಬ್ರಹ್ಮನಿಷ್ಠರಾದ ಗುರುಗಳಲ್ಲಿ ಅಧ್ಯಯನಕ್ಕಾಗಿ ಹೋಗುತ್ತಿದ್ದರು. ಆದ್ದರಿಂದ ಅವರ ಮನೆತನದಲ್ಲಿ ಬ್ರಹ್ಮಜಿಜ್ಞಾಸೆ ಮಾಡದವನು ಇರುತ್ತಿರಲಿಲ್ಲ ಎಂಬುದು ಅತಿಶಯೋಕ್ತಿಯೇನಲ್ಲ.

ಯಾವುದಾದರೂ ಒಂದು ವಂಶದಲ್ಲಿ ಮೇಧಾವಿಯೂ, ಸುಸಂಸ್ಕೃತನೂ, ಘನಪಂಡಿತನೂ ಆದ ಮಹಾಪುರುಷನೊಬ್ಬನು ಹುಟ್ಟಿದರೆ, ಅವನ ಮನೆತನದಲ್ಲಿ ಅನೇಕ ತಲೆಮಾರಿನವರೆಗೂ ಆತ್ಮಜ್ಞಾನದ ಹಾಗೂ ವಿಶೇಷ ಸಂಸ್ಕೃತಿಯ ಹಿರಿಮೆಯ ಪ್ರವಾಹವು ಪರಂಪರೆಯಾಗಿ ಹರಿದು ಬರುತ್ತಿತ್ತು. ಅದಕ್ಕೆ ಕಾರಣವೇನೆಂದರೆ ಆಗಿನ ಕಾಲದಲ್ಲಿ ಧರ್ಮಶ್ರದ್ಧೆ, ನೀತಿಯುತ ಬಾಳ್ವೆ, ಪ್ರಾಮಾಣಿಕ ನಡವಳಿಕೆ, ಉದಾತ್ತ ಧ್ಯೇಯ, ಘನತೆ ಗಾಂಭೀರ್ಯಗಳ ಪಾಲನೆ – ಈ ಉನ್ನತ ಮೌಲ್ಯಗಳನ್ನು ಎತ್ತಿಹಿಡಿಯುವ ಕಟ್ಟುನಿಟ್ಟಾದ ನೀತಿನಿಯಮಗಳು ಅವರ ಆಚಾರವಿಚಾರಗಳನ್ನು ನಿಯಂತ್ರಿಸುತ್ತಿದ್ದವು. ಧರ್ಮಶಾಸ್ತ್ರವನ್ನನುಸರಿಸಿ ಸಮಾಜದ ಪದ್ಧತಿಗಳು,

ರೀತಿರಿವಾಜುಗಳು ನಿಯಮಿಸಲ್ಪಟ್ಟಿದ್ದವು. ಹೀಗಾಗಿ ಹಿಂದೂ ಸಂಸ್ಕೃತಿಯು ಸಾವಿರಾರು ವರ್ಷಗಳಾದರೂ ಸುಭದ್ರವಾಗಿ ಉಳಿಯಲು ಸಾಧ್ಯವಾಯಿತು.

**ತರತಿ ಶೋಕಂ ತರತಿ ಪಾಪ್ಮಾನಂ–**

ಬ್ರಹ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ ಮತ್ತು ಪಾಪವನ್ನೂ ದಾಟುತ್ತಾನೆ – ಇದು ಶ್ರುತಿವಾಕ್ಯ. ಯಾವನು ಲೋಕದ ದುಃಖದಿಂದ ಸಂತಪ್ತನಾಗಿದ್ದಾನೋ ಅಂತಹವನೇ ಆಧ್ಯಾತ್ಮಮೇಲ್ಮೆಯನ್ನು ಸಾಧಿಸಲು ಪ್ರಯತ್ನಿಸುತ್ತಾನೆ. ಪ್ರತಿಯೊಬ್ಬ ಸಾಧಕನೂ ಕಷ್ಟ–ಕಾರ್ಪಣ್ಯ, ನೋವು–ಸಂಕಟ, ವ್ಯಾಧಿ–ಮೃತ್ಯುಗಳಿಂದ ಶಾಶ್ವತವಾಗಿ ಪಾರಾಗುವ ಇಚ್ಛೆಯಿಂದಲೇ ಮೋಕ್ಷಪ್ರಾಪ್ತಿಗೆ ಹವಣಿಸುತ್ತಾನೆ. ಮೋಕ್ಷದಲ್ಲಿ ಯಾವ ತಾಪತಳಮಳಕ್ಕೂ, ನೋವುಕಾವುಗಳಿಗೂ ಪ್ರವೇಶವಿಲ್ಲ. ಅಲ್ಲಿರುವುದೆಲ್ಲಾ ಸುಖ, ಶಾಂತಿ, ಆನಂದಗಳೇ. ಅವುಗಳನ್ನು ಯಾರು ಬಯಸುವುದಿಲ್ಲ ? ಆತ್ಮಜ್ಞಾನಿಯಾದವನು ಶೋಕವನ್ನು ದಾಟುತ್ತಾನೆ ಎಂದರೆ ಮೋಕ್ಷ ಗಳಿಸುತ್ತಾನೆ ಎಂದು ಶ್ರುತಿಯು ಸೂಚಿಸುತ್ತಿದೆ.

ಪಾಪ, ಎನ್ನುವುದು ನಮ್ಮ ತಪ್ಪು ನಡವಳಿಕೆಯಿಂದ ಮನಸ್ಸಿನ ಮೇಲೆ ಆಗುವ ಆಘಾತದ ದಾಖಲೆ. ಇವುಗಳ ಕಪ್ಪುಕಲೆ ಮನಸ್ಸಿನ ಶುಭ್ರತೆಯನ್ನು ಮಲಿನಗೊಳಿಸುತ್ತದೆ. ಮನಸ್ಸಿನ ಶಕ್ತಿಯನ್ನು ಹಿಂಡಿ ಹೀರಿ ಹಿಪ್ಪೆ ಮಾಡುತ್ತದೆ. ಮನಸ್ಸನ್ನು ದುರ್ಬಲತೆಗೆ ಈಡುಮಾಡುತ್ತದೆ. ಕೊನೆಗೆ ಮನಸ್ಸನ್ನು ದುಃಖಕೂಪಕ್ಕೆ ತಳ್ಳುತ್ತದೆ.

ನೆನಪುಗಳು ನಾವು ಹಿಂದೆ ಮಾಡಿದ ಕರ್ಮಗಳ ಚಾರಿತ್ರಿಕ ಇಣುಕು ನೋಟ. ವಿರಾಮ ಸಮಯದಲ್ಲಿ ಮನಸ್ಸು ಆ ದೃಶ್ಯಗಳನ್ನು ಪುನರಾವೃತ್ತಿಮಾಡುತ್ತಾ ಅವುಗಳ ಪುನರಾನುಭವದಲ್ಲಿ ತೊಡಗಿದಾಗ, ಆ ಕರ್ಮಗಳು ಪುಣ್ಯ ಕೆಲಸಗಳಾಗಿದ್ದರೆ ಸುಖಸಂತೋಷಗಳ ಮಧುರಸುಧಾರಸಭಾವವು ಹೊರಹೊಮ್ಮುತ್ತದೆ. ಆ ಕರ್ಮಗಳೇನಾದರೂ ಪಾಪ ತರುವ ದುಷ್ಕೃತ್ಯಗಳಾಗಿದ್ದರೆ, ಎಲ್ಲಿಲ್ಲದ ನೋವು, ಯಾತನೆಗಳ ಅಸಹನೀಯ ಭಾವವು ತುಂಬಿಕೊಳ್ಳುತ್ತದೆ. ನಾವು ಮಾಡಿದ ಕರ್ಮಗಳ ಪ್ರತಿಕ್ರಿಯೆಗಳೇ ನಮಗೆ ಸುಖ–ಸಂತೋಷ ಅಥವಾ ನೋವು–ಸಂಕಟಗಳನ್ನು ತರುವ ಪುಣ್ಯ–ಪಾಪಗಳು. ಇವುಗಳಿಂದಲೇ ನಮಗೆ ಕರ್ಮಬಂಧನ ಉಂಟಾಗುವುದು.

ಜ್ಞಾನಿಯಾದವನು ತನ್ನ ಅಹಂಕಾರವನ್ನು ಅಡಗಿಸಿರುತ್ತಾನೆ. ಮನಸ್ಸಿನಲ್ಲಿ ತುಂಬಿದ್ದ ವಿಷಯ ವಾಸನಾ ಬೀಜಗಳನ್ನು ನಿರ್ಮೂಲ ಮಾಡಿರುತ್ತಾನೆ. ಹೀಗಾಗಿ ಹಿಂದಿನ ನೆನಪುಗಳು ಅವನನ್ನು ಬಾಧಿಸುವುದಿಲ್ಲ. ಅವನಿಗಿರುವುದು ಆತ್ಮಚಿಂತನೆಯೊಂದೇ. ವಿಷಯವಾಸನೆಗಳಿದ್ದಾಗಲೇ ಹಿಂದಿನ ನೆನಪುಗಳು ಕಾಡುವುದು. ಅವು ಹೋದಮೇಲೆ ಅವುಗಳನ್ನು ಕುರಿತ ಸುಖವಾಗಲಿ, ದುಃಖ ಸಂಕಟಗಳಾಗಲಿ ಇರುವುದಿಲ್ಲ. ಅವನು ಮಾಡುವ ಕರ್ಮದ ಯಾವ ಪ್ರತಿಕ್ರಿಯೆಯೂ ಅವನಿಗೆ ಇರುವುದಿಲ್ಲವಾದ್ದರಿಂದ 'ತರತಿ ಪಾಪ್ಮಾನಂ', ಪಾಪವನ್ನು

ದಾಟುತ್ತಾನೆ ಎಂದು ಶ್ರುತಿಯು ಹೇಳಿದೆ. ಪುಣ್ಯವೂ ಕರ್ಮದ ಪ್ರತಿಕ್ರಿಯೆಯಾದ್ದರಿಂದ ಅವನಿಗೆ ಪುಣ್ಯವೂ ಇರದು. ಶ್ರುತಿಯಲ್ಲಿ ಪುಣ್ಯವನ್ನು ಪಾಪಕ್ಕೆ ಸಮನಾಗಿಯೇ ಪರಿಗಣಿಸಿದೆ. ಏಕೆಂದರೆ ಪಾಪದಂತೆ ಪುಣ್ಯವೂ ಜ್ಞಾನಕ್ಕೆ ಅಡ್ಡಿಯಾಗಿರುತ್ತದೆ.

ಜ್ಞಾನಿಯಾದ ಅಂತಹ ಮಹಾತ್ಮನಿಗೆ ಸಾವೆಂಬುದಿಲ್ಲ. ಸಾವು ದೇಹಕ್ಕೆ, ಅಹಂಕಾರಕ್ಕೆ. ತಾನು ದೇಹವಲ್ಲ, ಆತ್ಮಸ್ವರೂಪ ಎಂಬುದನ್ನು ತಿಳಿದ ಜ್ಞಾನಿಗೆ ದೇಹವಿದ್ದರೂ ಒಂದೇ, ದೇಹವಿಲ್ಲವಾದರೂ ಒಂದೇ. ಹುಟ್ಟು ಸಾವುಗಳಿಲ್ಲದ ಪರಮಾತ್ಮನಲ್ಲಿ ಐಕ್ಯವಾದ ಚೈತನ್ಯಕ್ಕೆ ಸಾವಿನ ಭಯವೆಲ್ಲಿ ಬಂತು? ಅವನೂ ಪರಮಾತ್ಮನಂತೆ ಶಾಶ್ವತ. ಅವನು ನಿರ್ಲಿಪ್ತವಾಗಿ ಸಾವನ್ನೂ ಕಾಣುವ ಸಾಕ್ಷೀ.

'ಅಮೃತತ್ವ'ವು ದೇಹವನ್ನು ಕುರಿತು ಹೇಳಿರುವುದಲ್ಲ. ದೇಹಕ್ಕೆ ಮರಣವು ಅನಿವಾರ್ಯ ಮತ್ತು ಅಪರಿಹಾರ್ಯ. ದೇಹವು ಭೂತವಸ್ತು. ಮಿತಿಗೊಳಪಟ್ಟ ಲೌಕಿಕ ವಸ್ತು. ಯಾವುದೋ ಒಂದು ಕಾಲದಲ್ಲಿ ಅಸ್ತಿತ್ವಕ್ಕೆ ಬಂದದ್ದು. ಇಂತಹುದು ಖಂಡಿತವಾಗಿಯೂ ಅಂತ್ಯವುಳ್ಳದ್ದು. ಇಲ್ಲಿ ಹೇಳಿರುವುದು ಅವಿದ್ಯೆಯು ನಾಶವಾದಮೇಲೆ ಉಂಟಾಗುವ ಆತ್ಮಜ್ಞಾನದ ಅನುಭವ. ಆ ಆತ್ಮೈಕ್ಯಾನುಭವವು ನಿತ್ಯ ಮತ್ತು ಅಮೃತ. ಅದೇ ಮೋಕ್ಷ ಪ್ರಾಪ್ತಿ. ಅಲ್ಲಿಂದ ಪುನಃ ಇಹಲೋಕಕ್ಕೆ ಹಿಂತಿರುಗುವಂತಿಲ್ಲ. ಹುಟ್ಟಿಲ್ಲವಾದ್ದರಿಂದ ಸಾವೂ ಇಲ್ಲ!

## ಬ್ರಹ್ಮವಿದ್ಯಾ ಸಂಪ್ರದಾನ ವಿಧಿ

**ತದೇತದೃಚಾಭ್ಯುಕ್ತಮ್ –**
**ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ**
**ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ ।**
**ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ**
**ಶಿರೋವ್ರತಂ ವಿಧಿವದ್ ಯೈಸ್ತು ಚೀರ್ಣಮ್ ॥** ೧೦

**ತತ್ ಏತತ್** – ಆ ಈ ವಿಧಿಯು, **ಋಚಾ** – ಋಕ್ಕಿನಿಂದ, **ಅಭ್ಯುಕ್ತಂ** – ಹೇಳಲ್ಪಟ್ಟಿದೆ.

**ಯೇ** – ಯಾರು, **ಕ್ರಿಯಾವಂತಃ** – ಶಾಸ್ತ್ರದಲ್ಲಿ ಹೇಳಿರುವ ಕರ್ಮ ಮಾಡುವರೋ, **ಶ್ರೋತ್ರಿಯಾಃ** – ವೇದ ಶಾಸ್ತ್ರಗಳಲ್ಲಿ ಪರಿಣತರಾದವರೋ, **ಬ್ರಹ್ಮನಿಷ್ಠಾಃ** – ಬ್ರಹ್ಮವನ್ನು ತಿಳಿಯುವ ಇಚ್ಛೆಯುಳ್ಳವರೋ, **ಶ್ರದ್ಧಯಂತಃ** – ಶ್ರದ್ಧಾವಂತರಾಗಿ, **ಸ್ವಯಂ** – ತಾವೇ, **ಏಕರ್ಷಿಂ** – ಏಕರ್ಷಿಯೆಂಬ ಅಗ್ನಿಯನ್ನು, **ಜುಹ್ವತೇ** – ಹೋಮಮಾಡುವರೋ, **ಯೈಃ ತು** – ಯಾರಿಂದ, **ಶಿರೋವ್ರತಂ** – ಶಿರೋವ್ರತವು (ಅಥರ್ವಣ ಶಾಖೆಯ ವೇದವ್ರತವು), **ವಿಧಿವತ್** – ವಿಧಿಪೂರ್ವಕವಾಗಿ, **ಚೀರ್ಣಂ** – ಆಚರಿಸಲ್ಪಡುವುದೋ, **ತೇಷಾಂ ಏವ** – ಅವರಿಗೆ

ಮಾತ್ರವೇ, ಬ್ರಹ್ಮವಿದ್ಯಾಂ – ಬ್ರಹ್ಮವಿದ್ಯೆಯನ್ನು, ವದೇತ – ಉಪದೇಶಿಸಬೇಕು.

(೧೧) ಆ ಬ್ರಹ್ಮವಿದ್ಯಾ ಸಂಪ್ರದಾನ ವಿಧಿಯು ಈ ಮಂತ್ರದಿಂದ ವಿವರಿಸಲ್ಪಟ್ಟಿದೆ. ಯಾರು ಕ್ರಿಯಾವಂತರೋ, ಶ್ರೋತ್ರಿಯರೋ, ಬ್ರಹ್ಮನಿಷ್ಠರೋ, ಶ್ರದ್ಧೆಯುಳ್ಳವರಾಗಿ ತಾವೇ ಏಕರ್ಷಿ ಎಂಬ ಅಗ್ನಿಯಲ್ಲಿ ಹೋಮಮಾಡುವರೋ, ಯಾರಿಂದ ಶಿರೋವ್ರತವು ವಿಧಿವತ್ತಾಗಿ ಆಚರಿಸಲ್ಪಡುವುದೋ ಅವರಿಗೆ ಮಾತ್ರವೇ ಈ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು.

ಶ್ರುತಿಯು ಕರ್ಮಕಾಂಡದಲ್ಲಿ ಹೇಳಿರುವ ವಿಧಿಗಳು ಉಪನಿಷತ್ ಭಾಗದಲ್ಲಿ ಹೇಳಿರುವ ತತ್ತ್ವ ಸಿದ್ಧಾಂತಗಳಿಗೆ ಅನ್ವಯಿಸುವುದಿಲ್ಲ. ಆದರೆ ಅಲ್ಲಿ ಹೇಳಿರುವುದು ಉಪನಿಷತ್ ವಾಕ್ಯಗಳಿಗೆ ವಿರೋಧವಾಗಿಲ್ಲದಿದ್ದಾಗ ಅಥವಾ ಅವುಗಳ ಅರ್ಥಕ್ಕೆ ಪೂರಕವಾಗಿದ್ದಾಗ ಕರ್ಮಕಾಂಡದ ವಾಕ್ಯಗಳನ್ನೂ ವೇದಾಂತ ಭಾಗದಲ್ಲಿ ಉದ್ಧರಿಸುವುದುಂಟು. ಅದಕ್ಕೆ ಈ ಮಂತ್ರವೇ ಉದಾಹರಣೆ. ಋಕ್ಕಿನಲ್ಲಿ ಅಂದರೆ ಕರ್ಮಕಾಂಡದ ವೇದಮಂತ್ರದಲ್ಲಿ ಹೇಳಿರುವುದನ್ನು ಇಲ್ಲಿ ಉಪನಿಷತ್ ಋಷಿಯು ವಿಚಾರಧಾರೆಯ ಸಮರ್ಥನೆಗಾಗಿ ನಮ್ಮ ಮುಂದಿಟ್ಟಿದೆ.

ವೈದ್ಯಕೀಯ ಶಾಸ್ತ್ರದಲ್ಲಿ ಯಾವ ರೋಗಿಗೆ, ಎಷ್ಟು ಅಳತೆಯ ಅನುಪಾನ, ಯಾವ ಯಾವ ಕಾಲಕ್ಕೆ ಕೊಡಬೇಕು, ಏನೇನು ಪಥ್ಯ ಇತ್ಯಾದಿ ವಿಧಿಗಳಿಲ್ಲದೆ ಯಾವ ಚಿಕಿತ್ಸಾ ವಿಧಾನವೂ ಪೂರ್ಣವಾಗದು. ಹಾಗೆಯೇ ಯಾವ ಯಾವ ರಾಸಾಯನಿಕ ವಸ್ತುಗಳನ್ನು ಎಷ್ಟೆಷ್ಟು ಬಳಸಬೇಕು, ಯಾವಯಾವ ಮುಂಜಾಗ್ರತೆ ಕ್ರಮಗಳನ್ನನುಸರಿಸಬೇಕು ಎಂಬ ನಿಯಮಾವಳಿಗಳಿಲ್ಲದೆ ಯಾವ ವೈಜ್ಞಾನಿಕ ಪ್ರಯೋಗವೂ ನಡೆಯಲಾರದು. ಅದರಂತೆಯೇ ಆಧ್ಯಾತ್ಮಿಕ ಸಾಧನೆಯಲ್ಲಿ ಕೂಡ. ಆತ್ಮಜ್ಞಾನದ ಮಾರ್ಗವನ್ನು ವಿವರಿಸುವ ಈ ಮುಂಡಕೋಪನಿಷತ್ತಿನಲ್ಲೂ ಕೊನೆಯ ಈ ಎರಡು ಮಂತ್ರಗಳಲ್ಲಿ ಮುಂಜಾಗ್ರತೆಯ ಮತ್ತು ಎಚ್ಚರಿಕೆಯ ಕ್ರಮಗಳನ್ನು ವಿವರಿಸಿದೆ.

ಯಾವ ಕೆಲಸವನ್ನು ಕೈಗೊಳ್ಳಬೇಕಾದರೂ, ಆ ಕೆಲಸವನ್ನು ನೈಪುಣ್ಯದಿಂದ ನಿರ್ವಹಿಸುವ ಶಕ್ತಿ ಕರ್ತೃವೆನಿಸುವವನಿಗೆ ಅಗತ್ಯವಾಗಿ ಇರಬೇಕು. ಅದಕ್ಕೆ ತಕ್ಕ ಸಿದ್ಧತೆಗಳೂ ಅವನಲ್ಲಿ ಆಗಿರಬೇಕು. ಆಧ್ಯಾತ್ಮಿಕ ವಿಚಾರದಲ್ಲಂತೂ ಇದರ ಅಗತ್ಯ ಎಷ್ಟು ಹೇಳಿದರೂ ಸಾಲದು. ಇದು ಬ್ರಹ್ಮವಿದ್ಯೆ. ಸಾಮಾನ್ಯವಾದ ಲೌಕಿಕ ವಿದ್ಯೆಯನ್ನು ಕಲಿಯುವುದಕ್ಕೇ ಎಷ್ಟೋಮಟ್ಟಿನ ಪೂರ್ವಸಿದ್ಧತೆಗಳು ಅಗತ್ಯವೆಂದರೆ, ಅಲೌಕಿಕವಾದ ಅನುಭವೈಕ ಪ್ರಮಾಣವಾದ, ಅಂತರಂಗದ ಪರಿಶುದ್ಧತೆಯನ್ನು ನಿರೀಕ್ಷಿಸುವ ಈ ಮಹಾವಿದ್ಯೆಯನ್ನು ಪೂರ್ಣವಾಗಿ ಅರಿಯಬೇಕಾದರೆ ಅಗತ್ಯವಾದ ಯೋಗ್ಯತೆ ಎಷ್ಟಿರಬೇಕೆಂಬುದನ್ನು ನೀವೇ ಊಹಿಸಿ.

ಸಾಮರ್ಥ್ಯ, ಸಾಧನೆಯ · ಕೌಶಲ್ಯ, ಅದಕ್ಕೆ ಪೂರ್ವಭಾವಿಯಾಗಿ ಬೇಕಾದ ಮಾನಸಿಕ ಮಟ್ಟ ಇವುಗಳನ್ನು ಪಡೆದಿರುವವನನ್ನು ವೇದಾಂತದಲ್ಲಿ 'ಅಧಿಕಾರಿ' ಎನ್ನುತ್ತಾರೆ. ವೇದಾಂತಜ್ಞಾನಕ್ಕೆ ಸಾಕಷ್ಟು ಅಧಿಕಾರವಿಲ್ಲದೆ ಅಧ್ಯಯನ ಶ್ರವಣಗಳನ್ನು ಮಾಡುವುದು ಕೇವಲ ಕಾಲಹರಣ ಮತ್ತು ವ್ಯಥಾ ಶಕ್ತಿವ್ಯಯ. ಅದರಿಂದ ಏನೂ ಪ್ರಯೋಜನವಾಗಲಾರದು.

ಈಚೆಗೆ ನಮ್ಮಲ್ಲಿ ಅಧಿಕಾರವಿಲ್ಲದೆ 'ಆಚಾರ್ಯ', 'ಪಂಡಿತ', 'ಸಂನ್ಯಾಸಿ' ಎಂದು ಹೇಳಿಕೊಳ್ಳುವವರು ಬಹುಮಂದಿ. ಇಂತಹವರಿಂದ ಶಾಸ್ತ್ರಕ್ಕೆ ಅಪಚಾರ, ಸಮಾಜಕ್ಕೆ ಕೇಡಲ್ಲದೆ ಯಾವ ಸಾರ್ಥಕವೂ ಆಗಲಾರದು.

ಶಾಸ್ತ್ರಾಧ್ಯಯನಕ್ಕೆ ಅಧಿಕಾರಿ .ಎನಿಸಲು ಅಗತ್ಯವೆಂದು ಈ ಮಂತ್ರದಲ್ಲಿ ಕೊಟ್ಟಿರುವ ಸೂಚನೆಗಳನ್ನು ವಿಮರ್ಶಿಸೋಣ.

### (೧) ಕ್ರಿಯಾವಂತಃ –

ವೈದಿಕಕರ್ಮಗಳು ಆಧ್ಯಾತ್ಮಿಕ ಸಾಧನೆಯಲ್ಲಿ ವಿಶಿಷ್ಟ ಸ್ಥಾನ ಹೊಂದಿವೆ. ಈ ಕರ್ಮಗಳನ್ನು ಫಲಾಪೇಕ್ಷೆ ಇಲ್ಲದೆ ಭಗವದರ್ಪಣ ಬುದ್ಧಿಯಿಂದ ಶ್ರದ್ಧಾಯುಕ್ತನಾಗಿ ಆಚರಿಸಿದಾಗ ಸಾಧಕನಿಗೆ ಚಿತ್ತಶುದ್ಧಿ ಲಭಿಸುತ್ತದೆ. ಶಿಸ್ತು ಸಂಯಮಗಳು ಫಲಿಸುತ್ತವೆ. ಇವು ಚಿತ್ತೈಕಾಗ್ರತೆಗೆ ಹಾಗೂ ಧ್ಯಾನಕ್ಕೆ ಅಗತ್ಯವಾದ ಪೂರ್ವಸಿದ್ಧತೆಗಳು. ಅಲ್ಲದೆ ಕರ್ಮನಿಷ್ಠೆಯು ವ್ಯಕ್ತಿತ್ವದ ಸಮಗ್ರತೆಯ ಸಾಧನೆಗೂ ಮತ್ತು ಪೂರ್ಣವಿಕಾಸಕ್ಕೂ ಉಪಕಾರವಾಗುತ್ತದೆ.*

### (೨) ಶ್ರೋತ್ರಿಯಾಃ –

ಬಹುಕಾಲ ವಿಧಿಪೂರ್ವಕ ಕರ್ಮಾನುಷ್ಠಾನ ಮಾಡಿದಮೇಲೆ ಸಾಧಕನಿಗೆ ಸಂಯಮ, ಏಕಾಗ್ರತೆ ಮತ್ತು ಚಿತ್ತಶುದ್ಧಿಯುಂಟಾಗಿ ಅವನ ಮನಸ್ಸು ಬುದ್ಧಿಗಳ ಸಾಮರ್ಥ್ಯವು ವೃದ್ಧಿಯಾಗುವುದು. ಈ ಸಾಮರ್ಥ್ಯವನ್ನು ಉಪನಿಷತ್ ಅಧ್ಯಯನದಲ್ಲಿ ವಿನಿಯೋಗಿಸಿ ಅವನು ಹೆಚ್ಚಿನ ಜ್ಞಾನವನ್ನು ಸಂಪಾದಿಸುವನು. ಅವನ ಬುದ್ಧಿಯು ಹೆಚ್ಚು ಹೆಚ್ಚು ಸೂಕ್ಷ್ಮವಾದಂತೆ ಶ್ರುತಿಯ ಅರ್ಥಗ್ರಹಿಕೆಯೂ ಅವನಲ್ಲಿ ಅಧಿಕವಾಗುವುದು. ಶಾಸ್ತ್ರಜ್ಞಾನವಿಲ್ಲದ ಕರ್ಮಾನುಷ್ಠಾನವು ವ್ಯರ್ಥ. ಆದ್ದರಿಂದ ಸಾಧಕನು ಜ್ಞಾನಸಂಪನ್ನನಾಗುವುದು ಮುಖ್ಯ. ಅದಕ್ಕಾಗಿ ವೇದಾಧ್ಯಯನವು ಅಗತ್ಯ. 'ಶ್ರೋತ್ರಿಯ' ಎಂದರೆ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿರುವವನು, ಎಂದೇ ಅರ್ಥ.

### (೩) ಬ್ರಹ್ಮನಿಷ್ಠಾಃ –

ಉಪನಿಷತ್ ಜ್ಞಾನಕ್ಕೆ 'ಅಧಿಕಾರಿ'ಯಾಗಲು ಅಗತ್ಯವಾದ ಗುಣಗಳನ್ನು ಈ ಮಂತ್ರದಲ್ಲಿ ಹೇಳುತ್ತಿರುವುದರಿಂದ ಇಲ್ಲಿ 'ಬ್ರಹ್ಮನಿಷ್ಠಾಃ' ಎಂದರೆ ಬ್ರಹ್ಮನಲ್ಲಿಯೇ ನಿಷ್ಠೆಯುಳ್ಳವರು ಎಂದಲ್ಲ; ಪರಬ್ರಹ್ಮನನ್ನು ತಿಳಿಯುವ ಇಚ್ಛೆಯುಳ್ಳವರು, ಎಂದು ಅರ್ಥಮಾಡಬೇಕು. ಬ್ರಹ್ಮಜ್ಞಾನಪ್ರಾಪ್ತಿಯೇ ಶ್ರುತಿಯಲ್ಲಿ ಹೇಳಿರುವ ಜೀವನದ ಗುರಿ. ಪರಬ್ರಹ್ಮನನ್ನು ಕುರಿತೇ ಸತತವಾಗಿ ಚಿಂತಿಸುತ್ತಾ ಅವನನ್ನು ತಿಳಿಯಲು ತವಕಪಡುತ್ತಿರುವವನು 'ಬ್ರಹ್ಮನಿಷ್ಠ'

*ಈ ವಿಚಾರದಲ್ಲಿ ಹೆಚ್ಚಿನ ವಿವರಣೆಗಳಿಗಾಗಿ ಸ್ವಾಮೀಜೀಯವರ ಈಶಾವಾಸ್ಯೋಪನಿಷತ್ತಿನ ಪ್ರವಚನ ಗ್ರಂಥಕ್ಕೆ ಬರೆದಿರುವ ಮುನ್ನುಡಿಯನ್ನು ನೋಡಿ.

**(೪) ಶ್ರದ್ಧಯಂತಃ –**

ಯಾವ ಮಹತ್ಕಾರ್ಯದ ವಿಜಯಕ್ಕೂ ಶ್ರದ್ಧೆಯು ಅಗತ್ಯ. ಗಾಢವಾದ ನಂಬಿಕೆ, ತೀವ್ರವಾದ ಆಸಕ್ತಿಗಳೇ ವಿಜಯಸಾಧನೆಗೆ ಪ್ರಬಲವಾದ ಪ್ರೇರಕಶಕ್ತಿ. ಅವುಗಳಿಲ್ಲದೆ ಮಾಡುವ ಕೆಲಸಗಳು ಕೇವಲ ಯಾಂತ್ರಿಕ ಮತ್ತು ನಿರ್ವೀರ್ಯವಾದದ್ದು. ಆಧ್ಯಾತ್ಮಿಕ ಸಾಧನೆಯಲ್ಲಿ ಶ್ರದ್ಧೆಯ ಪಾತ್ರವನ್ನು ಕುರಿತು ಹಿಂದಾಗಲೇ ಚರ್ಚಿಸಿದೆ.

**(೫) ಸ್ವಯಂ ಜುಹ್ವತ –**

'ತಾವೇ ಯಾರು ಹೋಮಮಾಡುತ್ತಾರೋ' ಎಂದು ಅಭಿಪ್ರಾಯ. ಇಲ್ಲಿ 'ತಾವೇ' (ಸ್ವಯಂ) ಎಂಬುದು ಬಹಳ ಮುಖ್ಯವಾದ ಶಬ್ದ. ಕರ್ಮಗಳನ್ನು ತಾವೇ ಮಾಡಬೇಕೇ ಹೊರತು ಇತರರ ಮೂಲಕವಲ್ಲ, ಹಾಗಲ್ಲದಿದ್ದರೆ ಕರ್ಮದಿಂದಾಗಬೇಕಾದ ಮಾನಸಿಕ ಸಂಸ್ಕಾರ ತಮಗೆ ಖಂಡಿತವಾಗಿಯೂ ಆಗುವುದಿಲ್ಲ. ಹೀಗೊಂದು ದೃಷ್ಟಾಂತಃ ಒಬ್ಬರು ತಮ್ಮ ಮನೆಯಲ್ಲಿ ಇಪ್ಪತ್ತೆಂಟು ವರ್ಷಗಳಿಂದ ಗೀತಾಪಠನ ನಡೆಯುತ್ತಿದೆ, ಎಂದರಂತೆ. ಮಾತಿಗೆ ಮಾತು ಮುಂದುವರಿದಾಗ ಕೊನೆಗೆ ಅವರು ತಿಳಿಸಿದ ಪ್ರಕಾರ – ಯಾರೋ ಒಬ್ಬರು ಶಾಸ್ತ್ರಿಗಳು ಅವರಿಗೆ ಕೊಡುವ ಸಂಭಾವನೆಗೋಸ್ಕರ ನಿತ್ಯವೂ ಬಂದು ತಮ್ಮ ಮನೆಯಲ್ಲಿ ಗೀತಾಪಠನ ಮಾಡುತ್ತಾರಂತೆ. ತಮಗೆ ಮಾತ್ರ ಅದರ ಒಂದು ಶ್ಲೋಕವೂ ತಿಳಿಯದು, ಅರ್ಥವಂತೂ ಮೊದಲೇ ತಿಳಿಯದು, ಎಂದು ಒಪ್ಪಿಕೊಂಡರಂತೆ.

ಇದು ಸುಲಭವೂ ಅಗ್ಗವೂ ಆದ ಪೂಜಾವಿಧಾನ. ಇದರಿಂದ ಆಧ್ಯಾತ್ಮಿಕವಾಗಿ ಯಾವ ಪ್ರಯೋಜನವೂ ಆಗದು.

**(೬) ಶಿರೋವ್ರತಂ –**

ಅಥರ್ವಣ ಶಾಖೆಯಲ್ಲಿ ಹೇಳಿರುವ ಇದೊಂದು ವೇದವ್ರತ. ಈ ವ್ರತದಲ್ಲಿ ಹೋಮದ ಅಗ್ನಿಯನ್ನು ತಲೆಯಮೇಲೆ ಧರಿಸಬೇಕು ಎಂಬುದು ನಿಯಮ.

ಆದರೆ ಈ ಶ್ರುತ್ಯುಕ್ತಿಯು ಆಲಂಕಾರಿಕವಾಗಿ ಹೇಳಿರುವ ಭಾಷಾಶೈಲಿ ಎಂದರಿಯಬೇಕೇ ಹೊರತು ಪದಶಃ ಅರ್ಥಮಾಡಬಾರದು. ಉಪನಿಷತ್ತನ್ನು ಅಧ್ಯಯನ ಮಾಡುವ ಸಾಧಕನು ಅದರ ಅರ್ಥವನ್ನು ಪೂರ್ಣವಾಗಿಯೂ ಸುಸ್ಪಷ್ಟವಾಗಿಯೂ ತಿಳಿಯುವ ಉತ್ಕಟೇಚ್ಛೆಯನ್ನು ಅವನ ಹೃದಯದಲ್ಲಿ ತುಂಬಿಕೊಂಡಿರಬೇಕೆನ್ನುವ ಭಾವವನ್ನು ಆ ರೀತಿ ತಿಳಿಸಿದೆ. ಮನಸ್ಸು, ಬುದ್ಧಿಗಳಲ್ಲಿ ಬಯಕೆಯ ಬೇಗೆ ದಹಿಸುತ್ತಿದ್ದಾಗ ಮಾತ್ರವೇ ಅವನು ತನ್ನ ಸಂಪೂರ್ಣ ಶಕ್ತಿಯನ್ನು ತನ್ನ ಉದ್ದಿಷ್ಟ ಕಾರ್ಯದಲ್ಲಿ ನಿಯೋಜಿಸಬಲ್ಲ. ಈ ಬಗೆಯ ತೀವ್ರ ಆಸಕ್ತಿಯಿಂದ ಸಾಧಕನು ತನ್ನ ಜೀವನ ಸಾರ್ಥಕ್ಯವನ್ನು ನೀಡುವ, ಪರಮಾರ್ಥಸಿದ್ಧಿಯನ್ನು

ಗಳಿಸಿಕೊಡುವ ಉಪನಿಷತ್ ಬೋಧೆಯನ್ನು ಅರ್ಥವತ್ತಾಗಿ ಅರಿತು ಮುಕ್ತಿಯನ್ನು ಹೊಂದಬೇಕೆಂಬುದೇ ಆ ಮಾತಿನ ಇಂಗಿತ.

ಇತ್ತೀಚಿನ ಭಾಷಾಂತರಕಾರರೊಬ್ಬರು ಒಂದು ಸ್ವಾರಸ್ಯವಾದ ಅರ್ಥವನ್ನು ಈ ಶಬ್ದಕ್ಕೆ ಕೊಟ್ಟಿರುತ್ತಾರೆ. ಅವರು 'ಶಿರೋವ್ರತ' ಎಂಬುದು ಸಂನ್ಯಾಸದೀಕ್ಷೆಯ ಸಂಸ್ಕಾರಕ್ಕೆ ಸಂಬಂಧಪಟ್ಟಿರುವುದೆಂದು ಊಹಿಸುತ್ತಾರೆ. ಈ ಊಹೆಗೆ ಈ ಉಪನಿಷತ್ತಿನ ಹೆಸರೇ ಪುಷ್ಟಿಕೊಡುತ್ತದೆ ಎನ್ನುತ್ತಾರೆ. ಮುಂಡಕ ಎಂಬುದು 'ಮುಂಡ' ಎಂಬ ಪದದಿಂದ ಬಂದಿದೆ. 'ಮುಂಡ' ಎಂದರೆ ಕ್ಷೌರಮಾಡಿಸಿಕೊಂಡ ಬೋಳುತಲೆ. ಸಂನ್ಯಾಸದೀಕ್ಷಾಕ್ರಮದಲ್ಲಿ ಮುಂಡನ ಕ್ರಿಯೆಯು ಒಂದು ಮುಖ್ಯ ಸಂಸ್ಕಾರಾಂಗ. ಸಂನ್ಯಾಸಿಗಳೇ ಈ ಉಪನಿಷತ್ತಿನ ಅಧ್ಯಯನಕ್ಕೆ ವಿಶೇಷ ಅಧಿಕಾರಿಗಳಾಗಿರುವುದರಿಂದ ಇದಕ್ಕೆ 'ಮುಂಡಕೋಪನಿಷತ್ತು' ಎಂದು ಹೆಸರು ಬಂದಿರಬಹುದು, ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದಾರೆ.*

ಇದೇನೂ ಅಷ್ಟು ಸಮಂಜಸವಾದ ವಿವರಣೆಯಲ್ಲ ಎಂದು ತೋರುತ್ತದೆ. ಇಷ್ಟು ಸುಂದರವಾದ, ಗಹನವಾದ, ಅರ್ಥಗರ್ಭಿತವಾದ ಈ ಶ್ರೇಷ್ಠ ಉಪನಿಷತ್ತಿಗೆ ಈ ರೀತಿಯ ವಿವರಣೆ ಸಾಧುವಲ್ಲವೆನಿಸುತ್ತದೆ.

ಮೇಲೆ ಹೇಳಿದ ಈ ಆರು ಅರ್ಹತೆಗಳನ್ನು ಪಡೆದಿರುವ ಸಾಧಕನೇ ಈ ಉಪನಿಷತ್ತಿನ ಅಧ್ಯಯನಕ್ಕೆ ಯೋಗ್ಯನಾದ ಅಧಿಕಾರಿ ಎಂದು ಶ್ರುತಿಯು ತಿಳಿಸುತ್ತದೆ. ಒಟ್ಟಿನಲ್ಲಿ ವೇದೋಕ್ತಕರ್ಮಗಳಿಂದ ಚಿತ್ತಶುದ್ಧಿ, ಚಿತ್ತಸಂಸ್ಕಾರ, ಚಿತ್ತೈಕಾಗ್ರತೆ – ಇವುಗಳನ್ನು ಪಡೆದು ಯಾರು ಉತ್ಕಟೇಚ್ಛೆಯಿಂದ ಬ್ರಹ್ಮಜ್ಞಾನವನ್ನು ಬಯಸುತ್ತಾರೋ ಅಂತಹ ಮುಮುಕ್ಷುಗಳಿಗೆ ಮಾತ್ರ ಬ್ರಹ್ಮವಿದ್ಯೆಯಾದ ಈ ಉಪನಿಷತ್ತಿನ ಉಪದೇಶಗಳನ್ನು ಬೋಧಿಸಬೇಕು ಎಂದು ಶ್ರುತಿಯು ಹೇಳುತ್ತದೆ. ಜೀವನದ ಗುರಿ, ಜೀವನದ ಜಂಜಾಟದ ಅರ್ಥ, ಜೀವನದಲ್ಲಿ ಸಂಭವಿಸುವ ಸಕಲ ವಿಧವಾದ ನೋವು, ಸಂಕಟ, ತಳಮಳ, ತೊಳಲಾಟಗಳಿಂದ ವಿಮೋಚನೆ ಪಡೆಯುವ ಮಾರ್ಗ – ಇವುಗಳನ್ನು ತಿಳಿಯಬಯಸುವ ಶ್ರದ್ಧಾವಂತ ಸಾಧಕರಿಗೆ ಈ ಉಪನಿಷತ್ತು ಉತ್ಕೃಷ್ಟ ಕೈಪಿಡಿಯಾಗಿದೆ.

## ಉಪಸಂಹಾರ

**ತದೇತತ್ ಸತ್ಯಮೃಷಿರಂಗಿರಾಃ ಪುರೋವಾಚ**
**ನೈತದಚೀರ್ಣವ್ರತೋಽಧೀತೇ ।**
**ನಮಃ ಪರಮಋಷಿಭ್ಯೋ**
**ನಮಃ ಪರಮಋಷಿಭ್ಯಃ ॥** ೧೧

**ತತ್ ಏತತ್** – ಆ ಈ, **ಸತ್ಯಂ** – ಸತ್ಯವನ್ನು, **ಪುರಾ** – ಪೂರ್ವದಲ್ಲಿ, **ಅಂಗಿರಾಃ**

* ಈ ಗ್ರಂಥದ ಮುನ್ನುಡಿಯನ್ನು ನೋಡಿ.

**ಋಷಿಃ** – ಅಂಗಿರಸ್ ಎಂಬ ಋಷಿಯು, **ಉವಾಚ** – ಹೇಳಿದನು, **ಅಚೀರ್ಣವ್ರತಃ** – ವ್ರತವನ್ನು ಆಚರಿಸದಿರುವವನು, **ಏತತ್** – ಇದನ್ನು, **ನ ಅಧೀತೇ** – ಅಧ್ಯಯನ ಮಾಡತಕ್ಕದ್ದಲ್ಲ, **ಪರಮ ಋಷಿಭ್ಯಃ** – ಋಷಿಶ್ರೇಷ್ಠರಿಗೆ, **ನಮಃ** – ನಮಸ್ಕಾರ, **ಪರಮಋಷಿಭ್ಯಃ** – ಋಷಿಶ್ರೇಷ್ಠರಿಗೆ, **ನಮಃ** – ನಮಸ್ಕಾರ.

(೧೧) ಈ ಸತ್ಯವನ್ನು (ಅಕ್ಷರನೆಂಬ ಪುರುಷನಾದ ಸತ್ಯವನ್ನು) ಅಂಗಿರಸ್ಸು ಎಂಬ ಋಷಿಯು ಪೂರ್ವದಲ್ಲಿ (ತನ್ನ ಶಿಷ್ಯನಾದ ಶೌನಕನಿಗೆ) ಹೇಳಿದನು. ವ್ರತವನ್ನು ಆಚರಿಸದವನು ಈ ಉಪನಿಷತ್ತನ್ನು ಅಧ್ಯಯನ ಮಾಡತಕ್ಕದ್ದಲ್ಲ. ಪರಮ ಋಷಿಗಳಿಗೆ (ಬ್ರಹ್ಮವನ್ನು ಯಾರು ನೇರವಾಗಿ ಅರಿತುಕೊಂಡರೋ ಅವರು ಪರಮ ಋಷಿಗಳು) ನಮಸ್ಕಾರ. ಪರಮ ಋಷಿಗಳಿಗೆ ನಮಸ್ಕಾರ

**ತದೇತತ್** –

ಆ ಇದು, ಅಥವಾ ಆ, ಈ ಎಂಬ ನಿರ್ದೇಶಕ ಶಬ್ದಗಳು ಉಪನಿಷತ್ತಿನಲ್ಲಿ ಬಹುಳವಾಗಿ ಬಳಸಲ್ಪಟ್ಟಿರುವ ಶಬ್ದಶೈಲಿ. ಈ ರೀತಿಯ ಬಳಕೆ ಮತ್ತೆಲ್ಲಿಯೂ ನಮಗೆ ಅಷ್ಟಾಗಿ ಕಂಡುಬರುವುದಿಲ್ಲ. ಅದರ ಪ್ರಯೋಗವು ವೇದಾಂತದಲ್ಲಿ ಹಿಂದೆ ಹೇಳಿರುವ ಪ್ರಕ್ರಿಯೆಗಳನ್ನು ಸೂಚಿಸಿ ಅದೇ ಇದು ಎಂಬ ಭಾವವನ್ನು ಪ್ರಕಟಪಡಿಸಿ, ಮುಂದೆ ಅದರ ವಿಸ್ತರಣಾರ್ಥವನ್ನು ಕೊಡುವುದಕ್ಕೆ ಬಹುಳ ಉಪಯುಕ್ತವಾಗಿದೆ. ಶ್ರೀಶಂಕರರು ಆ ಶಬ್ದಗಳು ಬಂದಾಗಲೆಲ್ಲಾ ಅವುಗಳ ಅರ್ಥವನ್ನು ಬೇಸರಪಡದೆ ಪುನಃ ಪುನಃ ವಿವರಿಸುತ್ತಾರೆ.

ಆಧ್ಯಾತ್ಮಿಕ ಗುರಿಯನ್ನು ಅರಸುವ ಶಿಷ್ಯನು ತನ್ನ ಬಾಳಿನಲ್ಲಿ ತುಂಬು ಜೀವನವನ್ನು ನಡೆಸಿ ಎಲ್ಲಾ ವಿಧವಾದ ಸುಖ ಸೌಭಾಗ್ಯ ಸಂತೋಷಗಳನ್ನನುಭವಿಸಿ ಕೊನೆಯಲ್ಲಿ ಅವುಗಳ ನಿಸ್ಸಾರತೆಯನ್ನೂ, ಅಶಾಶ್ವತೆಯನ್ನೂ ಅನುಭವದಿಂದ ಅರಿತು ಯಾವುದಾದರೊಂದು ಶಾಶ್ವತ ಸುಖಶಾಂತಿಧಾಮ ಒಂದಿದೆಯೇ ಎಂದು ತಿಳಿಯಲು ಕಾತರನಾಗಿ ಹೊರಟಿರುತ್ತಾನೆ. ಜೀವನಕ್ಕೆ ಒಂದು ಉತ್ಕೃಷ್ಟ ಗುರಿಯಿದೆ, ಅದರ ಸಾಧನೆಯೇ ಬದುಕಿನ ಉದ್ದೇಶ, ಸಾರ್ಥಕ್ಯ ಎಂದು ಅವನು ಅರಿತಿರುತ್ತಾನೆ. ಆದರೆ ಅದು ಯಾವುದು, ಅದನ್ನು ಸಾಧಿಸುವ ಬಗೆ ಹೇಗೆ ಎಂಬುದನ್ನು ತಿಳಿಯಲು ತವಕಪಡುತ್ತ ಬ್ರಹ್ಮನಿಷ್ಠನೂ, ಶ್ರೋತ್ರಿಯನೂ ಆದ ಗುರುವನ್ನು ಅರಸಿ ಅವನ ಆಶ್ರಮವನ್ನು ಸಮೀಪಿಸುತ್ತಾನೆ. ಗುರುವನ್ನು ಅವನು ಕೇಳುವ ಪ್ರಶ್ನೆ ಇದು: "ಓ ಗುರುವೇ, ನಿತ್ಯವೂ, ಶಾಂತಿಸುಖದಾಯಕವೂ, ಪರಿಪೂರ್ಣವೂ, ಪೂರ್ಣತೃಪ್ತಿಯುತವೂ ಆದ ಜೀವನದ ಪರಿಯೊಂದುಂಟೇ ?" ಅದಕ್ಕೆ ಉತ್ತಮ ಗುರುವಿನ ಉತ್ತರ: "ಉಂಟು, ತತ್ತ್ವಮಸಿ. ಯಾವ ಶಾಶ್ವತ ಶಾಂತಿ, ಪೂರ್ಣತೃಪ್ತಿ ನಿರಾಮಯ ಆನಂದಗಳನ್ನು ಹುಡುಕುತ್ತಿದ್ದೀಯೋ ಅದೇ ನಿನ್ನ ನಿಜಸ್ವರೂಪ. ಆದರೆ ನೀನು ಆ ತಾತ್ತ್ವಿಕ ಪ್ರಜ್ಞಾಪೂರ್ಣಸ್ಥಿತಿಗೆ ಏರಿ ಅದನ್ನು ಅನುಭವಪೂರ್ವಕವಾಗಿ ಅರಿಯಬೇಕು, ಅಷ್ಟೆ !"

ಜಿಜ್ಞಾಸುವಾದ ಶಿಷ್ಯನು ಪಡೆದುಕೊಳ್ಳಬೇಕಾದ ಜೀವನದ ಗುರಿಯು ದೂರದಲ್ಲಿರುವಂತೆ ತೋರುವ ಜೀವನತತ್ತ್ವವಾದ್ದರಿಂದ ಆ ಧ್ಯೇಯವನ್ನು 'ಅದು'

